ಆಂತರ ಭಾರತೀಯ ಪುಸ್ತಕ ಮಾಲೆ

# ಬಾಲ್ಯದ ನೆನಪುಗಳು

ಕಮಲಾ ಸುರಯ್ಯಾ

ಅನುವಾದ

ನಾ. ದಾಮೋದರ ಶೆಟ್ಟಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮುಖ ಪುಟ ಚಿತ್ರ: ವಿಕಾಸ್ ಭಟ್ಟಾಚಾರ್ಜಿ ಅವರ ವರ್ಣಚಿತ್ರ ಆಧಾರಿತ

ISBN 81-237-3472-7

ಮೊದಲ ಮುದ್ರಣ : 2001 (ಶಕ 1922)



Original Title: Balyakala Smaranakal (*Malayalam*)

Kannada Translation: Balyada Nenapugalu

**ರೂ. 55.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110016- ಇವರಿಂದ ಪ್ರಕಟಿತ.

# ಮುನ್ನುಡಿ

ಹಲವು ವರ್ಷಗಳಿಂದ ಕಥೆ, ಕವಿತೆ ಬರೆದು ಬರೆದು ಸಾಕಾಗಿದೆ. ಬರವಣಿಗೆ ನಿಲ್ಲಿಸಬೇಕು ಇಲ್ಲವೇ, ಬೇರೆಯದೇ ಆದ ಮತ್ತಾವುದಾದರೂ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳಬೇಕು ಅನ್ನಿಸುತ್ತಿತ್ತು. ಡಾ. ರಮಣಲಾಲ್ ಪಟೇಲ್ ಪ್ರಸಿದ್ಧ ಮನಶ್ಶಾಸ್ತ್ರಜ್ಞರು; ನಮ್ಮ ಕುಟುಂಬದ ಸ್ನೇಹಿತರು. ಒಮ್ಮೆ ಅವರು, ಕಳೆದ ದಿನಗಳ ಅಂಕುಡೊಂಕು ರಸ್ತೆಗುಂಟ ಗಮನವನ್ನು ಕೇಂದ್ರೀಕರಿಸಿ ಮಂಥನ ನಡೆಸುವ ಸಲಹೆ ನೀಡಿದ್ದರು. ನಾನು ಮರೆತು ಹೋದ ದಿನಗಳ ಚದುರಿದ ಚಿತ್ರಗಳನ್ನು ಒಂದೊಂದಾಗಿ ನೆನಪಿಸಿ ಅದನ್ನು ಜೋಡಿಸಲು ಪ್ರಯತ್ನಿಸಿದೆ. ವಿಕಾಸಕ್ರಮದಲ್ಲಿ ನಾನು ಕಳೆದುಹೋದ ದಿನಗಳನ್ನು ಮತ್ತೊಮ್ಮೆ ಜೀವಂತಗೊಳಿಸಬೇಕು ಎಂದು ನಿರ್ಧರಿಸಿದೆ.

ಪ್ರತಿಯೊಂದು ಅಧ್ಯಾಯವನ್ನು ಒಂದು ಸ್ವಸಂಪೂರ್ಣ ಕಥೆ ಮಾಡಬೇಕು ಎಂದು ತೀರ್ಮಾನಿಸಿದೆ. ಪಾಶ್ಚಿಮಾತ್ಯ ಬದುಕಿನ ಪ್ರಭಾವದ ಕಲ್ಕತ್ತಾ ಹಾಗೂ ಸಮುದ್ರ ತೀರದ ಒಂದು ಗ್ರಾಮದ ನಡುವೆ ಕಳೆದ ಅಸಾಧಾರಣ ಬಾಲ್ಯದ ವಿವರವಾದ ಚಿತ್ರಣ ನೀಡಲು ಪ್ರಯತ್ನಿಸಿದೆ. ಮೂಲ ಮಲಯಾಳಂ ಕೃತಿಯಲ್ಲಿ ನಾನು ಮಲಬಾರಿನ ಸ್ಥಳೀಯ ಶಬ್ದ, ವಾಕ್ಯ ಬಳಸಿದ್ದೇನೆ. ಆ ಗ್ರಾಮೀಣ ಸೊಗಡು ಅನುವಾದಗಳಲ್ಲಿಯೂ ಉಳಿದೀತೆ ಎಂಬ ಅನುಮಾನ ನನಗಿದೆ.

ನನ್ನ ಬಾಲ್ಯ ಬ್ರಿಟಿಷ್ ಆಡಳಿತದ ಭಾರತದಲ್ಲಿ ಕಳೆದಿದೆ. ಆದ್ದರಿಂದ ಹೊಸ ಪೀಳಿಗೆಯ ಓದುಗರಿಗೆ ಆಗಿನ ಕಾಲದ ಒಂದಷ್ಟು ಪರಿಚಯವೂ ಆಗುತ್ತದೆ ಎಂದು ನನ್ನ ಭಾವನೆ.

**ಕಮಲಾ ಸುರಯ್ಯಾ**

ಅಜ್ಜಿ ನನ್ನನ್ನು ಮೊದಲಸಲ ಅರಮನೆಯ ಒಳಕ್ಕೆ ಕೊಂಡೊಯ್ದ ದಿನ ನನಗಿಂದೂ ಚೆನ್ನಾಗಿ ನೆನಪಿದೆ. ಜಾತಿ ತಾರತಮ್ಯದ ಬಗೆಗಿನ ಮೊದಲ ಪಾಠವನ್ನು ನಾನು ಕಲಿತದ್ದೂ ಆಗಲೆ.

ಅರಮನೆಯ ಮಹಾದ್ವಾರದಲ್ಲಿ ಎರಡು ಶಿಲಾವಿಗ್ರಹಗಳನ್ನು ಕಂಡ ನೆನಪು. ಅವರು ದ್ವಾರಪಾಲಕರೆಂಬುದಾಗಿ ಅಜ್ಜಿ ನನಗೆ ತಿಳಿಸಿದ್ದರು. ಕಲ್ಕತ್ತಾದ ಪಾರ್ಕ್‌ಸ್ಟ್ರೀಟ್‌ನಲ್ಲಿ ನನ್ನ ಅಪ್ಪ ಅಮ್ಮಂದಿರು ವಾಸಿಸುತ್ತಿದ್ದ ಮನೆಯ ಗೇಟಿನ ಬಳಿ ಕಾಣುತ್ತಿದ್ದ ಕಾವಲುಗಾರನನ್ನು ನಾನು ಪ್ರೀತಿಪೂರ್ವಕ ನೆನಪಿಸಿಕೊಂಡೆ. ಜೀವಂತ ದ್ವಾರಪಾಲಕ. ಹಗ್ಗದ ಖೋಲಿಯಲ್ಲಿ ನನ್ನನ್ನು ತನ್ನೊಂದಿಗೆ ಕುಳ್ಳಿರಿಸಿಕೊಂಡು ನನ್ನ ಟೀಚರ ಬಗ್ಗೆಯೂ ದಾದಿಯ ಬಗ್ಗೆಯೂ ಪ್ರಶ್ನೆಗಳನ್ನು ಕೇಳುತ್ತಿದ್ದ ಪ್ರಿಯ ಸ್ನೇಹಿತ.

ಅರಮನೆಯ ಮೊಗಸಾಲೆಯ ದಿಣ್ಣೆಗೆ ಆತು ಮಲಗಿಯೂ ನೆಲದಲ್ಲಿ ಅತ್ತಿತ್ತ ಅಲೆದಾಡುತ್ತಲೂ ಇದ್ದ ಅನೇಕ ಅರೆನಗ್ನ ಪುರುಷರು ನನ್ನ ಕಣ್ಣೆದುರು ಪ್ರತ್ಯಕ್ಷರಾದರು. ಅಂಗಿ ಧರಿಸದ ಅವರೆಲ್ಲ ಹಣೆಯಲ್ಲಷ್ಟೇ ಅಲ್ಲ; ಎದೆಯ ಮೇಲೂ ಚಂದನ ಹಚ್ಚಿದ್ದರು. ಮಳಲಿನಲ್ಲಿ ತಾಂಬೂಲದ ರಸ ಹರಡಿಕುಳಿತಿತ್ತು.

ಅಜ್ಜಿ ಮುಖದ್ವಾರದ ಮೆಟ್ಟಲುಗಳನ್ನು ಪೂರ್ಣವಾಗಿ ಅವಗಣಿಸಿ ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡು ಉತ್ತರದ ಚಾವಡಿಯ ಕಡೆಗೆ ಹೆಜ್ಜೆ ಹಾಕಿದರು. ಒಳಗಣ ಕತ್ತಲಲ್ಲಿ ಸರೋವರದ ರಾಜಹಂಸಗಳಂತೆ ಮೃದುಲವಾದ ಹೊಳಪಿನಿಂದ ಕೂಡಿದ ಕೆಲವು ಸುಂದರಿಯರು ಕಾಣಿಸಿಕೊಂಡರು. ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಬೀಸಣಿಗೆಯಿತ್ತು. ನಮ್ಮನ್ನು ಕಂಡದ್ದೇ ತಡ, ಬೀಸಣಿಗೆಗಳ ಚಲನೆ ನಿಂತಿತು. ಅವರು ಬಾಗಿಲ ಬಳಿಗೆ ಧಾವಿಸಿ ಬಂದರು.

'ಕೊಚ್ಚುವಾ ? ಇದ್ಯಾರು ಈ ಹುಡುಗಿ ?'

'ಇದು ಬಾಲಾಳ ಮಗಳು, ಕಮಲ, ಬೇಸಿಗೆಯ ರಜೆಯಲ್ಲಿ ಬಂದದ್ದು. ಮಿಥುನ ಹನ್ನೆರಡರಂದು ಕಲ್ಕತ್ತೆಗೆ ವಾಪಾಸು ಹೋಗ್ತಾರೆ.'

'ಕೂತುಕೊ ಕೊಚ್ಚೂ.'

ಹುಲಿಯ ಚಿತ್ರವಿದ್ದ ಒಂದು ಹುಲ್ಲುಚಾಪೆಯನ್ನು ನಮಗಾಗಿ ಒಬ್ಬಾಕೆ ನೆಲದಲ್ಲಿ ಹಾಸಿದರು. ಅವರಾರೂ ನಮ್ಮ ಚಾಪೆಯಲ್ಲಿ ಕುಳಿತುಕೊಳ್ಳಲಿಲ್ಲ. ಅವರು ಮಂಚದಲ್ಲಿ, ದಿಣ್ಣೆಯ ಮೇಲೆ, ಬರಿನೆಲದಲ್ಲಿ ಕುಳಿತುಕೊಂಡು ನಮ್ಮನ್ನು ನೋಡಿ ಮುಗುಳ್ನಗೆ ಬೀರುತ್ತಲೂ ಬೀಸಣಿಗೆಯಿಂದ ಬೀಸಿಕೊಳ್ಳುತ್ತಲೂ ಇದ್ದರು. ಶ್ವೇತ ವಸ್ತ್ರವೂ ಬೀಸಣಿಗೆಗಳೂ ನಿಮಿತ್ತವಾಗಿ ಅವರು ಬಿಳಿಯ ಹಕ್ಕಿಗಳಂತೆ ನನಗೆ ತೋರಿಹೋದರು. ಸ್ವರ್ಗದಲ್ಲಿ ಹಾರುವ ಹಕ್ಕಿಗಳು. ಅವರಲ್ಲಿ ಪ್ರತಿಯೊಬ್ಬರಿಗೂ ನೀಳವಾದ ಗುಂಗುರು ಕೂದಲೂ ಹೊಳೆಯುವ ಕಣ್ಣುಗಳೂ ಕೆಂಪು ತುಟಿಗಳೂ

ಇದ್ದುವು. ಅವರು ಅಡ್ಡಿಕೆ, ಜೋಡುಬಳೆ ಇತ್ಯಾದಿಗಳನ್ನು ಧರಿಸಿದ್ದರು. ಅವರು ನನ್ನನ್ನು ನೋಡುತ್ತ ಮತ್ತೆ ಮತ್ತೆ ಮುಗುಳ್ನಕ್ಕರು.

'ಬಾಲಾಳ ಬಣ್ಣ ಇಲ್ಲ, ಅಲ್ವೇ ?'

'ಆದ್ರೆ ಮಾಧವನ್ ನಾಯರ ಕಪ್ಪೂ ಇಲ್ಲ.'

'ಕೂದಲು ಚೆನ್ನಾಗಿದೆ. ಕೊಚ್ಚೂ, ಈ ಮಗೂನ ತಲೆಗೆ ಯಾವ ಎಣ್ಣೆ ಉಪಯೋಗಿಸೋದು ?'

'ಕಾಯಿಸಿದ ತೆಂಗಿನೆಣ್ಣೆ. ಪ್ರತೀವರ್ಷ ನಾನೇ ತಯಾರಿಸಿ ಕಲ್ಕತ್ತಾಕ್ಕೆ ಕೊಟ್ಟು ಕಳುಹಿಸೋದು. ಅಲ್ಲದೆ ಅಲ್ಲಿ ಅದನ್ನೆಲ್ಲ ತಯಾರಿಸೋ ಸೌಕರ್ಯ ಬೇಕಲ್ಲ.'

'ಹೀಗೊಂದು ಅಜ್ಜಿ ಸಿಕ್ಕಿದ್ದು ಮಗುವಿನ ಭಾಗ್ಯ'

'ಭಾಗ್ಯವೆ. ಏನೂ ಸಂಶಯವಿಲ್ಲ.'

'ಅಮ್ಮ ತಂಬುರಾನ್ ನಿದ್ದೆಯಲ್ಲಿದ್ದಾರೆಯೆ ?'

'ಇಲ್ಲ. ಅಮ್ಮ ಈಗ ಬಂದಾರು.'

'ಅಮ್ಮ ತಂಬುರಾನ್ ಎಂದು ಹೇಳಲಾದ ಹೆಂಗಸು ರವಿಕೆ ತೊಟ್ಟಿರಲಿಲ್ಲ. ಅವರು ಒಂದು ಕಿರುಪಂಚೆಯಿಂದ ತನ್ನ ಎದೆಯನ್ನು ಮುಚ್ಚಿಕೊಂಡಿದ್ದರು. ಅವರು ದಪ್ಪಪುಷ್ಪವಾಗಿ, ಬೆಳ್ಳಗೆ, ಅಲ್ಲಲ್ಲಿ ನರೆತ ಕೂದಲುಳ್ಳ ಹೆಂಗಸಾಗಿದ್ದರು. ಅವರು ನನ್ನನ್ನೇ ದುರುಗುಟ್ಟಿ ನೋಡುತ್ತ ಅಜ್ಜಿಯನ್ನು ಕೇಳಿದರು:

'ಇದು ಬಾಲಾಳ ಮಗಳಲ್ವೆ ?'

'ಹೌದು.'

'ಕಮಲಾಂತಲ್ವೆ ಹೆಸರು ?'

'ಕಮಲಾಂತ ಕರೀತಾರೆ.'

'ಅವಳೇ ಮಾತಾಡ್ಲಿ. ನಾನು ಕೇಳೋದಕ್ಕೆಲ್ಲಾ ನೀನು ಉತ್ತರ ಹೇಳೋದ್ಯಾಕೆ ಕೊಚ್ಚೂ. ಹುಡುಗಿಗೆ ಮಲಯಾಳಂ ಮಾತಾಡ್ಲಿಕ್ಕೆ ಬರೋದಿಲ್ವೆ ?'

'ಓ, ಅವಳು ಮಲಯಾಳಂ ಮಾತಾಡ್ತಾಳೆ. ಅವರು ಮನೆಯಲ್ಲೂ ಮಲಯಾಳಂನಲ್ಲೇ ಮಾತನಾಡೋದು.'

'ಕಲ್ಕತ್ತಾದಲ್ಲಿ ಬೇರೆ ಭಾಷೆಗಳೇ ಜಾಸ್ತಿ, ಅಲ್ವೇ ? ಇಂಗ್ಲೀಷ್, ಬಂಗಾಳಿ ಇತ್ಯಾದಿ'

'ಹೌದು.'

'ಶಾಲೆಗೆ ಹೋಗ್ತೀಯಾ ಮಗು ?'

'ಹೌದು.'

'ಯಾವ ಶಾಲೆಗ ಹೋಗ್ತಿ ?'

'ಸೈಂಟ್ ಸಿಸಿಲಿಯಸ್ ಯುರೋಪಿಯನ್ ಸ್ಕೂಲ್.'

'ಅದ್ಯಾಕೆ ಈ ಮಗುವನ್ನು ಮಾಧವನ್ ನಾಯರ್ ಯುರೋಪ್ಯನ್ ಸ್ಕೂಲಿಗೆ ಕಳುಹಿಸೋದು ?'

'ಅದೆಲ್ಲ ಮಾಧವನ್ ನಾಯರ್‌ರ ಇಷ್ಟ.'

'ನಿಂಗೆ ಈ ಊರಲ್ಲೇ ನಿಂತರೆ ಸಾಲದೆ ಮಗು ? ಎಳನೀರು ಕುಡೀಬಹುದು. ಮಾವಿನ ಹಣ್ಣು ತಿನ್ನಬಹುದು. ನಂಬಿಡಿ ಮೇಷ್ಟ್ರ ಕೈಯಿಂದ ಮಲಯಾಳಂ

ಕಲೀಬಹುದು. ಕೊಚ್ಚೂಗೆ ಒಂದು ಜೊತೆಯೂ ಆಯ್ತು. ಏನು ? ಕಮಲ ಇನ್ನು ಕಲ್ಕತ್ತೆಗೆ ಹೋಗೋದು ಬೇಡಾಂತ ಮಾಡಬಹುದೆ ?' ಆ ಕ್ಷಣಕ್ಕೆ ನನಗೆ ಅಮ್ಮ ತಂಬುರಾನರ ಬುದ್ಧಿಶಕ್ತಿಯ ಬಗ್ಗೆ ಗಾಢವಾದ ಅಭಿಮಾನ ಮೂಡಿತು. ನನಗೆ ತಂದೆಯೆಂದರೆ ಭಯ. ಅಷ್ಟು ಭಯವನ್ನು ಅಮ್ಮನ ಸೋದರಮಾವನೂ ನನ್ನಲ್ಲಿ ಬಿತ್ತಿರಲಿಲ್ಲ. ತಂದೆಗೆ ತನ್ನ ಮಕ್ಕಳ ಬಗ್ಗೆ ಬಹಳಷ್ಟು ನಿರೀಕ್ಷೆಗಳಿದ್ದುವು. ಆ ನಿರೀಕ್ಷೆಯ ಮಟ್ಟಕ್ಕೆ ಏರುವುದಕ್ಕೆ ನನಗೆ ಯಾವತ್ತೂ ಸಾಧ್ಯವಾಗಿರಲಿಲ್ಲ. ಅಪ್ಪನ ಸಾನ್ನಿಧ್ಯದಲ್ಲಿ ನಾನು ಕೀಳರಿಮೆಯಿಂದ ಹೊತ್ತಿ ಹೋಗೆಯುತ್ತಿದ್ದೆ. ಮಾವನ ಕಣ್ಣಿಗೆ ನಾನು ಯಾವತ್ತೂ ಬುದ್ಧಿವಂತಳೇ ಆಗಿದ್ದೆ.

ಅರಮನೆಯಿಂದ ನೈಯಪ್ಪ ತಿಂದು ಹಿಂದಿರುಗುತ್ತಿದ್ದಾಗ ಅಜ್ಜಿ ಹೇಳಿದರು, ಅವರು ಯಾರನ್ನೂ ಮುಟ್ಟುವ ಅಧಿಕಾರ ನಮಗಿಲ್ಲಾಂತ. ಅವರ ಜಾತಿಯೂ ನಮ್ಮ ಜಾತಿಯೂ ಬೇರೆ ಬೇರೆ ಎಂದೂ ಅಜ್ಜಿ ಹೇಳಿದರು.

'ನಾನು ಆ ಅಮ್ಮ ತಂಬುರಾನ್‌ರನ್ನು ಮುಟ್ಟಿದರೆ ಏನಾದೀತು ?'

'ಮುಟ್ಟಿದರೆ ಅಮ್ಮ ತಂಬುರಾನ್ ಮುಳುಗು ಸ್ನಾನ ಮಾಡಬೇಕಾದೀತು. ನಾವು ನಾಯರ್ ಜಾತಿಯವರಲ್ವೆ ? ನಾಯರ್ ಜಾತಿಯವರು ಮುಟ್ಟಿದರೆ ಅವರು ಅಶುದ್ಧರಾಗೋದಿಲ್ವೆ ?'

'ಅಜ್ಜಿ ಜಾತಿಯ ತಾರತಮ್ಯವನ್ನು ವಿಶದೀಕರಿಸಿಕೊಟ್ಟರು. ಮೊದಲು ನಂಬೂದಿರಿಗಳು, ನಂತರ ತಂಬುರಾನ್‌ರು. ಅವರ ಕೆಳಗೆ ನಾಯರ್, ಬಿಲ್ಲವರು, ಮಲೆಕುಡಿಯರು, ಹೊಲೆಯರು, ಕೊರಗರು, ಬೇಟೆಕುರುಬರು. ಪಾಪ, ಬೇಟೆಕುರುಬರಿಗೆ ಗದ್ದೆಯ ಆಚೆಭಾಗದಲ್ಲಿ ನಿಂತು 'ನಾಲಪ್ಪಾಟ್ಟಿನ ದೊಡ್ಡ ತಂಬುರಾಟ್ಟೀ' ಎಂದು ಕೂಗಿ ಕರೆಯುವುದಕ್ಕೆ ಮಾತ್ರ ಅವಕಾಶವಿತ್ತು. ದೊಡ್ಡ ಮರಗಳ ಎತ್ತರದ ಕೊಂಬೆಗಳ ಮೇಲೆ ಕಾಣದಂತೆ ಕುಳಿತು ಕೂಗುವ ಹಕ್ಕಿಗಳಂತೆ ಬೇಟೆಕುರುಬರು. ಅವರನ್ನು ನೋಡಬೇಕೆಂಬ ಬಯಕೆಯಾಯಿತು. ಆದರೆ ಅವರಿಗೆ ಗೆರಸೆಯಲ್ಲಿ ಅಕ್ಕಿ ಕೊಂಡುಹೋಗಿ ಕೊಡುತ್ತಿದ್ದ ಬಿಲ್ಲವ ಹೆಂಗಸರು ನನ್ನನ್ನು ಒಮ್ಮೆಯಾದರೂ ಕರೆದೊಯ್ಯಲಿಲ್ಲ.

'ಚಿಕ್ಕ ತಂಬುರಾಟ್ಟಿ; ನೀವು ಬೇಟೆಕುರುಬರನ್ನು ಕಂಡರೆ ಕಿರುಚಿಕೊಳ್ಳುತ್ತೀರಿ.'

'ಬೇಟೆಕುರುಬರು ನೋಡೋದಕ್ಕೆ ಗೂಬೆ ಥರ ಇರ್ತಾರೆ.'

'ಇದಕ್ಕೆ ಮೊದಲು ಗೂಬೆಯನ್ನು ನೋಡ್ಲಿಲ್ವೆ ? ನಾಗಬನದ ಕಾಸರಕ್ಕನ ಮರದ ಮೇಲೆ ಕೂತು.. ಕೂಗು.. ಆ ಕೂಗು.. ಆ..ಂತತ ಬೊಬ್ಬೆ ಮಾಡೋ ಪಕ್ಷಿ. ಅದರ ಹಾಗೆ ಇರ್ತಾರೆ ಬೇಟೆಕುರುಬರು. ಚಿಕ್ಕ ತಂಬುರಾಟ್ಟಿಯೋರನ್ನು ಈ ಜನ್ಮದಲ್ಲಿ ಬೇಟೆಕುರುಬರತ್ರ ನಿಮ್ಮ ಗುಲಾಮಳಾದ ನಾನು ಕೊಂಡು ಹೋಗ್ಲಿಕ್ಕಿಲ್ಲ. ಅವ್ರನ್ನು ತೋರಿಸಿಕೊಡ್ಲಿಕ್ಕೆ ಕೊಂಡುಹೋಗೋದು ನನ್ನಿಂದ ಆಗದ ಕೆಲಸ. ಒಂದು ದಿನ ತರಿಯಕ್ಕಿಯ ಗಂಜಿ ಉಣ್ಣುವುದರೆಡೆಗೆ ಹಪ್ಪಳ ಬಡಿಸಲೆಂದು ಅಜ್ಜಿ ಮುಂದೆ ಬಂದಾಗ ನಾನು ಹೇಳಿದೆ:

'ಈ ಗುಲಾಮಳಿಗೆ ಹಪ್ಪಳ ಬೇಡ.'

ಅಜ್ಜಿ ಜೋರಾಗಿ ನಕ್ಕಳು:

'ನೀನ್ಯಾಕೆ ಗುಲಾಮಳೂಂತ ಹೇಳಿಕೊಳ್ಳೋದು ಕಮಲ ? ನನಗೇಂತ ಹೇಳಿದ್ರೆ ಸಾಲದೆ ?'

'ವಳ್ಳಿ ಹೇಳ್ತಾಳಲ್ಲ, ಗುಲಾಮಳೂಂತ.'

'ವಳ್ಳಿ ಬಿಲ್ಲವರೋಳಲ್ವೆ ? ನೀನು ಬಿಲ್ಲವರೋಳಲ್ಲಲ್ಲ.'

'ನಾನ್ಯಾವ ಜಾತಿ ?'

'ನಿನ್ನ ಜಾತಿ ಯಾವುದೂಂತ ಇನ್ನೂ ನಿನಗೆ ಗೊತ್ತಾಗಲಿಲ್ವೆ ? ಇಲ್ಲೀ ತನಕ ಗೊತ್ತಾಗದೇ ಹೋದ್ರೆ ಇನ್ನು ಯಾರು ಹೇಳಿದ್ರೂ ಗೊತ್ತಾಗಲಿಕ್ಕಿಲ್ಲ.' ಅಜ್ಜಿ ಹೇಳಿದ ಮಾತಿನ ಅರ್ಥ ಈಗಷ್ಟೆ ನನ್ನ ಅನುಭವಕ್ಕೆ ಬರತೊಡಗಿದ್ದು.

ಒಮ್ಮೆ ತಂದೆಯವರು ಕಲ್ಕತ್ತಾದಿಂದ ಬಂದಿದ್ದಾಗ ನಾಗಬನದಲ್ಲಿ ಅಡರಿದ್ದ ಬಳ್ಳಿಗಳನ್ನೂ ಗೆಲ್ಲುಗಳನ್ನೂ ತುಂಡರಿಸಿ ತೆಗೆದು ಅದನ್ನು ಮಕ್ಕಳಿಗೆ ಆಡುವುದಕ್ಕೆ ಯೋಗ್ಯವಾದ ಒಂದು ಜಾಗವನ್ನಾಗಿ ಮಾಡಿದರು. ಅಜ್ಜಿಯಂದಿರಲ್ಲ ಹೆದರಿ ಬಿಳಿಚಿಹೋದರು. ತಂದೆಯವರೊಂದಿಗೆ ನೇರವಾಗಿ ಆಕ್ಷೇಪವೆತ್ತುವುದಕ್ಕೆ ಅವರಿಗೆ ಧೈರ್ಯವಿರಲಿಲ್ಲ. ನಾಗದೋಷವುಂಟಾದೀತೆಂದು ಅವರು ತಮ್ಮತಮ್ಮೊಳಗೆ ಮಾತನಾಡಿಕೊಂಡರು.

ನಾಗಯಕ್ಷಿಯೂ ಶಿವಲಿಂಗವೂ ಶಿಲಾರೂಪಗಳೂ ಯಾವುದೇ ಕಾರಣಕ್ಕೂ ಕದಲಬಾರದೆಂದು ಹೆಂಗಸರು ಹೇಳಿದರು. ಆದರೂ ತಂದೆಯವರು ಸಿಮೆಂಟಿನ ತಳಪಾಯ ನಿರ್ಮಿಸಿದರು. ನಾಗಬನದ ಸುತ್ತಲೂ ಕುಳಿತುಕೊಳ್ಳುವುದಕ್ಕೆ ದಿಣ್ಣೆಗಳನ್ನು ಕಟ್ಟಿಸಿದರು. ಇದ್ಯಾವುದೂ ಸಾಲದು ಎಂಬಂತೆ ನಾಗಬನದಲ್ಲಿ ಎರಡು ಮ್ಲೇಚ್ಛ ಮರಗಳನ್ನು ನೆಟ್ಟರು. ಗುಲ್‌ಮೊಹರ್ ಮರಗಳು.

ಆ ಕಾಲದಲ್ಲಿಯೇ ದೊಡ್ಡ ಕಾಸರಕ್ಕನ ಮರ ಇಲ್ಲವಾದುದು. ಬಿದ್ದದ್ದೋ ಬೀಳಿಸಿದ್ದೋ ಎಂಬುದು ನನಗೀಗ ನೆನಪಿಲ್ಲ. ನಾಲಪ್ಪಾಟ್ಟಿನ ತೆಂಕಣ ಅಂಗಳದಲ್ಲಿ ಬಿದ್ದಿದ್ದ ಹಸಿರು ಹೂಗಳೂ ಅದರ ನವಿರಾದ ಪರಿಮಳವೂ ಬರಿಯ ಸ್ಮರಣೆಗಳಾಗಿ ಉಳಿದುವು.

ನಾಗಬನದ ಪರಿಯೆಂಬ ಮರದ ಕೊಂಬೆಗಳಲ್ಲಿ ನಮ್ಮನ್ನೆತ್ತಿ ಕುಳ್ಳಿರಿಸಿ ತಂದೆಯವರು ಫೋಟೋ ತೆಗೆದರು. ಮೂಢನಂಬಿಕೆಗಳಿಗೆ ಶರಣಾಗದವನನ್ನು ಯಾವುದೊಂದು ಅಹಿತಕರ ಘಟನೆಯೂ ಬಾಧಿಸಲಾರದೆಂದು ಅಜ್ಜಿಗೆ ತಿಳಿಯಹೇಳಿದರು.

ಆ ತಿಳಿಯಹೇಳುವಿಕೆಯೆಡೆಯಲ್ಲಿ ಹಕ್ಕಿಗೂಡುಗಳು ನೆಲಕ್ಕೆ ಬಿದ್ದುವು. ಮೊಟ್ಟೆಗಳು ಛಿದ್ರವಾದುವು. ಓಪ್ಪಲಿಬಳ್ಳಿಗಳು ನೆಲಕಚ್ಚಿದುವು. ಇನ್ನೂ ಅರಳಿ ಮುಗಿಯದ ಹೂಗಳೂ ನೆಲಕಚ್ಚಿದುವು. ಉಯ್ಯಾಲೆ ಕಟ್ಟಿದ್ದ ರೆಂಜೆ ಮರವನ್ನು ತುಂಡರಿಸಬಾರದೆಂದು ತಂದೆಯವರು ಕೆಲಸದವರಿಗೆ ಹೇಳಿದ್ದರು. ಚಕ್ಕೋತದ ಮರವೂ ಉಳಿದುಕೊಂಡಿತು.

ತಂದೆಯವರಿಗೆ ಉಡುಗೊರೆಯಾಗಿ ಸಿಕ್ಕಿದ್ದ ಒಂದು ಸಾಲಿಗ್ರಾಮ ಕಲ್ಲನ್ನು

ಮಾವನೂ ಅಜ್ಜಿಯೂ ಸೇರಿ ಮನೆಯ ತೆಂಕಮೂಲೆಯಲ್ಲಿ ಒಂದು ದೇಗುಲ ನಿರ್ಮಿಸಿ, ಅಲ್ಲಿರಿಸಿ ಪೂಜಿಸುತ್ತಿದ್ದರು. ಅಜ್ಜಿ ಪೂಜಾಸಮಯದಲ್ಲಿ ಮಡಿಬಟ್ಟೆಯನ್ನಷ್ಟೆ ಉಡುತ್ತಿದ್ದರು. ಆ ದೇವಾಲಯದ ಒಳಕ್ಕೆ ಯಾರು ಪ್ರವೇಶಿಸುವುದೂ ಅಜ್ಜಿಗೆ ಇಷ್ಟವಿರಲಿಲ್ಲ. ಅವರೆಲ್ಲ ದೇಗುಲವನ್ನು ಅಪವಿತ್ರಗೊಳಿಸಿಯಾರೆಂಬ ಸಂದೇಹ ಅವರಿಗಿತ್ತು.

ಮುಟ್ಟಾದ ಹೆಂಗಸರು ಕೂಡಲೆ ನಾಲಪ್ಪಾಟ್ಟಿನ ದಕ್ಷಿಣದ ಚಾವಡಿಗೆ ಸರಿಯುತ್ತಿದ್ದರು. ಮತ್ತೆ ಮೂರುದಿನಗಳ ಕಾಲ ಅಲ್ಲೇ ಶರಣು ಹೋಗಬೇಕು. ಮನೆಗೆಲಸ ಮಾಡುವುದಕ್ಕೆ ಅವರಿಗೆ ಅನುಮತಿ ಇಲ್ಲದ್ದರಿಂದ ಸಮಯ ಕಳೆಯಲಿಕ್ಕಾಗಿ ಅವರು ಪುಸ್ತಕ ಓದುತ್ತಿದ್ದರು. ಚೆಂಙ್ಙಂಪುಳೆಯವರ ರಮಣನ್, ಕುಮಾರನ್ ಆಶಾನರ ನಳಿನಿಯೂ ಲೀಲೆಯೂ, ಕಪ್ಪನ ಕೃಷ್ಣ ಮೆನೋನರ ಕಾದಂಬರಿಗಳು ಮುಂತಾದವುಗಳ ಹೊರತಾಗಿ ಆತ್ಮಪೋಷಿಣಿ, ಕೈರಳಿ, ಮಹಿಳೆ ಮೊದಲಾದ ಹಳೆಯ ಮಾಸಪತ್ರಿಕೆಗಳೂ ಅವರ ಸಂಗಾತಿಗಳಾಗುತ್ತಿದ್ದುವು. ಮುಟ್ಟಾಗಿ ಕುಳ್ಳಿರದಿದ್ದಾಗಲೂ ಪುಸ್ತಕಗಳನ್ನು ಓದುವ ಹೆಂಗಸರು ಆ ಊರಲ್ಲಿ ಕಡಿಮೆಯೆ. ಆ ಕಡಿಮೆಯವರ ಗುಂಪಿಗೆ ಸೇರಿದವರಾಗಿದ್ದರು ನನ್ನ ಅಮ್ಮ ಮತ್ತು ಚಿಕ್ಕಮ್ಮ. ನಾಲಪ್ಪಾಟ್ಟ್‌ನಲ್ಲಿ ಯಾವತ್ತೂ ಅಡುಗೆಯವರಿದ್ದುದರಿಂದ ಯಾವ ಹೆಂಗಸರೂ ಪಾಕಶಾಸ್ತ್ರಪ್ರವೀಣೆಯರಾಗಲು ಶ್ರಮಿಸಿದ್ದಿಲ್ಲ. ಹೆಂಗಸರ ಜವಾಬ್ದಾರಿ ಗುರುತರವಾದುದೇನೂ ಆಗಿರಲಿಲ್ಲ. ದೀಪಕ್ಕಿರುವ ಬತ್ತಿಯನ್ನು ಕಾಲಿನ ತೊಡೆಯ ಮೇಲಿರಿಸಿ ಹೊಸೆಯುವುದು, ಸಂಜೆ ದೀಪ ಉರಿಸುವುದು, ಬಿಲ್ವಪತ್ರೆಯ ಕಟ್ಟೆಯ ಮೇಲೂ, ನಾಗಬನದಲ್ಲೂ, ನಾಲ್ಕು ಚಾವಡಿಗಳಲ್ಲೂ ದೀಪ ಹೊತ್ತಿಸಿ ಇಡುವುದು, ಸಂಜೆಗೆ ಕಾಲುದೀಪದ ಬಳಿ ಕುಳಿತು ವಾರಪತ್ರಿಕೆಯನ್ನು ಗಟ್ಟಿಯಾಗಿ ಓದುವುದು, ಭತ್ತ ಬೇಯಿಸಲೆಂದು ಕಣಜದಿಂದ ಅಳತೆಮಾಡಿ ತೆಗೆದುಕೊಡುವುದು, ಪೂಜಾಸಾಮಗ್ರಿಗಳನ್ನು ತೊಳೆದಿಡುವುದು..... ಹೀಗೆ ಏನೂ ಗುರುತರವಲ್ಲದ ಕೆಲವು ಕೆಲಸಗಳು. ಬಾಕಿಯೆಲ್ಲ ಕೆಲಸದವರ ಜವಾಬ್ದಾರಿ. ಕೆಲವು ಪ್ರತ್ಯೇಕ ಎಣ್ಣೆಗಳನ್ನು ತಯಾರಿಸುವಾಗ ಮನೆಯ ಹೆಂಗಸರು ಅದರ ಉಸ್ತುವಾರಿ ವಹಿಸಿಕೊಳ್ಳುತ್ತಿದ್ದರು.

ಒಂದು ದಿನ ಮಧ್ಯಾಹ್ನ ನಾನು ಮೇಲಿನ ಜಗಲಿಯಲ್ಲಿ ಚಾಪೆ ಬಿಡಿಸಿ ಮಲಗಿದ್ದೆ. ಅಜ್ಜಿ ತಕಲಿಯಲ್ಲಿ ನೂಲುತ್ತಿದ್ದರು. ಆಗಲೆ 'ಗೋಯಿಶ್ವಾರ್' ಎಂಬುದಾಗಿ ಕರೆಯಲ್ಪಡುವ ವ್ಯಕ್ತಿ ಬೈರಾಸು ಉಟ್ಟು ತೆಂಕಮೂಲೆಯ ಬಾಗಿಲ ಬಳಿ ಬಂದುದು.

'ಒಂದು ಉರುಳಿ ಬೇಕಾಯ್ತು' ಅವರು ಹೇಳಿದರು:

'ಅಂಬಾಳತ್ತಿನವರಿಗೆ ಒಂದು ಲೇಹ್ಯ ತಯಾರಿಸಲಿಕ್ಕೆ.'

ಅಜ್ಜಿ ಪಣೆಮೆಟ್ಟಲು ಇಳಿದರು. ನಾನು ಅವರನ್ನು ಹಿಂಬಾಲಿಸಿದೆ. ಒಂದು ಉರುಳಿ ತೆಗೆದುಕೊಡುವಂತೆ ಅಜ್ಜಿ ಕೆಲಸದವಳಿಗೆ ಆಜ್ಞಾಪಿಸಿದರು.

'ಈಗ ತೆಗೆದು ಕೊಡುವಾ. ಅಲ್ಲಿ ನಿಲ್ಲಿಯಾಯ್ತು ಗೋಯಿಶ್ವಾರೆ' ಅಜ್ಜಿ ಹೇಳಿದರು.

'ಅಂಬಾಳತ್ತಿನಲ್ಲಿ ಉರುಳಿ ಇಲ್ಲಾಂತವಾ ನೀವು ಹೇಳುತ್ತಿರೋದು ಗೋಯಿಶ್ವಾರೆ ?' ಕೆಲಸದವಳು ಕೇಳಿದಳು.

'ಅಲ್ಲಿಯ ಉರುಳಿಯೆಲ್ಲ ದೊಡ್ಡದಲ್ವೆ? ಇರುವುದರಲ್ಲಿ ಸಣ್ಣದೇ ಇಲ್ಲಿಯ ದೊಡ್ಡ ಉರುಳಿಯಷ್ಟಕ್ಕಾದೀತು.'

ಗೋಯಿಶ್ಯಾರ್ ಕೆಂಪು ಹಲ್ಲು ಹೊರಬಿಡುತ್ತಾ ಹೇಳಿದರು.

'ಓ, ಹೇಳ್ಬೇಡಿ ನಿಮ್ಮೊಂದು ಲೊಟ್ಟೆ' ಕೆಲಸದಾಕೆ ಪಿರಿಪಿರಿ ಹೇಳಿದಳು. ಮುದುಕ ಉರುಳಿ ಹೊತ್ತುಕೊಂಡು ನಡೆದು ಮರೆಯಾಗುವತನಕ ನಾನು ಆತನ ಕೌಪೀನದ ಬಾಲವನ್ನು ನೋಡುತ್ತಾ ನಿಂತೆ.

ನಾನೂ ಆಕೆಯೂ ಮಾತ್ರವಿದ್ದಾಗ ಕೆಲಸದಾಕೆ ಹೇಳಿದಳು: 'ನನಗೆ ಕೇಳಿದರೆ ಪಿಸುರು ಬಂದೀತು-ಈ ಥರದ ಪಂಚಾತಿಕೆ, ಪವ್ವರ್ ತೋರಿಸ್ಲಿಕ್ಕೆ. ಇಲ್ಲಿಯವರಿಗಿಂತ ಅಂಬಾಳತ್ತಿನವರು ದುಡ್ಡಿನೋರೂಂತ ಅವ ಹೇಳಿನಡೆಯೋದು. ನಿಮ್ಮ ಅಪ್ಪ ಮನಸ್ಸು ಮಾಡಿದ್ರೆ ಈ ಊರನ್ನೆ ದುಡ್ಡು ಕೊಟ್ಟು ಕೊಂಡ್ಕೋಬಹುದು. ಗೊತ್ತುಂಟೋ ನಿಮ್ಗೆ? ನಿಮ್ಮ ಅಪ್ಪನನ್ನು ಬಿಟ್ರೇ ಈ ಊರಿನಲ್ಲಿ ದುಡ್ಡಿನೋರಿದ್ರೆ. ಅದು ಗೊತ್ತುಂಟೊ? ನಿಮ್ಮಮ್ಮ ಹೀಗೆ ಬಿಳಿಖಾದಿ ಉಟ್ಟು ನಡೆದೇ ಯಾರಿಗೂ ಬೆಲೆ ಇಲ್ಲದಾದ್ದು. ಅಂಬಾಳತ್ತಿನ ಹೆಂಗಸರು ನಡೆಯೋ ಹಾಗೆ ಅವರಿಗೂ ನಡೀಬಾರ್ದಾ? ಐದು ಹತ್ತು ಪವನಿನ ಮಾಲೆ, ಬಳೆ ಮಾಡಿಸ್ಕೋಬಾರ್ದಾ? ಜರಿಮುಂಡು ಉಟ್ಕೋಬಾರ್ದಾ? ದುಡ್ಡಿಲ್ಲದ್ದಕ್ಕಲ್ಲಲ್ಲಾ? ನಿಮ್ಮಮ್ಮನ್ನ ಬಾಕಿದ್ದೋರು ಗೇಲಿ ಮಾಡಿದ್ರೆ ಆ ಗಾಂಧಿಗೆಂತ ನಷ್ಟ? ನಿಮ್ಮಮ್ಮನ್ನ ಬಾಕಿದ್ದೋರು ಗೇಲಿ ಮಾಡಿದ್ರೆ ನಿಮ್ಗಲ್ವೆ ಮಗೂ ಅವ್ಮಾನ! ನೀವು ಅಮ್ಮನಿಗೆ ಹೇಳ್ಬೇಕು, ಚೆನ್ನಾಗಿ ಅಲಂಕಾರ ಮಾಡಿ ನಡೀಬೇಕೂಂತ. ಬಾಕಿದ್ದೋರೆಲ್ಲ ನೋಡ್ಲಿ. ಒಬ್ಬೊಬ್ಬರ ತುಟಿಯೂ ಮುಚ್ಕೋದೀತು. ಮಗು ಹೇಳ್ಬೇಕು. ಹಠ ಹಿಡೀಬೇಕು ಮಗು. ಇನ್ಯಾರೂ ಮಗೂನ ಅಮ್ಮನನ್ನು ಗೇಲಿಮಾಡ್ಬಾರ್ದು.'

'ನನ್ನ ಅಮ್ಮನನ್ನು ಗೇಲಿ ಮಾಡ್ತಾರೆಯೆ? ನನ್ನ ಅಮ್ಮನನ್ನು ಯಾರು ಗೇಲಿ ಮಾಡೋದು?' ನಾನು ಕೇಳಿದೆ. ಅಳು ನುಂಗಿಕೊಂಡೇ ನಾನು ಮಾತನಾಡಿದ್ದು.

'ಕೆರೆಯಲ್ಲಿ ಸ್ನಾನಕ್ಕೆ ಹೋದಾಗ ಕೇಳಿದ್ದು, ನನ್ನ ಕೂಸೇ. ಆ ಪಣಿಕ್ಕರರ ಹೆಂಡ್ತಿ ಇಲ್ವೆ? ಹಲ್ಲುಗಿಂಜೋ ಅಧಿಕಪ್ರಸಂಗಿ? ಅದು ಹೇಳೋದು, ಬಾಲಾಮಣ್ಯಮ್ಮ ಕಾಂಕ್ರೆಸ್ಸೂಂತ.'

'ಕಾಂಕ್ರೆಸ್ಸಾ? ಅದೆಂಥಾದ್ದು?'

'ನಿಮ್ಗೊತ್ತಿಲ್ವಾ? ನನ್ನ ಕೂಸೇ! ನಂಗೆ ಇಂಗಿಳೀಸು ಪ್ರೇಂಚು ಏನೂ ಗೊತ್ತಿಲ್ಲ? ಅದು ಒಳ್ಳೆ ಮಾತಲ್ಲಾಂತ ನಂಗೆ ಗೊತ್ತಾಯ್ತು. ಈ ಗಾಂಧಿಯ ಜನಗಳಿಲ್ವ? ಅವರ ಬಗ್ಗೆ ಹೇಳೋದು ಕಾಂಕ್ರೆಸ್ಸೂಂತ. ಭಾರಿ ಅವ್ಮಾನ ಆಯ್ತುಂತಲ್ವೇ ಹೇಳಬೇಕಾದ್ದು ನನ್ನ ಮಗೂ. ಭಾರೀ ಅವ್ಮಾನ ಆಯ್ತು.'

ಬಿರುಗಾಳಿ ಬೀಸಿದ ದಿವಸ ಅಂಬಾಳತ್ತಿನಲ್ಲಿ ಯಾರದ್ದೋ ಹುಟ್ಟುಹಬ್ಬವಿತ್ತು. ನಾನೂ ಅಣ್ಣನೂ ಅಂಬಾಳತ್ತಿನ ಮನೆಯಲ್ಲಿ ನಡೆದ ಭೋಜನಕೂಟಕ್ಕೆ ಆಮಂತ್ರಿತ ಅತಿಥಿಗಳಾಗಿದ್ದೆವು. ಊಟಕ್ಕೆ ಮೊದಲು ನಾವು ಮಾಲತಿಕುಟ್ಟಿಯೊಂದಿಗೆ ನಾಗಬನಕ್ಕೆ

ಹೋದೆವು. ಅಲ್ಲಿ ಮೀನಾಕ್ಷಿಯಕ್ಕ ಹಾವುಗಳಿಗಾಗಿ ಅರಸಿನ ಹುಡಿಯನ್ನೂ ಹಾಲು, ಹಣ್ಣುಗಳನ್ನು ಹರಡಿ ಇರಿಸುವುದನ್ನೂ ದೀಪ ಉರಿಸುವುದನ್ನೂ ನಾವು ನೋಡಿದೆವು.

ಮೀನಾಕ್ಷಿಯಕ್ಕ ಅಂಬಾಳತ್ತಿನ ಮನೆಯವರ ದೂರದ ಸಂಬಂಧಿ. ಬಡವಳಾಗಿದ್ದುದರಿಂದ ಆಶ್ರಿತೆಯೂ ಹೌದು. ಅವರು ಕಪ್ಪು ಬಣ್ಣದ ಮಧ್ಯವಯಸ್ಕ ಹೆಂಗಸು. ಎಲ್ಲರೊಂದಿಗೂ ಎಲ್ಲಾ ಹೊತ್ತಿನಲ್ಲೂ ಕ್ಷಮೆಯಾಚಿಸುವ ಮುಖಭಾವದೊಂದಿಗೆ ಅವರು ಆ ಮನೆಯಲ್ಲೂ ಸುತ್ತುಮುತ್ತಲೂ ವಿಶ್ರಾಂತಿಯಿಲ್ಲದೆ ಓಡಾಡುತ್ತಿದ್ದರು. ಉತ್ಸವದವರು ಬಂದರೆ ಭತ್ತ ಕೊಂಡುಹೋಗಿ ಅವರನ್ನು ಬರಮಾಡಿಕೊಳ್ಳುವುದು, ದೀಪ ಉರಿಸುವುದು, ಮಕ್ಕಳಿಗಾಗಿ ಮೊಸರು ಕಡೆದು ಬೆಣ್ಣೆ ಶೇಖರಿಸಿಡುವುದು, ಮನೆತುಂಬಿಸುವ ದಿವಸ ಅಕ್ಕಿ ಹಿಟ್ಟಿನಲ್ಲಿ ಕೈ ಮುಳುಗಿಸಿ ಬಾಗಿಲಿನ ಮೇಲೆ ಮುದ್ರೆಗಳನ್ನು ಮೂಡಿಸುವುದು, ಮುಂತಾದ ಸರಳ ಕೆಲಸಗಳನ್ನು ಮಾತ್ರ ಅವರು ಮಾಡಬೇಕಾಗಿತ್ತು. ಬಾಕಿ ಕೆಲಸಗಳಿಗೆಲ್ಲ ಲೆಕ್ಕವಿಲ್ಲದಷ್ಟು ಕೆಲಸದಾಳುಗಳಿದ್ದರು. ಆದರೂ ಮೀನಾಕ್ಷಿಯಕ್ಕ ಇಲ್ಲದಿದ್ದರೆ ಆ ಕುಟುಂಬವನ್ನು ಒಂದು ದಿನ ಕೂಡಾ ಸಮಾಧಾನದಿಂದ ನಿಭಾಯಿಸುವುದಕ್ಕೆ ಸಾಧ್ಯವಾಗುವಂತಿರಲಿಲ್ಲ. ಎಷ್ಟು ಭತ್ತ ಬೇಯಿಸಬೇಕೆಂಬುದೂ ಎಷ್ಟು ಪಂಚೆಗಳನ್ನು ಒಗೆಯಲು ಕೊಟ್ಟಿದೆಯೆಂಬುದೂ ಮಕ್ಕಳಿಗೆ ಯಾವತ್ತು ಹೊಟ್ಟೆ ತೊಳೆಸುವ ಹರಳೆಣ್ಣೆ ಕುಡಿಸಬೇಕೆಂಬುದೂ ಮತ್ತಾರಿಗೂ ಗೊತ್ತಿರಲಿಲ್ಲ.

'ಯಾಕೆ ಹಾವು ಬರಲಿಲ್ಲ?' ನಾನು ಕೇಳಿದೆ.

'ಮನುಷ್ಯರನ್ನು ಕಂಡರೆ ಹಾವು ಬಂದೀತಾ ಮಗೂ? ನಾವು ಹೊರಟು ಹೋದರೆ ಆಗ ಎದ್ದು ಬರ್ತದೆ ಕೃಷ್ಣಸರ್ಪ'-ಮೀನಾಕ್ಷಿಯಕ್ಕ ಹೇಳಿದರು.

ಊಟ ಮುಗಿದ ಕೂಡಲೆ ನನಗೆ ನಿದ್ರೆ ಬರತೊಡಗಿತು. ನಾಲಪ್ಪಾಟ್ಟಿಗೆ ಹಿಂದಿರುಗುವಾಗ ನಮ್ಮೊಂದಿಗೆ ಮಾಲತಿಕುಟ್ಟಿಯೂ ಬಂದಳು. ಮನೆಗೆ ತಲುಪಿ ಒಂದು ಗಂಟೆಯಾಗುವುದಕ್ಕೆ ಮೊದಲೇ ನಾವು ಗಾಳಿಯ ಶಬ್ದ ಕೇಳಿದೆವು.

ತೆಂಕ ಹಿತ್ತಿಲಿನ ತೆಂಗಿನಮರಗಳ ನಡುವಿನಿಂದ ಗಾಳಿ ಭಯಂಕರ ಊಳಿಡುವಿಕೆಯೊಂದಿಗೆ ತಟ್ಟನೆ ಮೇಲೆದ್ದಿತು. ಕೆರೆಯ ಬದಿಯಲ್ಲಿ ರಾಶಿ ಬಿದ್ದಿದ್ದ ತರಗೆಲೆಗಳು ಗಲಭೆ ಮಾಡುತ್ತ ಮೇಲಕ್ಕೆದ್ದವು. ಮರಗಳು ಗೆಲ್ಲುಗಳನ್ನು ದುರಿಸಿದುವು. ರೆಂಜೆಯ ಮರಕ್ಕೆ ಕಟ್ಟಿದ್ದ ಉಯ್ಯಾಲೆಯ ಹಲಗೆ ನೆಲಕ್ಕೆ ಬಿತ್ತು.

'ದೊಡ್ಡ ಬಿರುಗಾಳಿಯೋ ಮತ್ತೊ ಆಗಿರಬೋದೋ-ಶಬ್ದ ಕೇಳಿದರೆ ಹೆದರಿಕೆ ಆಗ್ತದೆ' ಅಜ್ಜಿ ಹೇಳಿದರು. ಅವರು ನಮ್ಮನ್ನು ಮಹಡಿಯ ನಡುಕೋಣೆಯಲ್ಲಿ ಕುಳ್ಳಿರಿಸಿದರು. ನಮಗೆ ಆಡುವುದಕ್ಕೆ ಪಗಡೆ ಕಾಯಿಗಳನ್ನು ಕೊಟ್ಟರು. ಬೆಳಕು ಸಾಕಾಗದ್ದಕ್ಕೆ ಒಂದು ಕಾಲು ದೀಪ ಹೊತ್ತಿಸಿಟ್ಟರು. 'ಕೊಚ್ಚೂ, ಕಿಟಕಿಯೆಲ್ಲಾ ಮುಚ್ಚಿದಿಯೋ ಹೇಗೆ?' ಮುತ್ತಜ್ಜಿ ಕೆಳಗಿನ ತೆಂಕ ಅಂಕಣದಲ್ಲಿ ನಿಂತುಕೊಂಡು ಗಟ್ಟಿಯಾಗಿ ಕೂಗಿದರು.

'ಮುಚ್ಚುತ್ತೇನಮ್ಮಾ ಎಲ್ಲಾ ಮುಚ್ಚುತ್ತೇನೆ' ಅಮ್ಮ ಉತ್ತರಿಸಿದರು. ಅಷ್ಟರಲ್ಲಿ ನೈಋತ್ಯ ಮೂಲೆಯಿಂದ ಒಂದು ಜನಸಮೂಹದ ಬೊಬ್ಬೆಯಂತೆ ಮಳೆಯ ಅಬ್ಬರ

ಕೇಳಿಸಿತು. ಅಜ್ಜಿ ಶಕ್ತಿ ಉಪಯೋಗಿಸಿ ಕಿಟಕಿ ಬಾಗಿಲುಗಳನ್ನು ಸೇರಿಸಿ ಚಿಲಕ ಹಾಕಿದರು. ಅವರ ಮುಖದಲ್ಲಿ ಮಳೆಹನಿಗಳು ಹೊಳೆದುವು.

'ಸಮಯ ನಾಲ್ಕು ಗಂಟೆ ಕೂಡಾ ಆಗಲಿಲ್ಲ. ಅಂಗಳದಲ್ಲಿ ಭಾರೀ ಕತ್ತಲು' ಅಜ್ಜಿ ಹೇಳಿದರು.

'ನಂಗೆ ಕುಟ್ಟಿಯಪ್ಪುವನ್ನು ನೋಡ್ಬೇಕು' ಮಾಲತಿಕುಟ್ಟಿ ಹೇಳಿದಳು.

'ಕುಟ್ಟಿಯಪ್ಪು ಸಂಜೆ ಹೊತ್ತಿಗೆ ಬರ್ತಾರೆ' ಅಜ್ಜಿ ಹೇಳಿದರು.

'ನಂಗೆ ಈಗ ಅಂಬಾಳತ್ತಿಗೆ ಹೋಗ್ಬೇಕು'-ಮಾಲತಿಕುಟ್ಟಿ ಹೇಳಿದಳು.

'ಈ ಗಾಳಿ ಮಳೆ ಒಮ್ಮೆ ನಿಲ್ಲಲಿ. ಆಮೇಲೆ ಮಗುವನ್ನು ಅಂಬಾಳತ್ತಿಗೆ ಕಳುಹಿಸಿಕೊಡ್ತೇನೆ'-ಅಜ್ಜಿ ಸಮಾಧಾನಪಡಿಸಲು ಯತ್ನಿಸಿದರು. ಮಾಲತಿಕುಟ್ಟಿ ಗಟ್ಟಿಯಾಗಿ ಬಿಕ್ಕತೊಡಗಿದಳು. ಅದೇ ಹೊತ್ತಿಗೆ ತೆಂಗು ಬೀಳುವ ಶಬ್ದ ಕೇಳಿದ್ದು.

'ಕೊಚ್ಚೂ, ಏನದು ಬಿದ್ದದ್ದು? ಮನೆ ಬಿದ್ದೀತೋ?' ಮುತ್ತಜ್ಜಿಯ ಪ್ರಶ್ನೆ.

'ಅಮ್ಮ ಹೆದರಬೇಡಿ. ಅದೊಂದು ತೆಂಗು ಬಿದ್ದದ್ದು... ಮಳೆ ನಿಂತರೆ ಹೋಗಿ ನೋಡ್ಬೋದು. ಈಗ ಭಜನೆ ಮಾಡ್ತಾ ಸುಮ್ಮನೆ ಕೂರೋದೇ ಒಳ್ಳೇದು' ಅಜ್ಜಿ ಹೇಳಿದರು.

ಮಾವನ ತಾಯಿ ಸೂಚಿಸಿದಂತೆ ನಾವೆಲ್ಲರೂ ಆಮೇಲೆ ಕೆಳಗಿನ ಅಂತಸ್ತಿನ ತೆಂಕಕೋಣೆಯಲ್ಲಿ ಆಶ್ರಯಪಡೆದೆವು. ಆ ಕೋಣೆಯ ಅಟ್ಟ ಎಲ್ಲಕ್ಕಿಂತ ಹೆಚ್ಚು ಗಟ್ಟಿ ಎಂದು ದೊಡ್ಡಮ್ಮ ಹೇಳಿದರು. ತೆಂಕು ಅಂಕಣದಲ್ಲಿ ನೀರು ಹರಿಯಿತು. ಮಧ್ಯದ ಅಂಗಳ ತುಂಬಿ ಹರಿಯತೊಡಗಿತು. ತೆಂಕಕೋಣೆಯ ಮಂಚದ ಮೇಲೆ ಮಾವನೂ ನಾವು ಮಕ್ಕಳೂ ಕುಳಿತುಕೊಂಡೆವು. ನೆಲದಲ್ಲಿ ಸುರುಟಿಟ್ಟಿದ್ದ ಗೊದ್ದಡಿಗಳಲ್ಲಿ ಮುತ್ತಜ್ಜಿಯೂ ಅಜ್ಜಿಯೂ ಜಾಗ ಹಿಡಿದರು. ಕೆಲಸದವಳು ಬಚ್ಚಲು ಮನೆಯಲ್ಲಿ ಆಶ್ರಯ ಪಡೆದಳು. ಮಳೆ ಗುಡುಗು ಮಿಂಚುಗಳನ್ನು ಲೆಕ್ಕಿಸದೆ ನೀರಲ್ಲಿ ತೊಯ್ದುಕೊಂಡೇ ಅತ್ತೆಯೂ ಬಂದರು.

'ನೀ ಯಾಕೆ ಈ ದಡ್ಡತನ ತೋರಿಸಿದ್ದು? ಜ್ವರ ಹಿಡಿದು ಮಲಗಿದ್ರೆ?' ಮಾವ ಕೇಳಿದರು.

ಅತ್ತೆ ನಕ್ಕರು.

'ಕುಟ್ಟಿಯಪ್ಪು ಬಂದ್ರು' ಮಾಲತಿಕುಟ್ಟಿ ಖುಷಿಯಿಂದ ಹೇಳಿದಳು. ಅತ್ತೆ ಮಾಲತಿಕುಟ್ಟಿಯನ್ನು ಅಪ್ಪಿಕೊಂಡರು. ಹೆದರಿಕೆ ಪರಿಹಾರವಾಗಲು ಅಂತ್ಯಾಕ್ಷರಿ ಹೇಳಿ ನೋಡುವ ಎಂದು ಚಿಕ್ಕಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. 'ಬಂಧಿತನಾಗಿದ್ದ ಅನಿರುದ್ಧ' ಎಂಬ ವಲ್ಲತ್ತೋಳರ ಕೃತಿಯಿಂದ ಹಲವು ಶ್ಲೋಕಗಳನ್ನು ಚಿಕ್ಕಮ್ಮ ಹಾಡಿ ಕೇಳಿಸಿದರು. ಅಂತ್ಯಾಕ್ಷರಿ ಸ್ಪರ್ಧೆಗೆ ಯಾರೂ ತಯಾರಾಗಲಿಲ್ಲ.

'ನನಗೆ ಒಂದು ಶ್ಲೋಕವೂ ಹೊಳೆಯೋದಿಲ್ಲ' ಅಜ್ಜಿ ಹೇಳಿದರು.

'ಮನೆಯ ಸೂರು ಬೀಳದಿದ್ದರೆ ಸಾಕಿತ್ತು' ಅಜ್ಜಿ ಪಿರಿಪಿರಿ ಮಾಡಿದರು.

ಮಾವನೂ ಅತ್ತೆಯೂ ಮೇಲ್ಗಡೆಗೆ ಹೋದ ನಂತರ ಕೆಲಸದಾಕೆ ಇದ್ದಕ್ಕಿದ್ದಂತೆಯೆ ಅಳತೊಡಗಿದಳು. ಅಳುವುದರೊಂದಿಗೆ ಆಕೆ ತನ್ನ ಕೈಗಳಿಂದ ತಲೆಗೆ ಎಡಬಿಡದೆ ಹೊಡೆಯತೊಡಗಿದಳು.

'ಇದೇನು ಹುಚ್ಚಾಟ ಆಡ್ತಾ ಇದ್ದೀಯಾ ? ತಲೆ ಚಚ್ಚಿ ಒಡೆಯುತ್ತೀಯಾ ?' ಅಜ್ಜಿ ಕೇಳಿದರು.

'ನನಗೆ ಬೇಕಾದೋರನ್ನು ಇನ್ನು ಕಾಣೋದಕ್ಕೆ ಸಾಧ್ಯವಿಲ್ಲಲ್ಲಾ.... ನನ್ನ ಗುರುವಾಯೂರಪ್ಪಾ! ನನಗೆ ಬೇಕಾದೋರನ್ನು ಕಾಣೋದಕ್ಕೆ ಸಾಧ್ಯವಿಲ್ಲಲ್ಲಾ.'

'ಈ ಮಳೆ ನಿಂತು, ನಾಳೆ ಬೆಳಿಗ್ಗೇನೇ ಮನೆಗೆ ಹೋಗು. ಸಾಲದೇ ?' ಅಜ್ಜಿ ಕೇಳಿದರು.

'ಈ ಮಳೆ ನಿಲ್ಲಿಕ್ಕಿಲ್ಲಪ್ಪೋ. ಇದು ಬಿರುಗಾಳಿಯಲ್ವೇ ? ಇದ್ರಲ್ಲಿ ನಾವೆಲ್ಲ ಸತ್ತೊಗ್ತೇವೇ' ಕೆಲಸದಾಕೆ ಉಮ್ಮಳಿಸಿ ಅಳತೊಡಗಿದಳು.

'ಅವಳಿಗೇನು ಹುಚ್ಚೇ ?' ಅಜ್ಜಿ ಕೇಳಿದರು. ಮರಗಳು ನೆಲ ಕಚ್ಚುವ ಶಬ್ದವನ್ನು ನಾವು ಆಲಿಸಿದೆವು. ಪಶ್ಚಿಮ ಹಿತ್ತಲಿನಿಂದ ಒಂದು ನಾಯಿಯ ಊಳಿಡುವಿಕೆಯೂ.

'ಅಯ್ಯೋ ಶಂಕರಾ. ಆ ಹಟ್ಟಿ ಬಿದ್ದುಬಿಟ್ಟರೆ! ದನಗಳನ್ನು ಬಾವಿಕಟ್ಟೆಯ ಮಾಡಿನಡಿ ಕಟ್ಟು' ಅಜ್ಜಿ ಹೇಳಿದರು.

ಶಂಕರನ್ ಲಾಟೀನು ತೆಗೆದುಕೊಂಡು ಹಟ್ಟಿಯ ಕಡೆಗೆ ಓಡಿದ. ದನಗಳು ಕೂಗಿದವು.

'ಹಟ್ಟಿ ಬೀಳ್ಳಿಕ್ಕಿಲ್ಲ ದೊಡ್ಡಮ್ಮ. ಅದರ ಕಂಬ ಒಳ್ಳೆ ಗಟ್ಟಿಯುಂಟು.' ಶಂಕರನ್ ಮರಳುತ್ತಾ ಹೇಳಿದ.

'ಹಾಗಿದ್ದರೆ ದನಗಳು ಅಲ್ಲೇ ಇರಲಿ.'

'ಅಂಗಳದಲ್ಲಿ ಮೊಣಕಾಲವರೆಗೆ ನೀರುಂಟು.' ಶಂಕರ ಹೇಳಿದ.

'ನಾವು ಈಜಬೇಕು.' ನಾನು ಹೇಳಿದೆ.

'ನಡು ಅಂಗಳದಲ್ಲಿ ಈಜುವುದಾ' ಅಣ್ಣ ಕೇಳಿದ.

'ನೀರು ಐಸ್‌ನ ಹಾಗೆ ತಂಪುಂಟು.' ನಾನು ನಡುಅಂಗಳದ ನೀರನ್ನು ಮುಟ್ಟುತ್ತ ಹೇಳಿದೆ.

'ನೀರಲ್ಲಿ ಆಡ್ಬೇಡಿ ಮಕ್ಕಳೆ.' ಅಜ್ಜಿ ಗಟ್ಟಿಯಾಗಿ ಕೂಗಿ ಹೇಳಿದರು. ನಾವು ಮತ್ತೆ ಮಂಚದಲ್ಲೇ ಜಾಗ ಹಿಡಿದೆವು. ದಕ್ಷಿಣಕ್ಕಿರುವ ಬಾಗಿಲನ್ನು ಯಾರೋ ತಟ್ಟಿದಂತೆ ನಮಗೆ ಅನ್ನಿಸಿತು. ಶಂಕರನ್ ಬಾಗಿಲು ತೆರೆದ. ದಿಣ್ಣೆಯ ಮೇಲೆ ಒದ್ದೆ ಮುದ್ದೆಯಾದ ನಾಯಿ. ಅಂಬಾಳತ್ತಿನವರ ಸಾಕು ನಾಯಿ 'ತುಂಬಿ' ಕಪ್ಪೂ ಬಿಳಿಯೂ ಬಣ್ಣವುಳ್ಳ ಪ್ರಾಣಿ.

'ಅಲ್ಲಾ. ಇದ್ಯಾರು, ತುಂಬಿಯಾ ? ಒದ್ದೆಯಾಗಿ ನೀರು ಹರಿಸ್ತಾ ಬಂದಿದ್ಯಲ್ಲ. ಬಾಲಾಮಣ್ಯಮ್ಮಯ ಒಟ್ಟಿಗೆ ಹೊರಟು ಬಂದಿರಬೇಕು. ಪಾಪ' ಶಂಕರನ್ ಹೇಳಿದ.

ನಾವು ತುಂಬಿಯನ್ನು ನೋಡಿದೆವು, ತುಂಬಿ ನಮ್ಮನ್ನೂ. ಅವ ಚಳಿಯಲ್ಲಿ ನಡುಗುತ್ತಿದ್ದ.

ಶಂಕರನ್ ಒಂದು ಗೋಣಿಚೀಲ ತೆಗೆದು ದಿಣ್ಣೆಯಲ್ಲಿ ಹಾಸಿದ.

'ಇಲ್ಲಿ ಮಲಕ್ಕೊ ಆಯ್ತಾ. ಬಿರುಗಾಳಿಯಲ್ವ ? ಈಗ ಮನುಷ್ಯ ಯಾರು ? ನಾಯಿ ಯಾರೂಂತೆಲ್ಲ ನೋಡ್ಬೇಕಾದ ಅಗತ್ಯವಿಲ್ಲ. ಮಲಗಿ ನಿದ್ರೆ ಮಾಡು ತುಂಬೀ'. ತುಂಬಿ ಗೋಣಿ ಚೀಲದಲ್ಲಿ ಮಲಗಿ ಸಂತೃಪ್ತಿಯಿಂದ ನನ್ನನ್ನೂ ಅಣ್ಣನನ್ನೂ ನೋಡಿತು.

ಇಡೀಯ ರಾತ್ರಿಯನ್ನು ನಾವು ತೆಂಕಕೋಣೆಯಲ್ಲೇ ಕಳೆದೆವು. ಎಚ್ಚರವಾದಾಗ ಮಳೆ ನಿಂತು ಹೋಗಿತ್ತು.

'ಹೊರಬಾಗಿಲು ತೆರೀರೀ' ಎಂದು ಯಾರೋ ದಯನೀಯವಾಗಿ ಕೂಗಿ ಕೊಂಡದ್ದು ಕೇಳಿ ನಾನು ಎಚ್ಚರಗೊಂಡೆ. ಹೊರ ಬಾಗಿಲು ತೆರೆಯಲಾಯಿತು. ಸೊಂಟದವರೆಗೆ ನೀರಲ್ಲಿ ನಿಂತುಕೊಂಡ ಬಾಲನ್ ಎಂಬ ಯುವಕ ಮುಗುಳ್ನಗೆ ಬೀರಿದ.

'ವಡೇಕರೆಯಿಂದ ಬರ್ತಾ ಇದ್ದೇನೆ. ಇಲ್ಲಿ ಯಾರಿಗೂ ಏನೂ ಆಗ್ಲಿಲ್ಲಲ್ಲ ?'

'ಯಾರಿಗೂ ಏನೂ ಆಗ್ಲಿಲ್ಲ' ಅಜ್ಜಿ ಹೇಳಿದರು: 'ನೀನು ಹೇಗೆ ಬಂದೆ ?'

'ನಾನು ಬೆಳಗಾಗೂದಕ್ಕಿಂತ ಮುಂಚೇನೇ ಹೊರಟೆ. ನೀರಿನಲ್ಲೇ ನಡೆದೆ.'

'ಬಾಲನನ್ನು ಮೆಚ್ಚಬೇಕು.'

'ಎಷ್ಟು ಗುಡಿಸಲು ಬಿದ್ದದ್ದು ! ಮರಗಳೆಷ್ಟು ಬಿದ್ದದ್ದು ! ಕೋಳಿಗಳೆಷ್ಟು ಸತ್ತದ್ದು. ಆಡುಗಳೆಷ್ಟು ಸತ್ತು ತೇಲಿದ್ದು ! ಭಯಂಕರ ದೃಶ್ಯ.'

'ಒಳಗೆ ಬಾ ಬಾಲಾ. ಬೇರೆ ಪಂಚೆ ಉಟ್ಟುಕೊ.'

'ವಡೇಕರೆಯಿಂದ ನಮಗೇನಾದರೂ ಕೊಟ್ಟು ಕಳುಹಿಸಿದ್ದಾರಾ ? ಚಕ್ಕುಲಿ ? ಖರ್ಜೂರ ?' ನಾನು ಕೇಳಿದೆ.

'ಇಲ್ಲ ಮಗೂ. ನಾನು ಬರಿಗೈಯಲ್ಲೇ ಬಂದೆ' ಬಾಲನ್ ತನ್ನ ಉಬ್ಬಿದ ಹಲ್ಲುಗಳನ್ನು ಹೊರ ಚಾಚುತ್ತ ಹೇಳಿದ.

'ಚಕ್ಕುಲಿ ಖರ್ಜೂರ ಕೇಳ್ಬೇಕಾದ ಸಮಯ !' ಮಾವನ ಅಮ್ಮ ಪಿರಿಪಿರಿ ಮಾಡಿದರು. ನಾನು ನಾಚಿಕೆಯಿಂದ ತಲೆ ತಗ್ಗಿಸಿದೆ.

ನನ್ನ ಬಾಲ್ಯದ ದಿನಗಳಲ್ಲಿ ಕಲ್ಕತ್ತಾದಲ್ಲಿ ಪ್ರಸಿದ್ಧವಾದ ನಾಲ್ಕು ಶಾಪ್ಪಿಂಗ್ ಕಾಂಪ್ಲೆಕ್ಸುಗಳು ಮಾತ್ರವೇ ಇದ್ದುವು-ಹಾಲ್ ಎಂಡ್ ಆಂಡರ್‌ಸನ್, ಆರ್ಮಿ ಎಂಡ್ ನೇವಿ ಸ್ಟೋರ್ಸ್, ವಾಚ್ವಲ್ ಮೊಲ್ಲ ಸ್ಟೋರ್ಸ್, ಕಮಲಾಲಯ ಸ್ಟೋರ್ಸ್. ತಂದೆಯವರು ಕೋಟು, ಪ್ಯಾಂಟು ಹೊಲಿಯಲಿಕ್ಕೆ ಬೇಕಾದ ಟ್ವೀಡ್, ಟ್ವಿಲ್ ಮುಂತಾದ ಬಟ್ಟೆಗಳನ್ನು ಮೊದಲ ಎರಡು ಕಾಂಪ್ಲೆಕ್ಸುಗಳಿಂದ ಕೊಳ್ಳುತ್ತಿದ್ದರು. ಪಾಶ್ಚಾತ್ಯ ನಾಗರಿಕ ತಿಳುವಳಿಕೆಯಲ್ಲಿ ತಂದೆಯವರಿಗಿಂತ ಬಹಳ ಹಿಂದಿದ್ದ ನನಗೂ ಅಣ್ಣನಿಗೂ ವಾಚ್ವಲ್ ಮೊಲ್ಲದಿಂದ ಅಂಗಿಗಳಿಗೆ ಬೇಕಾದ ಬಿಳಿ ಬಟ್ಟೆ ಕೊಳ್ಳುತ್ತಿದ್ದರು. ಅಮ್ಮನಿಗೆ ಪ್ರಿಯವಾದ ರೆಡಿಮೇಡ್ ಬ್ಲೌಸ್‌ಗಳನ್ನು ಕಮಲಾಲಯ ಸ್ಟೋರಿನಿಂದ ತಂದೆ ಕೊಳ್ಳುತ್ತಿದ್ದರು. ಅಲ್ಲಿ ಕುತ್ತಿಗೆಯ ಸುತ್ತ, ಕೈಯ ಅಂಚಿಗೆ ಹೂಗಳನ್ನು ಹೊಲಿದ ಬಿಳಿ ಬ್ಲೌಸುಗಳು ಆಗ ಸುಲಭವಾಗಿ ಲಭಿಸುತ್ತಿತ್ತು. ಅಮ್ಮ ಸಾಮಾನ್ಯವಾಗಿ ಉಡುವ ತುಸು ಅರಸಿನ ಖಾದಿ ಸೀರೆಗಳನ್ನೂ ಕಮಲಾಲಯದಿಂದಲೇ ತಂದೆಯವರು ಕೊಳ್ಳುತ್ತಿದ್ದರು. ತಂದೆಯವರೊಂದಿಗೆ ಶಾಪ್ಪಿಂಗಿಗೆ ಹೋಗುವುದು ತ್ರಾಸದಾಯಕ ವಾದ ವ್ಯಾಯಾಮವಾಗಿತ್ತು. ಮಕ್ಕಳು ಅಂಗಡಿಯಲ್ಲಿ ನಿಂತು ಬಾಯಿ ತೆರೆಯುವುದು ಕೂಡ ತಂದೆಯವರಿಗೆ ಇಷ್ಟವಾಗುತ್ತಿರಲಿಲ್ಲ. ಅಭಿಪ್ರಾಯ ಸ್ವಾತಂತ್ರ್ಯ ತಂದೆಯವರಿಗೆ

ಬಿಟ್ಟರೆ ಇನ್ಯಾರಿಗೂ ನಮ್ಮ ಕುಟುಂಬದಲ್ಲಿ ಇರಲಿಲ್ಲ. ಇಷ್ಟರ ಮಟ್ಟಿಗೆ ಗುಲಾಮತನ ಸಹಿಸಬೇಕಾಗಿ ಬಂದ ಮಕ್ಕಳು ನಮ್ಮ ಪರಿಚಿತಲೋಕದಲ್ಲಿ ಬೇರೆ ಯಾರೂ ಇರಲಿಲ್ಲ.

ಕುಟುಂಬದ ಮಿತ್ರವರ್ಗದಲ್ಲಿ ಬಹಳ ಕಡಿಮೆ ಮಂದಿ ಮಾತ್ರ ಇದ್ದರು. ಬ್ಯಾಂಕ್ ಉದ್ಯೋಗಿಯಾದ ರಾಘವ ಮೆನೋನ್, ಪತ್ನಿ ಪದ್ಮಾವತಿಯಮ್ಮ ಅವರ ಮಕ್ಕಳಾದ ಉಣ್ಣಿಯಣ್ಣನೂ ಮಂಜುವೂ. ಹೈಕೋರ್ಟ್ ರಿಜಿಸ್ಟ್ರಾರ್ ಆಗಿದ್ದ ಪಣಿಕ್ಕರೂ ಹೆಂಡತಿ ಮಕ್ಕಳೂ, ರಾಮಚಂದ್ರಯ್ಯರ್‌ರೂ ಹೆಂಡತಿಯೂ ಅವರ ಏಕಮಾತ್ರ ಪುತ್ರ ರಾಮಸ್ವಾಮಿಯೂ. ತಂದೆಯವರು ನಮ್ಮನ್ನು ಕರೆದುಕೊಂಡು ತಿಂಗಳಿಗೊಮ್ಮೆ ಈ ಮೂರು ಕುಟುಂಬಗಳಲ್ಲೊಂದನ್ನು ಸಂದರ್ಶಿಸುತ್ತಿದ್ದರು. ರಾಘವ ಮೆನೋನರ ಕಿರಿಯ ಮಗ ಮಂಜು ಎಲ್ಲರಿಂದ ಮುದ್ದಿಸಲ್ಪಟ್ಟ ಭಾಗ್ಯವಂತನಾಗಿದ್ದ. ನನಗೂ ಅಣ್ಣನಿಗೂ ಗೊಂಬೆಗಳನ್ನು ಜೋಪಾನ ಮಾಡಲು ಎರಡು ಮಹಡಿಯ ಕಟ್ಟಡವನ್ನು ಶ್ರೀ ಕೆ.ಎಸ್. ಮೆನೋನ್ ಉಡುಗೊರೆ ನೀಡಿದ್ದರು. ಅದು ನೋಡಿ ಒಂದು ವಾರ ಕಳೆಯಬೇಕಿದ್ದರೆ ಮಂಜುವಿಗೂ ಒಂದು ಮನೆ ಕೊಂಡುಕೊಡುವುದಕ್ಕೆ ಅವನ ತಂದೆ ತಾಯಿಯರು ಬದ್ಧರಾದರು. ಪಣಿಕ್ಕರ್ ದಂಪತಿಗಳ ಮಕ್ಕಳು ಮುದ್ದು ಮಾಡಲ್ಪಟ್ಟವರಾಗಿರಲಿಲ್ಲ. ಆದರೆ ಯಾರೂ ಅವರನ್ನು ಗದರಿಸುವುದನ್ನು ನಾನು ನೋಡಲಿಲ್ಲ. ಅವರು ಗೋಡೆಗಳ ಮೇಲೂ ಮರದ ತುದಿಯಲ್ಲೂ ಕಪಾಟದ ಮೇಲೂ ಹತ್ತುತ್ತಿದ್ದರು. ಕೆಲವೊಮ್ಮೆ ಬಿದ್ದು ಗಟ್ಟಿಯಾಗಿ ಅಳುತ್ತಲೂ ಇದ್ದರು. ಅವರ ಮಟ್ಟಕ್ಕೆ ಬರಬೇಕೆಂದು ನಾನೂ ಒಂದೆರಡು ಸಲ ತಂದೆಯವರ ಕಪಾಟದ ಮೇಲೆ ಹತ್ತಿ ನರ್ತಿಸಿದ್ದುಂಟು. ಅಂದು ಆ ರೀತಿಯ ಕಸರತ್ತುಗಳೆಲ್ಲ ಧೈರ್ಯ ಪ್ರಕಟಣೆಗಷ್ಟೆ ಸೀಮಿತವಾಗುತ್ತಿತ್ತು. ಅಯ್ಯರ್‌ರ ಮಗ ಸ್ವಾಮಿ ಬಿಳಚಿ ಸಪೂರವಾಗಿದ್ದ ಒಬ್ಬ ಹುಡುಗ. ಅವನು ನಮ್ಮ ಮನೆಯಲ್ಲಿ ಏನನ್ನು ತಿನ್ನುವುದಕ್ಕೂ ಅವನ ತಂದೆ ತಾಯಿಯರು ಒಪ್ಪಿಗೆ ನೀಡುತ್ತಿರಲಿಲ್ಲ. ಆಡುವುದಕ್ಕೂ ಬಿಡುತ್ತಿರಲಿಲ್ಲ. 'ನೀವು ಆಟ ಆಡಿ, ಸ್ವಾಮಿ ನೋಡುತ್ತಿರುತ್ತಾನೆ' ಎಂದು ಮಿಸೆಸ್ ಅಯ್ಯರ್ ಹೇಳುತ್ತಿದ್ದರು. ಕ್ರಮೇಣ ತಂದೆಯ ಗೆಳೆಯರ ಬಳಗ ಬೆಳೆಯಿತು. ಪಿ.ಜೆ. ಮೆನೋನ್ ಅವರ ಪತ್ನಿ ಆನಕರೆ ವಡಕ್ಕತ್ ಪದ್ಮಾವತಿಯಮ್ಮೆಯೂ ಅವರ ಮಕ್ಕಳು ಲಕ್ಷ್ಮಿ, ಮೃದುಲ, ಲಲಿತ, ಪಾರ್ವತಿ ಮೊದಲಾದವರೂ ನಾವೂ ಹತ್ತಿರವಾದೆವು. ಶ್ರೀ ಎಂ.ಆರ್. ನಾಯರ್‌ರೂ ಹೆಂಡತಿಯೂ, ಶಕುಂತಳ, ಕೃಷ್ಣನ್, ಪಿನೋದಿನಿ ಮೊದಲಾದ ಮಕ್ಕಳೂ, ಮೂರ್‌ಕೋತ್ತ್ ಕುಞಪ್ಪನವರೂ ಹೆಂಡತಿ ಸೀತಕ್ಕನೂ ಮಗ ಉಣ್ಣಿಯೂ ನಮಗೆ ಬೇಕಾದವರಾದರು. ಮಲಯಾಳಿ ಕುಟುಂಬಗಳೊಂದಿಗೆ ಮಾತ್ರ ತಂದೆ ಸಂಬಂಧ ಬೆಳೆಸಿದ್ದುದು. ತಂದೆಯವರು ಗುರುವಾಯೂರಿನಲ್ಲಿ ಬೆಳೆದವರಾದುದರಿಂದಲೂ ಅಮ್ಮ ಪುನ್ನಯೂರ್‌ಕುಳದವರಾದುದರಿಂದಲೂ ಅವರಿಗೆ ಮಲಯಾಳಿಗಳಲ್ಲದವರ ಜೊತೆ ಬೆರೆಯುವುದು ಕಷ್ಟಸಾಧ್ಯವಾಯಿತು. ಮಕ್ಕಳಿಗೆ ಆ ರೀತಿಯ ತೊಂದರೆಗಳಿರಲಿಲ್ಲ. ಆದರೆ ಮಲಯಾಳಿಗಳಲ್ಲದವರ ಜೊತೆ ಸಂಪರ್ಕಪಿರಿಸಿ ಕೊಂಡಾಗ ತಂದೆಯವರು ನಮ್ಮನ್ನು ಪ್ರಶ್ನಿಸುತ್ತಲೂ ನಿರುತ್ಸಾಹಗೊಳಿಸುತ್ತಲೂ ಇದ್ದರು. ಪ್ರತ್ಯೇಕ ಆಕರ್ಷಣೆಗಳೇನೂ ಇಲ್ಲದ ಗ್ರಾಮೀಣರಾಗಿ ಮಾತ್ರ ತಂದೆಯವರಿಗೆ ನಮ್ಮನ್ನು ಕಾಣಲು ಸಾಧ್ಯವಾಯಿತು. ನಾಗರಿಕರ ಸಮ್ಮುಖದಲ್ಲಿ

ಪ್ರದರ್ಶನಕ್ಕೆ ಯೋಗ್ಯವಲ್ಲದ ಜಂತುಗಳು. ಕಲ್ಲೇಟು ತಾಗಿ ಬಾಲ ಮಡಚಿ ಅಡಗುವ ಅನಾಥ ನಾಯಿಗಳಂತಾಗಿದ್ದೆವು ನಾನೂ ಅಣ್ಣನೂ. ಕೀಳರಿಮೆಯಿಂದ ಬಳಲಿದವರು. ಆದ್ದರಿಂದಲೇ ಇರಬೇಕು, ನಾವು ಅವಿರತ ಪ್ರಯತ್ನಿಸಿ ಕಲಿಯುವಿಕೆಯಲ್ಲೂ ತಿಳಿವಳಿಕೆ ಹೆಚ್ಚಿಸಿಕೊಳ್ಳುವುದರಲ್ಲೂ ಪ್ರಥಮ ಸ್ಥಾನ ಸಂಪಾದಿಸಿದ್ದು. ನಾವು ಲೋಕಕ್ಕೆ ಕೆಲವೆಲ್ಲ ವಿಚಾರಗಳನ್ನು ತಿಳಿಯ ಹೇಳಲಿಕ್ಕಿದ್ದೆವು.

ಕುಂಜನ್ ನಂಬೀಶನ್ ಎತ್ತರ ಕಡಿಮೆಯ ಕಫ ಪ್ರಕೃತಿಯ ಓರ್ವ ವ್ಯಕ್ತಿ. ಆವಿಯಲ್ಲಿ ಬೇಯಿಸುವುದರ ಬದಲು ನೇಂದ್ರ ಬಾಳೆ ಹಣ್ಣನ್ನು ಸಿಗಿದು ನೀರಿನಲ್ಲಿ ಬೇಯಿಸಿ ಮಾಡುವ 'ತುಂಬಿಸಿದ ಹಣ್ಣ'ನ ಜೀರ್ಣ ರೂಪವನ್ನು ನೆನಪಿಗೆ ತರುವ ಆಕೃತಿಯಾಗಿತ್ತು ನಂಬೀಶನ್‌ರದು. ಕಂಡರೆ ಏನೋ ಅಸಮರ್ಪಕತೆ ನಮ್ಮ ಅನುಭವಕ್ಕೆ ಬಂದೀತು. ಆಕೃತಿಯಲ್ಲಿ ಎಳ್ಳಷ್ಟೂ ಅಚ್ಚುಕಟ್ಟುತನವಿಲ್ಲ. ನಂಬೀಶನ್‌ರ ಬಣ್ಣದ ಬಗ್ಗೆ ಅದು ಬಿಳಿಯೋ ಕಂದೋ ಅಥವಾ ಕಪ್ಪೋ ಎಂದು ಕೂಡ ಯಾರಿಗೂ ಹೇಳಲು ಸಾಧ್ಯವಾಗುವಂತಿರಲಿಲ್ಲ. ಕೆಲವು ಗಾಯದ ಕುರುಹುಗಳೂ ಕಲೆಗಳೂ ಆತನ ಮೈಮೇಲೆ ಕಾಣಬಹುದಾಗಿತ್ತು. ಆತನ ಸ್ವರವಾದರೊ ಪುರುಷನ ಸ್ತ್ರೀಯ ಸ್ವರದ ನಡುವೆಯೆಲ್ಲೋ ನೆಲೆಗೊಂಡಿತ್ತು. ಗಾಯಗೊಂಡ ಗೂಬೆಯ ಸ್ವರ. ಇಲ್ಲವಾದರೆ ಶೀತ ಬಾಧಿಸಿದ ಪುರಲೆ ಹಕ್ಕಿಯ ಸ್ವರ. ನಂಬೀಶನ್‌ರ ಸಂಭಾಷಣೆಯುದ್ದಕ್ಕೂ ಹೂಂಗುಟ್ಟುವಿಕೆ ಸೇರಿಕೊಳ್ಳುತ್ತಿತ್ತು. ಅದಷ್ಟೇ ಅಲ್ಲ, ಬೇಕು, ಬೇಡ ಎಂಬ ಮಾತಿನ ಬದಲಿಗೆ ಮೃದುವಾಗಿಯೂ ಗಟ್ಟಿಯಾಗಿಯೂ ಹೂಂಗುಟ್ಟಿಕೊಂಡೇ ನಂಬೀಶನ್ ತನ್ನ ಅಭಿಪ್ರಾಯ ತಿಳಿಸುತ್ತಿದ್ದರು. ಆತನ ಸಾಮೀಪ್ಯವನ್ನು ಬಹಳಷ್ಟು ಮೆಚ್ಚಿಕೊಳ್ಳುತ್ತಿದ್ದುದು ಕೇಶವದಾಸ್ ಮೆನೋನ್. ವಾರದಲ್ಲಿ ಎರಡು ಬಾರಿಯಾದರೂ ನಂಬೀಶನ್‌ರನ್ನು ಕಾಣಬೇಕೆಂಬುದು ಕೇಶವಣ್ಣನ ತೀರ್ಮಾನವಾಗಿತ್ತು. ತಾನು ಹೇಳುವುದನ್ನೆಲ್ಲ ಕೇಳಿಕೊಂಡು ಗಟ್ಟಿಯಾಗಿ ಹೂಂಗುಡುವುದಕ್ಕೆ ನಂಬೀಶನ್‌ರಂತೆ ಮತ್ತ್ಯಾರಿಗೂ ಸಾಮರ್ಥ್ಯವಾಗಲೀ ತಾಳ್ಮೆಯಾಗಲೀ ಇರಲಿಲ್ಲವೆಂದು ಅವರಿಗೆ ಗೊತ್ತಿತ್ತು. ಸಂಬಳ ಕೊಟ್ಟು ಇಟ್ಟುಕೊಂಡವರು 'ಹೌದಜಮಾನಾಂತ' ಎಷ್ಟು ಸಲ ಹೇಳಿದರೂ ಕೇಶವಣ್ಣನಿಗೆ ತೃಪ್ತಿಯಾಗುತ್ತಿರಲಿಲ್ಲ. ಮಣ್ಣಾಂಕಂಡನ್ ಎಂಬುದಾಗಿ ಕರೆಯಲ್ಪಡುವ ಕೆಲಸದ ಮುದುಕ ತನ್ನಿಂದಾದಷ್ಟರ ಮಟ್ಟಿಗೆ ಮುಖಸ್ತುತಿ ಮಾಡುತ್ತಿದ್ದ. ಆದರೆ, ಆ ಹೊಗಳುವಿಕೆಯಲ್ಲಿ ಪ್ರಾಮಾಣಿಕತೆ ಸಾಕಷ್ಟು ಪ್ರಮಾಣದಲ್ಲಿ ಉಂಟೋ ಎಂಬುದರ ಬಗ್ಗೆ ಕೇಶವಣ್ಣನಿಗೆ ಸಂದೇಹವಿತ್ತು.

ಕುಂಜನ್ ನಂಬೀಶನ್ ಮೇಲ್ಜಾತಿಯವನಾದ್ದರಿಂದ ಆತನ ಬಡತನವು ಹಿತಕರವಾದ ಸಾಮೂಹಿಕ ಬದುಕಿಗೆ ಅಡ್ಡಿಯಾಗಿರಲಿಲ್ಲ. ಅಂಬಾಳತ್ತಿನ ಕುಟುಂಬದಲ್ಲಿ ಮಾತ್ರವಲ್ಲ ತಂಡಿಯುದಲ್ಲೂ ಪಾಲಚ್ಚೇರಿಯಲ್ಲೂ ಎಲಿಯುಜಾಟ್ಟು ಅರಮನೆಯಲ್ಲೂ ನಂಬೀಶನ್‌ರಿಗೆ ಮನ್ನಣೆಯಿತ್ತು. ಪುನಯೂರ್‌ಕುಳದಲ್ಲಿ ನಂಬೀಶನ್‌ರಂಥ ಓರ್ವ ಉತ್ತಮ ಕೇಳುಗ ಬೇರೆ ಯಾರೂ ಇರಲಿಲ್ಲ. ಕೇಳಿ

ಕುಳಿತುಕೊಳ್ಳುವುದಕ್ಕಿರುವ ತಾಳ್ಮೆ ಸಂದರ್ಭೋಚಿತವಾಗಿ ಹೂಂಗುಡುವ ಸಾಮರ್ಥ್ಯ, ಅನ್ಯರನ್ನು ತೆಗಳುವಾಗ ಏನೂ ಕೇಳದವನಂತೆ ಕುಳಿತು ನಿದ್ರಿಸುವ ಸಾಮರ್ಥ್ಯ - ಇದೆಲ್ಲಾ ಇನ್ಯಾರಿಗೆ ಇದೆ ? ಯಾರೂ ನಂಬೀಶನ್‌ರ ಬಗ್ಗೆ ಕೆಟ್ಟದಾಗಿ ಮಾತಾಡಲಿಲ್ಲ. ಆತನ ಹೆಂಡತಿ ನಂಜೇಲಿ ಬ್ರಾಹ್ಮಣಿಯಮ್ಮೆಯ ಬಗ್ಗೆ ಮಾತ್ರ ಎಲ್ಲರೂ ಆಕ್ಷೇಪ ಹೇಳುವವರೆ. ಯೌವನಕ್ಕೆ ಬರಬೇಕಿದ್ದರೇನೇ ಆಕೆ ರವಿಕೆ ತೊಡಲು ಪ್ರಾರಂಭಿಸಿದ್ದಳು. ಆ ದಿನಗಳಲ್ಲಿ ಸಮಾಜ ರವಿಕೆ ಧರಿಸುವವರನ್ನು ಪರಿಷ್ಕಾರದ ಭೂತಗಳಾಗಿ ಭಾವಿಸಿದ್ದರು. ಕ್ರಮೇಣ ಎಲ್ಲ ಹೆಂಗಸರೂ ಎದೆ ಮುಚ್ಚಿಕೊಳ್ಳತೊಡಗಿದ್ದರು. ಹಾಗಿದ್ದರೂ ಬ್ರಾಹ್ಮಣಿಯಮ್ಮೆಯ ಬಗೆಗಿನ ತಿರಸ್ಕಾರವನ್ನು ನೀಗುವುದಕ್ಕೆ ಸಮಾಜಕ್ಕೆ ಸಾಧ್ಯವಾಗಲಿಲ್ಲ. ಅವರು ಸುಂದರಿಯಾದ ಹೆಂಗಸಾಗಿರಲಿಲ್ಲ. ಅವರ ಸ್ವರಕ್ಕೂ ಸೌಂದರ್ಯವಿರಲಿಲ್ಲ.

ದೇಗುಲ ದ್ವಾರದಲ್ಲಿ ನಿಂತು 'ನಿನ್ನ ಸಿರಿಪಾದಗಳ ನಾ ಸ್ತುತಿಸುವೆನು' ಎಂಬುದಾಗಿ ಒಡೆದ ಸ್ವರದಲ್ಲಿ ಹಾಡುವಾಗಲೆಲ್ಲ ಊರವರು ಸದ್ದಿಲ್ಲದೆ ನಗುತ್ತಿದ್ದರು. ಅವರು ತನ್ನ ಗಂಡನನ್ನು ಬೈಯ್ಯುತ್ತಿದ್ದರೆಂದು ನೆರೆಕರೆಯವರು ಹೇಳಿ ಸುದ್ದಿ ಮಾಡಿದ್ದರು. ಒಡೆದ ಸ್ವರ ನಿಮಿತ್ತವಾಗಿ ಮಾತುಕತೆ ಕೂಡ ಬೈಗುಳದಂತೆ ಕೇಳುತ್ತಿದ್ದುದೇ ಇರಬೇಕು, ಆ ದುರಭಿಪ್ರಾಯ ಮೂಡಿ ಬರಲು ಕಾರಣ. ಮುದಿಪ್ರಾಯದಲ್ಲಿ ಬ್ರಾಹ್ಮಣಿಯಮ್ಮ ತನಗೆ ತಾನೇ ಮಾತನಾಡತೊಡಗಿದ್ದರು. ಒಮ್ಮೆ ಗದ್ದೆಯ ಬದಿಯಿಂದಲಾಗಿ ಹೊನ್ನೆ ಹೂಗಳನ್ನು ಮೆಟ್ಟಿ ನಡೆದುಕೊಂಡು ಹೋಗುತ್ತಿರುವಾಗ ಅವರು ಪಿರಿಪಿರಿ ಮಾತನಾಡುವುದನ್ನು ನಾನು ಕೇಳಿದ್ದೆ.

'ಅಸಂಬದ್ಧ ತೋರಿಸಿದರೆ ಪೆಟ್ಟು ಕೊಡದೆ ಆದೀತಾ ?'

ನನ್ನ ಬಗ್ಗೆ ಆ ಮಾತು ಬಂತೆಂದು ಭಾವಿಸಿ ನಾನು ಹಿಂದಕ್ಕೆ ಓಡಿದ್ದೆ. ಆ ಬಳಿಕ ಬ್ರಾಹ್ಮಣಿಯಮ್ಮೆಯನ್ನು ಕಾಣುವಾಗಲೆಲ್ಲ ನಾನು ಅಡಗುತ್ತಿದ್ದೆ. ಏಕಾದಶಿ, ಷಷ್ಠಿ ಮೊದಲಾದ ದಿವಸಗಳಲ್ಲಿ ನಡೆಸುವ ವ್ರತಗಳ ಬಗ್ಗೆ ಅವರಿಗೆ ಒಳ್ಳೆ ತಿಳುವಳಿಕೆ ಇತ್ತು. ಅಂತಹ ವಿಚಾರಗಳನ್ನು ನಾಲಪ್ಪಾಟ್ಟಿನ ಮುತ್ತಜ್ಜಿಯರೊಂದಿಗೆ ಚರ್ಚಿಸುತ್ತಿದ್ದರು. ಸಾಮಕ್ಕಿಯ ಗಂಜಿ ಏಕಾದಶಿಗೆ ಉತ್ತಮ ಆಹಾರ ಎಂಬುದಾಗಿ ಅಜ್ಜಿಗೆ ತಿಳಿಯಹೇಳಿದ್ದು ನಜೇಲಿ ಬ್ರಾಹ್ಮಣಿಯಮ್ಮ. 'ಎರಡು ಹೊತ್ತು ಗೋಧಿ ಗಂಜಿ ಕುಡಿದರೆ ಹೊಟ್ಟೆಯೊಳಗೆ ತಳಮಳವಾದೀತು' ಅವರು ಹೇಳಿದರು.

'ಗೋದಿ ಉಷ್ಣ ಅಲ್ವ ?'

'ಮತ್ತೆ ? ಗೋದಿ ಭಾರೀ ಉಷ್ಣ. ಶರೀರಕ್ಕೆ ಒಳ್ಳೆಯದಲ್ಲ. ಕಂಡಿತ.'

'ಹಾಗಾದರೆ ಗೋದಿಯಲ್ಲಿ ಚಪಾತಿ ಮಾಡಿಯಲ್ವೆ ಪಂಜಾಬಿಗಳು ಮತ್ತೆಲ್ರು ತಿನ್ನೋದು ? ಅವರಿಗೆ ಅನಾರೋಗ್ಯವೇನೂ ಇಲ್ಲಲ್ಲ.'

ಮುತ್ತಜ್ಜಿಯ ಪ್ರಶ್ನೆ ಬ್ರಾಹ್ಮಣಿಯಮ್ಮೆಗೆ ಬೇಸರ ತಂದಿತು.

'ಪಂಜಾಬಿಗಳನ್ನು ಯಾರು ಕಂಡಿದ್ದಾರೆ ? ನಮಗೆ ಗೊತ್ತುಂಟಾ ಅವುಗಳಿಗೆ ಆರೋಗ್ಯವುಂಟೋ ಇಲ್ವೋಂತ ?'

'ಅದೂ ಸರೀನೆ. ಪಂಜಾಬಿಗಳನ್ನು ನಾವು ಕಾಣ್ಲಿಲ್ಲ.'

'ಮತ್ತೆ ನೀವು ಹೇಗೆ ತೀರ್ಮಾನಿಸ್ತೀರಿ ಅಮ್ಮುಕುಟ್ಯಮ್ಮೆ ಅವುಗಳಿಗೆ ಆರೋಗ್ಯವುಂಟುಂತ ?'

ಬ್ರಾಹ್ಮಣಿಯಮ್ಮ ವೀಳ್ಯ ಜಗಿದು ಕೆಂಪಾದ ಹಲ್ಲು ಬಿಟ್ಟು ನಕ್ಕರು. ಮುತ್ತಜ್ಜಿ ಬಳಲಿದವರಾಗಿ ತಲೆತೂಗಿದರು.

'ಸಾಮಕ್ಕಿ ಉಷ್ಣ ಅಲ್ವೆ ?' ಅಜ್ಜಿ ಕೇಳಿದರು.

'ಸಾಮಕ್ಕಿ ತಂಪು.... ಸಾಬಕ್ಕಿ, ಕೂವೆ ಇದ್ದ ಹಾಗೆ. ನಂಬಿಕೆಯಿಲ್ಲದಿದ್ದರೆ ನಮ್ಮ ಕುಂಜುಣ್ಣಿ ನಂಬೀಶನನ್ನು ಕೇಳಿ ನೋಡಿ.'

'ನಾನು ಯಾರನ್ನೂ ಕೇಳ್ಳಿಕ್ಕೆ ಹೋಗೋದಿಲ್ಲ. ಬ್ರಾಹ್ಮಣಿಯಮ್ಮ ಹೇಳಿದ್ದನ್ನು ನಂಬುತ್ತೇನೆ.'

'ಸಾಮಕ್ಕಿಯೊಟ್ಟಿಗೆ ತೆಂಗಿನ ಕಾಯಿ ಸುಟ್ಟು ಚಟ್ನಿ ಅರೆದರೆ ಸಾಕು. ಒಂದು ಉಪ್ಪಿನಲ್ಲಿ ಹಾಕಿದ ಮಾವನ್ನೂ ಸೇರಿಸಬಹುದು. ಭಾರೀ ಗಮ್ಮತ್ತಾಯಿತು. ಏಕಾದಶಿ ವ್ರತ ಹಿಡಿದೋನಿಗೆ ಕ್ಷೀಣ ತೋರ್ಲಿಕ್ಕಿಲ್ಲ.'

'ನಾನಿನ್ನು ಏಕಾದಶಿ ಹಿಡೀಲಿಕ್ಕಿಲ್ಲ. ಅದು ಕಂಡಿತ' ಕೆಲಸದವಳು ಹೇಳಿದಳು. 'ಕಳೆದ ತಿಂಗಳು ಹಿಡ್ದು ಸಂಜೆ ಪರೂರು ದೇವಳಕ್ಕೆ ಹೋದಾಗ ತಟ್ಟನೆ ನನ್ನ ಕಾಲಿಗೆ ಶಕ್ತಿ ಇಲ್ಲದಾಯ್ತು. ಪ್ರದಕ್ಷಿಣೆ ಹಾಕುತ್ತಿದ್ದೆ. ನನ್ನೊಟ್ಟಿಗೆ ಕಾಳಿಕುಟ್ಟಿಯಿದ್ದಳು. ಅವಳು ಹೆದ್ರಿ ಬಿಟ್ಳು. ನಾನಲ್ಲೇ ಕುಕ್ಕರುಗಾಲಲ್ಲಿ ಕೂತೆ. ನೋವಿನಲ್ಲೇಂತ. ಕಾಲಿನಲ್ಲಿ ಉಂಡೆ ಹಿಡೀತು. ಒಂದು ತೆಂಗಿನ ಗಡಿಯಷ್ಟು ದೊಡ್ಡದಾಗಿ ಉಂಡೆ ಹಿಡೀತು. ಕಾಳಿಕುಟ್ಟಿ ಉಜ್ಜಿ ಕೊಟ್ಟದ್ದರಿಂದ ನನಗೆ ಏಳೋದಕ್ಕಾಯ್ತು. ಪೂಜೆಗೆ ಬಂದೋರೆಲ್ಲ ನನ್ನ ಸುತ್ತ ಸೇರಿದ್ರು. ಗಂಡಸ್ರು ಬಂದು ನನ್ನ ಕಾಲನ್ನೇ ನೋಡೋದು. ಓ ನನ್ನ ಬ್ರಾಹ್ಮಣಿಯಮ್ಮೆ, ನಾನಲ್ಲಿಯೇ ಇಲ್ಲವಾಗಿ ಬಿಟ್ಟೇ. ನಂಬೂರಿ ಹೇಳಿದ್ರು, ಇನ್ನು ನೀವು ಏಕಾದಶಿ ಹಿಡಿಬೇಡೀಂತ. ನಿಮ್ಗೆ ಅದಕ್ಕೆ ಬೇಕಾದ ಪ್ರಾಯಾಗ್ಲಿಲ್ಲಾಂತ......'

'ನಂಬೂದಿರಿ ಹೇಳಿದ್ದು ಸರಿ. ನಿನಗಿದು ಏಕಾದಶಿ ಹಿಡಿಯುವ ಪ್ರಾಯ ಅಲ್ಲ ಲಕ್ಷ್ಮೀ.'

'ಏಕಾದಶಿಗೆ ಪ್ರಾಯಾಂತಿಲ್ಲ' ಬ್ರಾಹ್ಮಣಿಯಮ್ಮ ಹೇಳಿದರು. ಏಕಾದಶಿ ಹಿಡಿಯದ ಕಾಲವೇ ನನ್ನ ನೆನಪಿನಲ್ಲಿಲ್ಲ. ಹಿಂದುಗಳಾಗಿದ್ದರೆ ಏಕಾದಶಿ ಹಿಡೀಬೇಕು. ಗಂಡಾಗ್ಲೀ ಹೆಣ್ಣಾಗ್ಲಿ, ಏಕಾದಶಿ ಹಿಡೀದೆ ಇರಕೂಡ್ದು. ಶ್ರೀ ಪರಮೇಶ್ವರನನ್ನು ಪ್ರಸನ್ನಗೊಳಿಸದೆ ಯಾರಿಗೂ ಬದುಕೋದಕ್ಕೆ ಸಾಧ್ಯವಿಲ್ಲತಾನೇ ?'

ಬ್ರಾಹ್ಮಣಿಯಮ್ಮ ಹೇಳಿದ್ದು ನಿಜವೆಂಬುದಾಗಿ ಎಲ್ಲರೂ ಒಪ್ಪಿಕೊಂಡರು.

ಮಳೆಯಿಲ್ಲದ ಸಮಯವಾಗಿರುತ್ತಿದ್ದರೆ ಬಡಗಣ ಓತ್ತಲಿನ ಮಾಮರದಡಿಯಲ್ಲಿ ಕುಂಜುಆಚಾರಿ ಕೆಲಸ ಮಾಡುತ್ತಿರುತ್ತಾನೆ. ಅಧ್ಯಕ್ಷತೆ ವಹಿಸುತ್ತಾನೆ ಎಂದು ಹೇಳುವುದೇ ಉಚಿತ. ಭತ್ತ ಬೇಯಿಸುವುದು, ಚಾಪೆಯಲ್ಲಿ ಹಾಕಿ ಸಂಡಿಗೆಗಳನ್ನು ಒಣಗಿಸಿ ತೆಗೆದಿಡುವುದು ಆ ಮಾವಿನಮರದಡಿಯಲ್ಲಿಯೇ ನಡೆಯುತ್ತಿತ್ತು. ಅಲ್ಲಿ ಕುಳಿತರೆ ಅಡುಗೆ ಕೋಣೆಯಲ್ಲಿ ಸಿಂತ ಅಡುಗೆಯವನೊಂದಿಗೂ ಭತ್ತ ಕುಟ್ಟುವ

ಹೆಂಗಸರೊಂದಿಗೂ, ಗದ್ದೆಯ ಕಡೆಯಿಂದ ಹೋಗುವವರೊಂದಿಗೂ ಮಾತಾಡಬಹುದು. ಲೋಕಕ್ಕೆ ಸರೀ ನಡುವಿನಲ್ಲಿರುವ ಕೇಂದ್ರ ಬಿಂದುವಾಗಿತ್ತು ಆ ಮಾಮರದಡಿ. ಅಲ್ಲಿ ಕುಳಿತು ವೀಳ್ಯದೆಲೆ, ಹೊಗೆಸೊಪ್ಪು ಬಾಯಲ್ಲಿಟ್ಟು ಜಗಿಯುತ್ತ ಕುಂಜು, ಮಣೆಗಳನ್ನೂ ಅಜ್ಜಿಗೊಂಬೆಗಳನ್ನೂ ಅಡಿಕೋಲುಗಳನ್ನೂ ಇತರ ಮರಸಾಮಗ್ರಿಗಳನ್ನೂ ನಿರ್ಮಿಸುತ್ತಿದ್ದ. ಗೊಂಬೆಗಳಿಗೆಲ್ಲ ವಳ್ಳಿಯೆಂಬ ಹುಡುಗಿಯ ರೂಪದೊಂದಿಗೆ ಸಾದೃಶ್ಯವಿರುತ್ತಿತ್ತು. ತಲೆ ಮೇಲೆ ಕಟ್ಟಿದ ಕೂದಲು, ತೂಗುವ ಮೊಲೆಗಳು, ಅರ್ಧ ನಗ್ನ ರೂಪ.

'ಇನ್ನೂ ಸ್ವಲ್ಪ ಚಂದದ ಗೊಂಬೆ ಮಾಡಿಕೊಡ್ಬಹುದಾ?' ನಾನು ಕುಂಜುವನ್ನು ಒಂದುದಿನ ಕೇಳಿದೆ.

'ನಾ ತಯಾರಿಸುವ ಗೊಂಬೆಗಳಿಗೆ ಚಂದ ಇಲ್ವೆ?'

'ಚಂದವುಂಟು, ಆದ್ರೆ....'

'ತಲೆಯೂ ಮೊಲೆಯೂ ಬೇಕು ಹೆಣ್ಣುಗಳಿಗೆ. ಅದರಾಚೆ ಏನೂ ಬೇಡ' ಕುಂಜು ಹೇಳಿದ. ನಾನು ತಲೆ ಕುಲುಕಿದೆ. ಒಂದು ಗೊಂಬೆಯನ್ನು ಕೈಯಲ್ಲಿ ಹಿಡಿದುಕೊಂಡು ಕುಂಜು ಮುಂದುವರಿಸಿದ.

'ಇದಕ್ಕೆ ತಲೆಯಿಲ್ಲವೆ?'

'ಹ್ಞೂಂ!'

'ಇದಕ್ಕೆ ಮೊಲೆಯಿಲ್ಲವೆ?'

'ಇದೆ.'

'ಮತ್ತೆ ಇನ್ನು ಏನು ಬೇಕು?'

'ಏನೂ ಬೇಡ. ಆ ಗೊಂಬೆ ನನಗೆ ಬೇಡ. ಈ ಗೊಂಬೆಯನ್ನು ನೀನು ಮನೆಗೆ ಕೊಂಡ್ಹೋಗು.'

ನಾನು ಓಡಿಹೋಗಿ ಅಜ್ಜಿಯ ಮಡಿಲೇರಿ ಕುಳಿತೆ. ಅಜ್ಜಿ ರಾಮಾಯಣ ಓದುತ್ತಿದ್ದರು.

'ಯಾಕೆ ಕಮಲಾ ಏದುಸಿರು ಬಿಡ್ತಾ ಇದ್ದೀಯಾ? ಏನಾಯ್ತು?' ಅಜ್ಜಿ ಕೇಳಿದರು.

'ಈ ಕುಂಜುವಲ್ಲದೆ ಬೇರೆ ಆಚಾರಿಯೇ ಇಲ್ವೇ?'

'ನಿನಗ್ಯಾಕ ಕುಂಜೂನತ್ರ ಸಿಟ್ಟು?'

'ಕುಂಜೂನ ಗೊಂಬೆಗಳು ನನಗೆ ಬೇಡ. ಎಲ್ಲವೂ ವಳ್ಳಿಯೆಂಬ ಹುಡುಗಿಯ ಹಾಗಿವೆ. ಬೇರೆ ಆಚಾರಿಯನ್ನು ಕರೀಬಾರ್ದ?'

'ಬೇರೆ ಯಾರು ಇಷ್ಟು ಹೊತ್ತು ಇಲ್ಲಿ ಬಂದಿರ್ತಾರೆ? ಅವರಿಗೆಲ್ಲ ಬೇರೆ ಕೆಲ್ಸ ಇಲ್ವೆ?'

ಕುಂಜು ಹೊಯ್ಗೆಯಲ್ಲಿ ಎಲೆ ಬಿಡಿಸಿಟ್ಟು ಊಟ ಮಾಡುತ್ತಿದ್ದ. ಎರಡು ಸೌಟು ಅನ್ನ ಅಡಿಗೆಯವ ಎಲೆಯಲ್ಲಿ ಬಡಿಸಿಕೊಡುತ್ತಿದ್ದ. ಮಾಬಲ ಹುಳಿಯ ಗಾತ್ರದಲ್ಲಿ ಅನ್ನ ಉಂಡೆಗಟ್ಟಿ ಬರಿಯ ಸಾಂಬಾರಿನಲ್ಲಿ ಮುಳುಗಿಸಿ ಕುಂಜು ಬಹು ಪ್ರೀತಿಯಿಂದ ಊಟ ಮಾಡುತ್ತಿದ್ದ. ಅದನ್ನು ನೋಡುತ್ತ ನಾನು ಕೋಣೆಯಲ್ಲಿ

ಕುಳಿತುಕೊಳ್ಳುತ್ತಿದ್ದೆ. ನಡುನಡುವೆ ಒಲೆಯಲ್ಲಿ ಸುಟ್ಟ ಮೆಣಸನ್ನು ಕುಂಜು ಕಚ್ಚಿ ತಿನ್ನುತ್ತಿದ್ದ. ಊಟ ಮಾಡುವಾಗಲೆಲ್ಲ ಕುಂಜುವಿನ ಕಣ್ಣುಗಳು ತುಂಬಿ ಹರಿಯುತ್ತಿದ್ದುವು.

'ಕುಂಜೂಗೆ ಸಾಂಬಾರು ಇಷ್ಟಾನಾ ?' ನಾನು ಕೇಳಿದೆ.

'ಇಲ್ಲಿಯ ಸಾಂಬಾರು ಖಾರ ಹುಳಿ ಇಲ್ಲದ್ದು. ನಂಗೆ ಖಾರ ಹುಳಿ ಇಲ್ದಿದ್ರೆ ಗಂಜಿಯಾಗ್ಲೀ ಅನ್ನವೇ ಆಗ್ಲಿ ಉಣ್ಣೋದಕ್ಕೇ ಆಗೋದಿಲ್ಲ.'

'ಕುಂಜೂಗೆ ನೂರು ಮೆಣಸು ರುಬ್ಬಿ ತಿನ್ನಲ್ಲಿಕ್ಕೆ ಕೂಡೀತಾ ?'

'ನೂರಲ್ಲ. ಸಾವಿರ ಮೆಣಸು ಬೇಕಾದ್ರೂ ನಾನು ತಿಂದೇನು. ಅದೆಲ್ಲ ಚಿಕ್ಕಂದಿನ ಅಭ್ಯಾಸ. ಕಣಿ ಹೇಳೋ ಪಣಿಕ್ಕರ್ ಹೇಳಿದರು: ನೀನಸುರಗಣದವ ಕುಂಜೂ...... ನಕ್ಷತ್ರ ಕೆಟ್ಟದ್ದು. ಅಸುರರು ಮಾತ್ರ ಹೀಗೆ ಖಾರ ಹುಳಿ ತಿಂಧಾರು. ಸೇಂದಿ ಸಾರಾಯಿ ಕುಡಿದಾರು. ಮೀನು ಮಾಂಸ ತಿಂದಾರು.' ಕುಂಜುವಿನ ದಪ್ಪದ ಶರೀರಕ್ಕೆ ಚೆಂಬಿನ ಬಣ್ಣ. ಮುಖಕ್ಕೆ ಕಡು ಕೆಂಪೂ. ಭತ್ತ ಬೇಯಿಸುವಾಗ ಗುಡಾಣದಿಂದ ಹೊಮ್ಮುವ ನೀಲ ಹೊಗೆ ಆಗೊಮ್ಮೆ ಈಗೊಮ್ಮೆ ಆತನ ರೂಪವನ್ನು ಆವರಿಸಿಬಿಡುತ್ತದೆ. ಆತ ಕೊಡದಿಂದ ಹೊರಬಂದ ಭೂತ ಎಂಬುದಾಗಿ ನನಗೆ ಅನೇಕ ಬಾರಿ ತೋರಿದ್ದುಂಟು.

ಅಣ್ಣನಿಗಾಗಿ ಕುಂಜು ಹಲವು ನಮೂನೆಯ ಅಡಿಕೋಲುಗಳನ್ನು ನಿರ್ಮಿಸಿದ, ಉರುಳು ಕೋಲನ್ನೂ. ಮುಖದ್ವಾರಮನೆಯ ಓದುವ ಕೋಣೆಯಲ್ಲಿ ಅಣ್ಣ ಅವುಗಳನ್ನೆಲ್ಲ ಜೋಪಾನವಾಗಿರಿಸಿದ.

ಮುಖದ್ವಾರಮನೆಯನ್ನು ನಿರ್ಮಿಸಿದ್ದು ಕಂಡಾರನ್ ಎಂಬ ಹಿರಿಯಾಚಾರಿ. ನೆತ್ತಿಯ ಮೇಲೆ ಕಟ್ಟಿಟ್ಟ ಕೂದಲೂ ಬಾಯಲ್ಲಿ ಹುಲಿಯ ಉಗುರಿನ ಹಾಗೆ ಬಾಗಿದ ಒಂದು ಹಲ್ಲೂ ಕಪ್ಪಗೆ ಸುಕ್ಕು ಗಟ್ಟಿದ ಶರೀರವೂ ಉಳ್ಳ ಕಂಡಾರನ್ ನಾಲಪ್ಪಾಟ್ಟಿಗೆ ತಲುಪಬೇಕಿದ್ದರೆ ಸ್ವತಃ ಮಾವನೇ ಅವರನ್ನು ಬರಮಾಡಿಕೊಂಡರು.

'ಬೇರೆ ಯಾರು ವಹಿಸಿಕೊಂಡರೂ ಸರಿಯಾಗಲಿಕ್ಕಿಲ್ಲ' ಮಾವ ಹೇಳಿದರು. ಕಂಡಾರನ್ ನಕ್ಕರು. ಹಲ್ಲು ಮೆಲ್ಲಗೆ ಅಲುಗಾಡಿತು.

'ಕಣ್ಣಿನ ದೃಷ್ಟಿ ಕಡಿಮೆಯಾಗಿದೆ. ಎಲ್ಲೂ ಹೋಗೋದಿಲ್ಲ' ಅವರು ಹೇಳಿದರು. ಕಂಡಾರನ್ ಬಂದದ್ದೂ ಹೋದದ್ದೂ ಕುಂಜುವಿಗೆ ಗೊತ್ತಾಯಿತು. ಆದರೆ, ಆತ ಮಾಮರದಡಿಯಿಂದ ಏಳುವುದಾಗಲೀ, ಕಂಡಾರನ್‌ರನ್ನು ಸ್ವಾಗತಿಸುವುದಾಗಲೀ ಮಾಡಲಿಲ್ಲ.

'ಕಂಡಾರನ್ ಗೊಂಬೆಗಳನ್ನು ಮಾಡ್ಲಿಕ್ಕಿಲ್ವೆ ?' ನಾನು ಅಜ್ಜಿಯನ್ನು ಕೇಳಿದೆ.

'ಕಂಡಾರನತ್ರ ಗೊಂಬೆಗಳನ್ನು ಮಾಡೂಂತ ಕೇಳ್ಳಿಕಾಗೋದಿಲ್ಲ' ಅಜ್ಜಿ ಹೇಳಿದರು.

'ಅಳೆಯಲಿಕ್ಕೂ ಕೆತ್ತಲಿಕ್ಕೂ ಒಬ್ಬೊಬ್ಬರನ್ನು ಕರೆ ತನ್ನಿ. ಉಪಕಾರಕ್ಕೆ ಈ ಕುಂಜು ಮಾತ್ರ ಸಿಕ್ಕಾನು' ಕುಂಜು ಮಾತೆಳೆದ. ಓತ್ತಲಿನಿಂದ ಪಟ್ಟಿಯ ಕಡೆಯಿಂದ, ಒಳಕೋಣೆಯಿಂದ ಹೆಂಗಸರು ಆ ಮಾತು ಕೇಳಿ ಗಟ್ಟಿಯಾಗಿ ನಕ್ಕರು.

'ಸರೀನೆ. ಉಪಕಾರಕ್ಕೆ ಕುಂಜು ಆಚಾರಿ ಮಾತ್ರ ಸಿಗೋದು' ಅವರಲ್ಲೊಬ್ಬರು ಕುಟುಕಿದರು.

ಅಂದು ಪುನ್ನಯೂರ್‌ಕುಳದಲ್ಲಿ ಕರುಪ್ಪನ್ ಎಂಬ ಪ್ರಸಿದ್ಧನಾದ ಅಕ್ಕಸಾಲಿಗನಿದ್ದ. ಆತ ತಮಿಳರಾದ ಪಾಂಡಿ ಅಕ್ಕಸಾಲಿಗರಿಂದ ತರಬೇತಿ ಪಡೆದವರಲ್ಲಿ ಒಬ್ಬ. ಚಿನ್ನದ ಕೆಲಸದಲ್ಲಿ ಕರುಪ್ಪನನ್ನು ಮೀರಿಸಬಲ್ಲ ಇನ್ನೊಬ್ಬ ವ್ಯಕ್ತಿ ಆ ಪರಿಸರದಲ್ಲೆಲ್ಲೂ ಇರಲಿಲ್ಲ. ಆತನ ಪರಂಪರೆಯನ್ನು ಮುಂದುವರಿಸಲು ಇಬ್ಬರು ಮಕ್ಕಳೂ ಇದ್ದರು. ಶಂಕರನಾರಾಯಣನ್, ಶಿವರಾಮನ್. ಬಣ್ಣಗುಂದಿದ ಚಿನ್ನದ ಹಾಗೆ ಬಿಳಚಿಕೊಂಡವರು, ಸುಂದರಾಂಗರು, ಸ್ವಭಾವತಃ ಸೌಮ್ಯರು. ಶಂಕರನಾರಾಯಣನನ್ನು ಪುನ್ನಯೂರ್‌ಕುಳದಲ್ಲಿ ಎಲ್ಲರೂ ನಾರಾಯಣನ್ ಎಂದೇ ಕರೆಯುತ್ತಿದ್ದರು.

ನನ್ನ ಅಜ್ಜಿಗೆ ನಾರಾಯಣನ ಸಾಮರ್ಥ್ಯದ ಬಗ್ಗೆ ಮಿತಿಮೀರಿದ ಅಭಿಮಾನವಿತ್ತು. ನಾನು ಆಭರಣ ಧರಿಸಬೇಕೆಂಬುದು ಅಜ್ಜಿಯ ಬಯಕೆಯಾಗಿತ್ತು. ಆದರೆ, ಅದಕ್ಕೆ ಬೇಕಾದ ಆರ್ಥಿಕ ಸಾಮರ್ಥ್ಯ ಅವರಿಗಿರಲಿಲ್ಲ. ತೆಂಗಿನಕಾಯಿ ಮಾರಿ ಸಿಗುವ ಜುಜುಬಿ ಮೊತ್ತ ಹಾಗೂ ನನ್ನ ತಂದೆ ಕಲ್ಕತ್ತಾದಿಂದ ಕಳುಹಿಸಿಕೊಡುತ್ತಿದ್ದ ನೂರು ರೂಪಾಯಿಗಳಿಂದ ಅಜ್ಜಿ ಮನೆವಾರ್ತೆ ನೋಡಿಕೊಳ್ಳುತ್ತಿದ್ದ ಕಾಲವಾಗಿತ್ತದು. ಕಡತದ ಪೆಟ್ಟಿಗೆಯಲ್ಲಿ ಆಗೊಮ್ಮೆ ಈಗೊಮ್ಮೆ ಕೂಡಿ ಹಾಕಿಟ್ಟ ನಾಣ್ಯಗಳಿಗೆ ಚೀಟಿ ಕರೆದು ಸಿಕ್ಕಿದ ಹಣವನ್ನೂ ಸೇರಿಸಿ ಅಜ್ಜಿ ನನಗೆ ಲೋಲಾಕು ಮಾಡಿಸಿದರು, ಮಾಲೆ ಮಾಡಿಸಿದರು, ನಾಣ್ಯಗಳು ನೆಲದಲ್ಲಿ ಚೆದರಿಬಿದ್ದವು. ಅಜ್ಜಿ ನಾರಾಯಣನನ್ನು ಕರೆದು ಅರ್ಧಪವನು ಚಿನ್ನ ತರುವುದಕ್ಕೆ ಹೇಳಿ ಕಳುಹಿಸಿದರು.

'ಕೆತ್ತನೆಯ ನಕ್ಕಾಸ್ ಬಳೆ ಮಾಡುವುದಕ್ಕೆ ಸಾಕಾದೀತಾ ನಾರಾಯಣ ?'

'ಮತ್ತಿನ್ನೇನು ! ಸಾಕಾಗದಿರ್ಲಿಕ್ಕಿಲ್ಲ. ಕಾಲು ಪವನಿನಲ್ಲೂ ನಕ್ಕಾಸ್ ಬಳೆ ಮಾಡ್ಬೋದು. ಅರಗು ಜಾಸ್ತಿ ತುಂಬಿಸ್ಬೇಕೂಂತ ಮಾತ್ರ.'

'ಹಾಗಿದ್ರೆ ನಾಳೇನೇ ಬರ್ತೀಯಾ ?'

'ಓ.'

ಮಾರನೆಯ ದಿವಸ ಮುಂಜಾನೆ ಪೂರ್ವದಿಕ್ಕಿನ ಚಾವಡಿಯಲ್ಲಿ ಉಣ್ಣಿಮಾಯೆ ಹಸಿ ಸೆಗಣಿ ಬಳಿದು ಒಂದು ಹಾಳೆ ತುಂಡಿನಲ್ಲಿ ಸಾರಿಸಿ ತೆಗೆದಳು. ಒಂದು ಗಂಟೆ ಕಳೆಯಬೇಕಿದ್ದರೆ ಸೆಗಣಿ ಒಣಗಿತು. ಸುಗಂಧಭರಿತವಾದ ನೆಲ. ಗಾಳಿಸೋಂಕದ ನೈಋತ್ಯ ಮೂಲೆಯಲ್ಲಿ ಒಂದು ಬೆಂಕಿಕುಂಡ ಸ್ಥಾಪಿಸಲಾಯಿತು. ಅದರಲ್ಲಿ ಉಣ್ಣಿಮಾಯೆ ಉಮಿ ತುಂಬಿಸಿಟ್ಟಳು.

ನನ್ನ ಉಪಾಹಾರ ಮುಗಿಯಬೇಕಿದ್ದರೆ ನಾರಾಯಣನ್ ಗೇಟ್ ದಾಟಿ ಬಂದ. ಆತನ ಸ್ನಾನ ಮುಗಿದಂತಿತ್ತು. ನೀಲಿಯೂ ಗಂಜಿಯೂ ಸೇರಿಸಿ ಒಗೆದ ಪಂಚೆ ಅವನ ಉಡುಪು. ದೇಗುಲಕ್ಕೆ ಬರುವ ಪೂಜಾರಿಯ ಮುಖಭಾವ ನಾರಾಯಣನ ಮುಖದಲ್ಲಿತ್ತು.

ಅಜ್ಜಿ ನಾರಾಯಣನಿಗೆ ಒಂದು ಆವೆಮಣ್ಣಿನ ಕೂಜೆಯಲ್ಲಿ ಚಹಾವನ್ನೂ ಬಾಳೆಲೆಯ ಹೋಳಿನಲ್ಲಿ ನಾಲ್ಕು ಇಡ್ಲಿಯನ್ನೂ ಕೊಟ್ಟರು.

'ಚಟ್ನಿ ನಾರಾಯಣನಿಗೆ ಹಿಡಿಸ್ಲಿಕ್ಕಿಲ್ಲ.'

ಮುತ್ತಜ್ಜಿ ಹೇಳಿದರು: 'ಮೆಣಸಿಲ್ವಲ್ಲಾ. ಇಲ್ಲಿ ಯಾರಿಗೂ ಖಾರಾಂದ್ರೆ ಆಗೋದಿಲ್ಲ.'

'ಮೆಣಸಿಲ್ಲಾಂತ ಹೇಳ್ಳಿಕ್ಕಾಗೋದಿಲ್ಲ, ಅಜ್ಜಮ್ಮ', ಅಡುಗೆ ಮನೆಯಿಂದ ಅಡುಗೆಯುವ ಕೂಗಿ ಹೇಳಿದ: 'ನಾಲ್ಕು ಹಸಿಮೆಣಸು ಸೇರ್ಸಿದೇನೆ, ನೀರುಳ್ಳಿಯೆಲ್ಲ ಸೇರಿಸ್ಲಿಲ್ಲಾಂತ ಮಾತ್ರ.'

'ನೀರುಳ್ಳಿಗೆ ಇಲ್ಲಿ ಪ್ರವೇಶವಿಲ್ಲ, ಅಲ್ವೇ ?' ನಾರಾಯಣನ್ ನಗುತ್ತಾ ಕೇಳಿದ.

'ಅಯ್ಯೋ ಉಳ್ಳಿಯನ್ನೆಲ್ಲ ಇಲ್ಲಿ ಅಡುಗೆ ಮನೆಗೆ ಸೇರ್ಸೋದಿಲ್ಲಪ್ಪಾ' ಅಜ್ಜಿ ಹೇಳಿದರು.

ನಾರಾಯಣನ್ ಉಪಾಹಾರ ಮುಗಿಸಿ ಬಾವಿ ಬದಿಗೆ ಹೋಗಿ ಕೈ ತೊಳೆದ; ಕಾಲುಗಳನ್ನೂ. ಆಮೇಲೆ ನಿಧಾನ ನಡೆದು ಬಂದು ಬೆಂಕಿಕುಂಡದ ಎದುರು ಒಂದು ಮಣೆ ಹಾಕಿ ಅದರ ಮೇಲೆ ಕುಳಿತ. ತಾನು ತಂದ ಕಟ್ಟು ಬಿಚ್ಚಿ ಒಂದು ತುಕ್ಕು ಹಿಡಿದ ತಗಡಿನ ಪೆಟ್ಟಿಗೆಯನ್ನೂ ಹಿತ್ತಾಳೆಯ ಒಂದು ಕೊಳವೆಯನ್ನು ಹೊರತೆಗೆದ. ತಗಡಿನ ಪೆಟ್ಟಿಗೆಯಲ್ಲಿ ಸಣ್ಣ ತಕ್ಕಡಿಯೂ ಹಲವು ಆಕೃತಿಯ ಸೀಸದ ತುಂಡುಗಳೂ ಮಂಜೊಟ್ಟಿ ಬೀಜ, ಗುರುಗುಂಜಿ ಬೀಜ, ಕಲ್ಲುಗಳು, ವಜ್ರಗೋಂದು, ಮೇಣ, ಮುಂತಾದ ವಸ್ತುಗಳಿದ್ದುವು. ನಾನವುಗಳನ್ನು ಕುತೂಹಲದಿಂದ ಪರಿಶೋಧಿಸಿದೆ.

'ನಿಂಗೆ ಲೋಲಾಕು ಮಾಡಿ ಕೊಡ್ಬೇಕಾ ಮಗೂ ?' ನಾರಾಯಣನ್ ಕೇಳಿದ.

ನಾನು ತಲೆಯಾಡಿಸಿದೆ.

'ಮಗೂಗೆ ಎರಡು ಲೋಲಾಕು ಮಾಡೋದಕ್ಕೆ ಕಾಲು ಪವನು ಚಿನ್ನ ಸಾಕು. ತೆಂಕಿಣಿಯ ಮಗೂಗೆ ಕಳೆದ ತಿಂಗಳು ಲೋಲಾಕು ಮಾಡಿ ಕೊಟ್ಟಿದ್ದೆ, ಕೆಂಪು ಕಲ್ಲಿನ್ದು. ಭಾರೀ ಚೆಂದಾಗಿತ್ತು.'

'ಆ ಮಗೂನ ಹೆಸರೆಂತ ?'

'ಬಾಯೀಂತ ಹೆಸರು. ನಿನಗಿಂತ ಎರಡೋ ಮೂರೋ ವರ್ಷಕ್ಕೆ ದೊಡ್ಡೋಳಿರ್ಬೋದು. ಇಬ್ಬರು ಗಂಡುಮಕ್ಕಳ ನಂತ್ರ ಅವಳೊಬ್ಬಳೇ ಹೆಣ್ಣು ಮಗು. ಅಷ್ಟು ಚೆನ್ನಾಗಿ ಬಳೆಸಿದ್ದಾರೆ. ಕತ್ತಿನಲ್ಲಿ ತಟ್ಟುಳ್ಳ ಎರಡಳೇ ಜೈನು. ಕೈಯಲ್ಲಿ ಆರು ಬಳೆ. ಲೋಲಾಕೂ ಉಂಟು, ಎರಡು ಸುತ್ತಿನದ್ದು. ತುದಿ ಓಲಾಡುವ ಲೋಲಾಕು.

'ಎರಡು ಸುತ್ತಿನ ಲೋಲಾಕು ನೋಡೋದಕ್ಕೆ ಚೆನ್ನಾಗಿರುತ್ತಾ ?'

'ಮತ್ತಿನ್ನೇನು ! ಚೆನ್ನಾಗಿರೋದಿಲ್ವೆ ? ಆ ಕಾಳತ್ತಿಂಗಲದ ಮಗೂನ ಕಿವಿಯಲ್ಲಿ ನೋಡ್ಲಿಲ್ವೆ ? ಕಾಳತ್ತಿಂಗಲದವರಲ್ಲಿ ಎಲ್ಲಾ ಪೇಶನೂ ಉಂಟು. ಕಲ್ಲಿಟ್ಟ ನೆಕ್ಲೇಸು, ಕಲ್ಲಿಡದ ನೆಕ್ಲೇಸು, ಕಾಸಿನ ಸರ, ಅವಲಕ್ಕಿ ಸರ, ಗುಳಿ ಆಭರಣ, ಗುಳಿಗಳಿಂದ ಕೂಡಿದ ಬಳೆ ಕೂಡಾ ಉಂಟು. ಅಲ್ಲಿಂದೊಂದನ್ನು ಮದುವೆ ಮಾಡಿ ಕೊಂಡು ಹೋದ್ದು ಕೊಚ್ಚಿಯ ತಂಬುರಾನ್‌ನ ಮಗ ಅಲ್ವೇ ? ಮತ್ತೆ ಆಭರಣ ಇಲ್ಲದಿರುತ್ತ್ಯೆ ? ಸಾವಿರ ಪವನಿನ ಚಿನ್ನವಾದ್ರೂ ಇರ್ಬೋದು ಆ ಕಾಳತ್ತಿಂಗಲದ ಕುಟುಂಬದಲ್ಲಿ.'

'ನಿಮ್ಗೆ ನೆಕ್ಲೇಸು, ಗುಳಿ ಆಭರಣ ಎಲ್ಲಾ ಮಾಡ್ಲಿಕ್ಕೆ ಗೊತ್ತುಂಟೊ ?'

'ಮತ್ತಿನ್ನೇನು! ಗೊತ್ತುಂಟಾಂತನಾ? ಎಂಥ ಪೇಶನ್ ಬೇಕಿದ್ದರೂ ಮಾಡಿ ಕೊಡುವ. ದುಡ್ಡು ಕಳುಹಿಸ್ಲಿಕ್ಕೆ ಅಪ್ಪನಿಗೆ ಕಾಗದ ಬರೆದ್ರೆ ಸಾಕು. ಅಪ್ಪ ಕಲ್ಕತ್ತಾದಿಂದ ಬರೋವಾಗ ನಿನ್ನನ್ನು ನೋಡಿದ್ರೆ ಗುರ್ತು ಸಿಕ್ಲಿಕ್ಕಿಲ್ಲಾ. ಕಿವೀಲಿ ಕೊಡೆಕುಡ್ಕವೂ, ಕತ್ತಿನಲ್ಲಿ ಹೊಸ ಪೇಶನ್‌ನ ಮಾಲೆಗಳೂ, ಕೈ ತುಂಬಾ ಬಳೆಯೂ ತೊಟ್ಕೊಂಡು ಹೋಗಿ ಮೆಟ್ಲ ಮೇಲೆ ನಿಂತರೆ ಅಪ್ಪ, ಇದ್ಯಾರು ಈ ರಾಜಕುಮಾರೀಂತ ಕೇಳ್ತಾರು.'

ನಾರಾಯಣನೇ ಗಟ್ಟಿ ನಗಾಡಿದ. ನಾನೂ ಖುಷಿಯಿಂದ ನಗಾಡಿದೆ. 'ಅದೆಲ್ಲ ತೊಟ್ಟುಕೊಂಡರೆ ನಾನೂ ಬಾರೀ ಚಂದಕಂಡೇನು ಅಲ್ವ?'

'ಮತ್ತಿನ್ನೇನು!'

'ನೀನು ತುಂಬ ಚಂದ ಕಾಣ್ತಿ, ಕಂಡಿತ. ಮಗೂ, ಚೋಟಾಣಿಕ್ಕರ ಭಗವತಿಯನ್ನು ನೋಡಿದ್ದೀಯಾ? ಮೈತುಂಬಾ ಆಭರಣ. ಎಂಥ ಚಂದ ಗೊತ್ತಾ! ಹುಡುಗಿಯರು ಆಭರಣ ತೊಟ್ರೆ ನೋಡ್ಲಿಕ್ಕೆ ನಾಲ್ಕು ಕಣ್ಣು ಬೇಕು.' ನಾಲಪ್ಪಾಟ್ಟಿನ ಹೆಂಗಸರು ಮಹತ್ಮಾಗಾಂಧಿಯನ್ನು ಕಂಡು ಆಭರಣಗಳನ್ನೆಲ್ಲ ಬಿಚ್ಚಿ ಅವರಿಗೆ ಉಡುಗೊರೆ ಮಾಡಿದರು ಎಂದು ನಾರಾಯಣನ್ ಹೇಳಿದ.

'ಗಾಂಧಿಗೆ ಕೊಡದಿರುತ್ತಿದ್ದರೆ ಈಗ ಅದೆಲ್ಲಾ ಮಗೂಗೆ ಸಿಕ್ತಿತ್ತು' ನಾರಾಯಣನ್ ಗೊಣಗಿದ.

'ಈ ಊರಿನಿಂದ ಆಮೇಲೆ ಯಾರಾದರೂ ಗಾಂಧೀಜಿಗೆ ಆಭರಣಗಳನ್ನು ಕೊಟ್ರೆ?' ನಾನು ಕೇಳಿದೆ.

'ಪುರ್ಸೊತ್ತುಂಟು. ಯಾರಿಗೆ ಹುಚ್ಚುಂಟು? ಅವನವನಿಗೆ ಹಾಕ್ಕಳ್ಳೋದಕ್ಕೆ ಮಾಡಿದ ಆಭರಣವನ್ನು ಎಲ್ಲಿಂದಲೋ ಭಾಷಣ ಮಾಡೋದಕ್ಕೆ ಬಂದ ಗಾಂಧಿಗೆ ಕೊಡ್ತಾರ್ಯೆ? ಯಾರೂ ಕೊಡ್ಲಿಲ್ಲ ಮಗೂ. ಈ ಇಲ್ಲಿರೋರಿಗೆ ಮಾತ್ರ ಆ ಪೆದ್ದುತನ ಇರೋದು. ಕೊಂಗ್ರೆಸ್ಸಲ್ವೆ? ಈಗ ಮಗೂನ ಚಿಕ್ಕಮ್ಮನ ಪಾಡು ನೋಡ್ಲಿಲ್ವಾ? ಕತ್ತು ಖಾಲಿ, ಸನ್ಯಾಸಿನಿಯಂತೆ. ನಿನ್ನ ಚಿಕ್ಕಮ್ಮನಿಗೇನು ಕಮ್ಮಿ? ಬಣ್ಣಿಲ್ವಾ? ಚಂದಿಲ್ವಾ? ಗುಂಗುರು ಕೂದ್ಲಿಲ್ವಾ? ಹಾಗಿದ್ರೂ ಒಂದು ವೀಸ ಚಿನ್ನ ಅದ್ರ ಮೈಮೇಲಿಲ್ವಲ್ಲಾ. ಗಾಂಧಿಯ ಉಪಾಯ ಹೇಗಿದೆ? ಹೆಂಗ್ಸರ ಕೈಯಲ್ಲೂ ಕುತ್ತಿಗೇಲೂ ಇರುವ ಚಿನ್ನವೆಲ್ಲಾ ತೆಗೆದು ರಾಶಿ ಹಾಕಿ ಕೊಂಡೋಗ್ಲಿಕ್ಕೇ ಗುರುವಾಯೂರ್‌ಗೆ ಬಂದದ್ದು. ನಾಲಪ್ಪಾಟ್ಟಿನ ಚಿನ್ನವೆಲ್ಲ ರಾಶಿ ಹಾಕಿ ಕೊಂಡೋದ್ರು'. ನಾರಾಯಣನ ನಗೆ ನನಗೆ ಕಿರಿಕಿರಿಯುಂಟುಮಾಡಿತು. ನಾನು ಮತ್ತೆ ಆತನಲ್ಲಿ ಮಾತನಾಡದೆ ಸುಮ್ಮನಿದ್ದೆ. ಆತ ಬೆಂಕಿಯಿಂದ ಕಪ್ಪಗಿನ ಚಿನ್ನದ ತುಂಡೊಂದನ್ನು ಇಕ್ಕುಳದಿಂದ ತೆಗೆದ.

ಅಂದು ಮಧ್ಯಾಹ್ನ ಮೇಲಿನ ವರಾಂಡದಲ್ಲಿ ನೂಲುತ್ತಿದ್ದ ಅಜ್ಜಿಯವರಲ್ಲಿ ನಾನು ಕೇಳಿದೆ:

'ಯಾಕೆ ಇಲ್ಲಿ ಎಲ್ಲಾ ಕೋಣೆಯಲ್ಲೂ ಗಾಂಧೀಜಿಯ ಫೋಟೋ?'

'ಮಹಾತ್ಮಾಜಿ ನಮಗೆ ದೇವರ ಹಾಗಲ್ವೆ?'

'ಮಹಾತ್ಮಾಜಿ ಕೇಳಿದ್ರೆ ಎಲ್ಲವನ್ನೂ ಕೊಟ್ಟು ಬಿಡ್ತೀರಾ?'

'ಕೊಡ್ತೇವೆ. ಕೇಳಿದ್ರೆ ಕೊಡದಿರ್ಲಿಕ್ಕಾಗ್ತದ?'

'ನನ್ನನ್ನು ಬೇಕೂಂತ ಕೇಳಿದ್ರೂ ಹಿಡಿದು ಕೊಡ್ತೀರಾ ?'

ಅಜ್ಜಿ ತಕಲಿ ಕೆಳಗಿಟ್ಟು ಜೋರಾಗಿ ನಕ್ಕರು. 'ಕೊಡ್ಲಿಕ್ಕಿಲ್ಲ ಕಮಲಾ, ಖಂಡಿತ. ಮಹಾತ್ಮಾಜೀಂತ ಮಾತ್ರ ಅಲ್ಲ, ಸಾಕ್ಷಾತ್ ಗುರುವಾಯೂರಪ್ಪನೇ ಬಂದು ಕೇಳಿದ್ರೂ ನಿನ್ನನ್ನು ನಾನು ಕೊಡ್ಲಿಕ್ಕಿಲ್ಲ.'

ನಮ್ಮ ನೆರೆಯವರೂ ನೆಂಟರೂ ಆದ ಅಂಬಾಳತ್ತಿನ ಕುಟುಂಬದವರಿಗೆ ಒಮ್ಮೆ ಪ್ರತಿಷ್ಠಿತನಾದ ಒಬ್ಬ ಅಡುಗೆಯವನಿದ್ದ. ಆರಡಿ ಎತ್ತರವಿರಬಹುದಾದ ಕುಂಜುನಾಯರ್, ಇಡಪ್ಪಾಳಿನವ. ಅಂಬಾಳತ್ತಿನ ಹೊರ ಮನೆಯ ಹಾಗೂ ಅಡುಗೆ ಮನೆಯ ಬಾಗಿಲುಗಳಿಗೆ ಎತ್ತರವಿಲ್ಲದ್ದಕ್ಕೆ ಇರಬೇಕು. ಕುಂಜುನಾಯರ್‌ಗೆ ಬಗ್ಗಿ ಬಗ್ಗಿ ನಡೆಯುವುದು ಅಭ್ಯಾಸಕ್ಕೆ ಬಿದ್ದುದು. ಅವರ ಬಾಯಲ್ಲಿ ಯಾವತ್ತೂ ವೀಳ್ಯದೆಲೆಯದ್ದೂ ಹೊಗೆ ಸೊಪ್ಪಿನದ್ದೂ ಕೆಂಪು ಮಿಶ್ರಣವಿರುತ್ತಿತ್ತು. ಎಡೆಗೊಮ್ಮೆ ಶುದ್ಧ ಗಾಳಿಗಾಗಿ ಮೇಲೆ ಬರುವ ಮೀನಿನ ಹಾಗೆ ಅವರು ಕತ್ತಲ ಅಡುಗೆ ಮನೆಯಿಂದ ಹೊರಕ್ಕೆ ಬಂದು, ಒಂದು ಕೈಯಲ್ಲಿ ವರಾಂದದ ಗೋಡೆ ಹಿಡಿದು ಅಂಗಳಕ್ಕೆ ಬಾಗಿ ಗಟ್ಟಿಯಾಗಿ ಉಗುಳುವ ಅಭ್ಯಾಸ ಮಾಡಿಕೊಂಡಿದ್ದರು. ಕುಂಜುನಾಯರ್ ಪ್ರಕಟ ಪಡಿಸುವ ಅಭಿಪ್ರಾಯಗಳನ್ನು ವಿರೋಧಿಸಲಿಕ್ಕೆ ಯಾರೂ ಮುಂದಾಗುತ್ತಿರಲಿಲ್ಲ. ಲೋಕದಲ್ಲಿ ನಡೆಯುವ ಎಲ್ಲಾ ಘಟನೆಗಳ ಬಗ್ಗೆಯೂ ಅವರಲ್ಲಿ ಸ್ಪಷ್ಟವಾದ ಅಭಿಪ್ರಾಯವಿರುತ್ತಿತ್ತು.

ಅಂಬಾಳತ್ತಿನ ಕುಟುಂಬ ಒಂದು ಅವಿಭಕ್ತ ಕುಟುಂಬವಾಗಿತ್ತು. ಸಂಪನ್ನ ಕುಟುಂಬ. ಆ ಕಾಲದಲ್ಲಿ ಕುಟುಂಬ ವಿಭಜನೆ ಮಾಡುವುದರ ಬಗ್ಗೆ ಯಾರೂ ಗಮನ ಹರಿಸಿರಲಿಲ್ಲ. ಕುಂಜುನಾಯರ್‌ರ ಪಾಕ ಅವರಿಗೆಲ್ಲ ಪ್ರಿಯವಾಗಿತ್ತು. ಅವರು ತೀರಿ ಹೋದ ನಂತರ ಬಂದ ಅಡುಗೆಯವನ ಸ್ಟ್ಯಾಂಡರ್ಡ್ ತೀರಾ ಕೆಳಮಟ್ಟದ್ದಾಗಿತ್ತು. ಯಾರಿಗೂ ಊಟ ರುಚಿಸುತ್ತಿರಲಿಲ್ಲ. ಕುಟುಂಬ ವಿಭಜನೆಯಾಗುವುದಕ್ಕಿದ್ದ ಮೂಲ ಕಾರಣ ಅದೇ ಆಗಿತ್ತು. ಅಲ್ಲಿ ನನ್ನೊಂದಿಗೆ ಆಡಿ ಬೆಳೆದ ಮಕ್ಕಳು ನನಗೀ ಗುಟ್ಟನ್ನು ಹೇಳಿಕೊಟ್ಟರು. ಅಂಬಾಳತ್ತಿನ ಮನೆ ನೋಡುವುದಕ್ಕೆ ಸುಂದರವಾಗಿತ್ತು. ಪೂರ್ವದಿಕ್ಕಿನಲ್ಲಿ ಜಂಬುನೇರಳೆ ಮರಗಳೂ ಹಲವಿಧ ದಾಸವಾಳ ಗಿಡಗಳೂ ಮಂದಾರಮರವೂ ಬೆಳೆದು ನಿಂತ ತೋಟವಿತ್ತು. ಪೂರ್ವದಿಕ್ಕಿನ ಅಂಗಳದ ನೆರಳಿನಲ್ಲಿ ಒಂದಾಗಿ ದೀವಿ ಹಲಸಿನ ಮರ ನಿಂತಿತ್ತು. ವಿಶಾಲವಾದ ಹೊರಚಾವಡಿಯಲ್ಲಿ ಮೂರು ಕಂಬಗಳಿದ್ದುವು. ಕುಳಿತುಕೊಳ್ಳುವುದಕ್ಕೆ ಸಿಮೆಂಟ್ ದಿಣ್ಣೆಗಳೂ. ಹೊರಚಾವಡಿಯ ಒಂದು ಬೆತ್ತದ ಮಂಚದಲ್ಲಿ ಯಜಮಾನರಾದ ಕೇಶವದಾಸ ಮೇನೋನ್ ಒರಗಿ ಮಲಗಿರುತ್ತಿದ್ದರು. ಪಕ್ಕದ ದಿಣ್ಣೆ ಮೇಲೆ ಮಣ್ಣಾಂಗಂಡನ್ ಎಂಬ ಮುದ್ದಾದ ಹೆಸರುಳ್ಳ ಕಾರ್ಯಸ್ಥ ಕುಳಿರುತ್ತಿದ್ದ. ಕೇಶವದಾಸ ಮೆನೋನ್ ವೀಕ್ಲಿಯಲ್ಲಿ ಬರುವ ಪದಬಂಧಗಳನ್ನು ಬಿಡಿಸುವುದರಲ್ಲಿ ಸಮರ್ಥರಾಗಿದ್ದರು. ಸರಿಯಾದ ಪದ ಸಿಗದೇ ಹೋದಾಗ ಅವರು ಹೇಳುತ್ತಿದ್ದರು: 'ಪದ ಸಿಕ್ಲಿಲ್ವಲ್ಲ ಮಣ್ಣಾಂಗಂಡಾ.'

'ಗುರುವಾಯೂರಪ್ಪನನ್ನು ಮನಸಾರೆ ಧ್ಯಾನಿಸಿರಿ..... ಆಗ ಯಾವ ಪದ ಬೇಕಾದ್ರೂ ಸಿಗುತ್ತೆ, ಕಂಡಿತ.'

ಒಮ್ಮೆ ಕೇಶವದಾಸ್ ಮೇನೋನರಿಗೆ ಅಂಚೆ ಮೂಲಕ ಐವತ್ತು ರೂಪ್ಯಾ ಬಂತು.

'ಸಾವಿರ ರೂಪ್ಯಾ ನಷ್ಟ ಮಾಡಿಕೊಂಡು ಈಗ ಐವತ್ತಾದರೂ ಸಿಕ್ಕಿತಲ್ಲ.' ಅವರು ನಗುತ್ತಾ ಹೇಳಿದರು.

'ಇದರೊಂದಿಗೆ ಒಳ್ಳೆಯ ಕಾಲ ಬರೋ ಲಕ್ಷಣ ಕಾಣೆಸ್ತಾ ಇದೆ' ಮಣ್ಣಾಂಗಂಡನ್ ಹೇಳಿದ. ನಾಲಾಪ್ಪಾಟ್ಟಿನಲ್ಲಿ ಅಡುಗೆಯವನಾಗಿ ಆ ಕಾಲದಲ್ಲಿ ಒಬ್ಬ ಚಾಪ್ಪನ್ ನಾಯರ್ ಎಂಬಾತನಿದ್ದ. ಆತ ಬರಿಯ ಹಳ್ಳಿಗ. ಪುನತ್ತೂರ್‌ಕುಳದಲ್ಲಿದ್ದ ಚಾಪ್ಪನ್ ನಾಯರ್ ಎಂಬ ಮಿಲಿಟರಿಯವನ ಹಾಗೆ ಇಂಗ್ಲಿಷ್, ಹಿಂದೂಸ್ತಾನಿಗಳೇನೂ ನಾಲಪ್ಪಾಟ್ಟಿನ ಚಾಪ್ಪನ್ ನಾಯರಿಗೆ ಗೊತ್ತಿರಲಿಲ್ಲ. ಆತನ ಕುಂಬಳಕಾಯಿ ಸಾಂಬಾರಿನ ಪರಿಮಳ ಅನುಭವಿಸಿ ಗೊತ್ತಿದ್ದ ಯಾವನಿಗೂ ಅದನ್ನು ಮರೆಯುವುದಕ್ಕೆ ಸಾಧ್ಯವಿರಲಿಲ್ಲ. ಆದ್ದರಿಂದಲೇ ಇರಬೇಕು, ಅಂಬಾಳತ್ತಿನ ಮಕ್ಕಳು ಹೆಚ್ಚಿನ ದಿವಸಗಳಲ್ಲೂ ನಾಲಪ್ಪಾಟ್ಟಿಗೆ ಬಂದು ಊಟ ಮಾಡಿ ಹೋಗುತ್ತಿದ್ದುದು. ಅಂಬಾಳತ್ತಿನಲ್ಲಿ ಎಲ್ಲಾ ಗುರುವಾರವೂ ಆಡಿನ ಮಾಂಸದ ಸುಕ್ಕ ಮಾಡುತ್ತಿದ್ದರು. ನಾಲಪ್ಪಾಟಿನವರು ಸಸ್ಯಾಹಾರಿಗಳಾಗಿದ್ದರು. ನೀರುಳ್ಳಿ, ಬೆಳ್ಳುಳ್ಳಿಯನ್ನು ಯಾವತ್ತೂ ಉಪಯೋಗಿಸುತ್ತಿರಲಿಲ್ಲ. ಆದ್ದರಿಂದಲೇ ಇರಬೇಕು, ಮೊದಲ ಬಾರಿಗೆ ನಾನು ಅಂಬಾಳತ್ತಿನಲ್ಲಿ ಊಟ ಮಾಡಿದಾಗ ಅವರ ಆಹಾರದ ಪ್ರತ್ಯೇಕ ರುಚಿ ನನಗಿಷ್ಟವಾಗದೇ ಹೋದದ್ದು.

ನಾಲಪ್ಪಾಟ್ಟಿನ ಹೆಂಗಸರು ಬೇರೆಯವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಇನ್ನೊಬ್ಬರ ಎದುರಿನಲ್ಲಿ ಏನನ್ನೂ ತಿನ್ನುತ್ತಿರಲಿಲ್ಲ. ಆ ಬಳಿಕ ಶಾಲೆಯೂ ಕಾಲೇಜೂ ಪರಿಷ್ಕಾರ-ಮುಂತಾದವು ಬಂದು ಸೇರಿದಾಗ ಜೀವನ ಪದ್ಧತಿಯನ್ನು ಎಲ್ಲರೂ ನವೀಕರಿಸಬೇಕಾಗಿ ಬಂತು.

ಒಮ್ಮೆ ಅಂಬಾಳತ್ತಿಗೆ ಹೋಗಿ ಹಿಂದಿರುಗಿದಾಗ ಅಜ್ಜಿ ನನ್ನಲ್ಲಿ ಕೇಳಿದರು.

'ಹುಳಿಗೂ, ಪಲ್ಯಕ್ಕೂ, ಕೊದ್ದೆಲಿಗೂ ಎಲ್ಲಕ್ಕೂ ನೀರುಳ್ಳಿ ಹಾಕಿದ್ರಾ ?'

ಹೆಸರು ಕಾಳು ಹುರಿದು ತರಿ ಮಾಡಿ ಬೇಯಿಸಿ ಮಾಡಿದ ಮೇಲೋಗರದಲ್ಲಿ ನಾನು ಊಟ ಮಾಡಿದ್ದು.

ಅಂಬಾಳತ್ತಿನ ರಾತ್ರಿಯೂಟಕ್ಕೆ ಅಜ್ಜಿ ಊಹಿಸಿದಂತೆಯ ಗ್ರಾಮ್ಯ ಪದಾರ್ಥಗಳೇನೂ ಇರಲಿಲ್ಲ. ನಾನು ನನ್ನ ಗೆಳತಿಯ ಒತ್ತಾಯಕ್ಕೆ ಮಣಿದು ಆ ಮನೆಯಲ್ಲಿ ಉಳಿದುಕೊಂಡದ್ದಿದೆ, ಐದೋ ಆರೋ ಬಾರಿ. ಕೊನೆಗೆ ಅಲ್ಲಿಗೇ ವಧುವಾಗಿ ಬರಬೇಕಾದೀತೆಂದು ಬಾಲ್ಯದ ದಿನಗಳಲ್ಲಿ ಊಹಿಸಿಯೇ ಇರಲಿಲ್ಲ.

ನಾಲಪ್ಪಾಟಿನ ಚಾಪ್ಪನ್ ನಾಯರ್ ದೈವ ಭಕ್ತನಾಗಿದ್ದ. ಆತನ ಹಣೆಯಲ್ಲಿ ಹಗಲು ಗಂಧದ ನಾಮವೂ ಸಂಜೆಯ ನಂತರ ಭಸ್ಮದ ನಾಮವೂ ಕಾಣಸುತ್ತಿತ್ತು. ತಿಂಗಳಿಗೆ ಐದು ರೂಪ್ಯಾ ಸಂಬಳ. ಮೊದಲ ವಾರದಲ್ಲಿಯೆ ಸಣ್ಣ ಕಂತುಗಳಾಗಿ ಅದಷ್ಟನ್ನೂ ಆತ ಅಜ್ಜಿಯ ಕೈಯಿಂದ ಮುಂಗಡವಾಗಿ ತೆಗೆದುಕೊಳ್ಳುತ್ತಿದ್ದ. ಒಂದನೆಯ ತಾರೀಕಿನಂದು ಎಂಟಾಣೆ ಚಿಲ್ಲರೆ ಬಾಕಿಯಿದ್ದರೆ ಅಜ್ಜಿ ಕಡತದ ಪೆಟ್ಟಿಗೆಯಿಂದ ತೆಗೆದು

ಚಾಪ್ಪನ್‌ನಾಯರ್‌ಗೆ ಕೊಡುತ್ತಿದ್ದರು. ತಿಂಗಳಿಗೊಮ್ಮೆ ಆತ ಗೆರೆಯ ಷರ್ಟು ಹಾಕಿ ತನ್ನ ಹಳ್ಳಿಗೆ ಹೋಗುತ್ತಿದ್ದ. ಒಂದು ರಾತ್ರಿಯಿದ್ದು ಹಿಂದಿರುಗುತ್ತಿದ್ದ. ಹೋಗುವಾಗ ಕಾಗದದ ಪೊಟ್ಟಣದಲ್ಲಿ ನೈಯಪ್ಪ, ಕಲ್ಲುಸಕ್ಕರೆ ಕೊಂಡು ಹೋಗುತ್ತಿದ್ದ.

'ಆತನ ಹೆಂಡ್ತಿಗಿರಬ್ಬೇಕು' ಕೆಲಸದಾಕೆ ಹೇಳಿದಳು. ತಿಂಗಳಿಗೊಮ್ಮೆ ನೋಡಲು ಹೋಗುವಾಗ ಬರಿಗೈಯಲ್ಲಿ ಹೋಗ್ಬಾರದಲ್ಲ. ಆತ ಬರೀ ಬಡವ. ಒಬ್ಬ ಸಾತ್ವಿಕ.

ಆ ನಡುವೆಯೆ ತೆಂಡಿತ್ತಿನಲ್ಲಿ ಕೆಲಸ ಮಾಡುತ್ತಿದ್ದ ಲಕ್ಷ್ಮಿ ಎಂಬ ಹೆಂಗಸು ಹಸಿ ಸೆಗಣಿ ತಿಂದದ್ದು. ಸ್ವಲ್ಪವೇನಲ್ಲ. ಒಂದು ಬಟ್ಟಲು ತುಂಬ. ಅಂಗಳ ಗುಡಿಸಿ ಸಾರಿಸುವ ಉಣ್ಣಿಮಾಯೆ ನಮ್ಮಲ್ಲಿಗೆ ಸುದ್ದಿ ತಂದದ್ದು. ಒಂದು ಮುದ್ದೆ ಹಸಿ ಸೆಗಣಿ ತಿಂದರೆ ಮೂಗುತಿ ಕೊಡುತ್ತೇವೆಂದು ತೆಂಡಿಯತ್ತಿನ ಹುಡುಗರು ಹೇಳಿದರಂತೆ. ಕೂಡಲೆ ಲಕ್ಷ್ಮಿ ಸೆಗಣಿ ತಂದಿಟ್ಟು ಬಾಚಿ ತಿನ್ನತೊಡಗಿದಳು. ಎಲ್ಲ ತಿಂದು ಮುಗಿಸಬೇಕಿದ್ದರೆ ಯಜಮಾನರು ಹೇಳಿದರು. 'ನೀನಿಷ್ಟೊಂದು ಗಲೀಜು ಹೆಂಗಸೆಂದು ಈಗಷ್ಟೆ ಗೊತ್ತಾಯಿತು. ನೀನಿನ್ನು ಇಲ್ಲಿ ಕೆಲಸಕ್ಕೆ ಬೇಡ.'

'ಅವಳಿಗೆ ಅದು ಸರಿಯಾದ ಶಿಕ್ಷೆ.' ಅಜ್ಜಿ ಹೇಳಿದರು.

'ಮಾನಗೆಟ್ಟೋಳು, ಶವ!'

ಆದರೆ, ಒಂದು ವಾರ ಕಳೆಯಬೇಕಿದ್ದರೆ ಲಕ್ಷ್ಮಿ ಮತ್ತೆ ತನ್ನ ಹಳೆಯ ಕೆಲಸಕ್ಕೆ ಮರಳಿದಳು. ಆದರೆ ಲಕ್ಷ್ಮಿ ಎಂಬ ಹೆಸರು ಇಲ್ಲವಾಯಿತು. 'ಹಸಿ ಸೆಗಣಿ ತಿನ್ನೋಳು' ಎಂಬ ಹೆಸರಿನೊಂದಿಗೆ ಅವಳು ಊರಲ್ಲಿ ಪ್ರಚಾರಕ್ಕೆ ಬಂದಳು. ಆಮೇಲೆ ಅವಳನ್ನು ಯಾರೂ ಅಡುಗೆ ಮನೆಗೆ ಸೇರಿಸಲಿಲ್ಲ. ಗುಡಿಸಿ ಸಾರಿಸುವುದಕ್ಕೆ ನೆಲ ಒರಸುವುದಕ್ಕೆ ಮಾತ್ರ ಅವಳನ್ನು ಬಳಸುತ್ತಿದ್ದರು.

ನಮ್ಮ ನೆರೆಕರೆಯ ಒಬ್ಬಾತನಿಗೆ ಇದ್ದಕ್ಕಿಂತೆಯೆ ಹುಚ್ಚು ಹಿಡಿಯಿತು. ಆತ ಗಡ್ಡ ಬಿಟ್ಟು ಕೂದಲು ಬೆಳೆಸಿ, ಸ್ನಾನ ನಿದ್ರೆಗಳನ್ನು ಪೂರ್ತಿಯಾಗಿ ಬಿಟ್ಟು ಅಂಗಳದ ಹೊಯ್ಗೆಯ ಮೇಲೆ ಸೂರ್ಯನನ್ನು ನೋಡುತ್ತಾ ಕುಳಿತುಕೊಳ್ಳುತ್ತಿದ್ದ. ಒಂದು ದಿನ ಅಮ್ಮನ ಮಾವನೂ ಅವರ ಸ್ನೇಹಿತನಾದ ಮಾರಾತ್ತಾಟ್ಟಿನ ಶಂಕರನ್ ನಾಯರೂ ಆ ದಾರಿಯಾಗಿ ನಡೆದು ಹೋಗುತ್ತಿದ್ದಾಗ ಹುಚ್ಚು ಹಿಡಿದಿದ್ದ ಯುವಕ ಎದ್ದು ಅವರಿಗೆ ನಮಸ್ಕರಿಸಿದ.

'ಗಾಂಧಿ ಜೈ, ಕಸ್ತೂರಿಬಾಯಿ ಜೈ' ಆತ ಗಟ್ಟಿಯಾಗಿ ಕೂಗಿ ಹೇಳಿದ. ಮಾವ ತುಂಬ ಹೊತ್ತು ಅದನ್ನು ಮತ್ತೆ ಮತ್ತೆ ಹೇಳುತ್ತ ನಮ್ಮನ್ನೆಲ್ಲ ನಗಿಸಿದರು.

'ಅವನಿಗೆ ಸರಿಯಾದ ಹುಚ್ಚೇ ಹಿಡಿದಿದೆ......'

ಒಳ್ಳೆ ವಿಚಾರವನ್ನಲ್ವೆ ಅವ ಹೇಳಿದ್ದು.

'ಕಸ್ತೂರಿಬಾಯೀಂತ ಮಾವನನ್ನು ಕಂಡು ಕರೆದದ್ದೋ ಶಂಕರನ್ ನಾಯರನ್ನು ಕಂಡೋ' ನಾನು ಅಜ್ಜಿಯ ಹತ್ತಿರ ಕೇಳಿದೆ.

ಅಜ್ಜಿ ಉತ್ತರಿಸಲಿಲ್ಲ.

ಆ ದಿನಗಳಲ್ಲಿ ನಾಲಪ್ಪಾಟ್ಟು ಮನೆಯಲ್ಲಿ ಕಕ್ಕಸಗಳಿರಲಿಲ್ಲ. ಸುಮಾರು ಒಂದು

ಫರ್ಲಾಂಗು ನಡೆದರೆ ಪಶ್ಚಿಮದ ಹಿತ್ತಿಲಿನ ಉತ್ತರ ಭಾಗದಲ್ಲಿ ಸಂಡಾಸ ನೆಲೆಗೊಂಡಿತ್ತು. ಗಂಡಸರಿಗೂ ಹೆಂಗಸರಿಗೂ ಬೇರೆ ಬೇರೆ ಸಂಡಾಸಗಳು. ಒಂದೊಂದರಲ್ಲೂ ಇಬ್ಬರಿಗೆ ಕುಳ್ಳಿರಬಹುದಾದ ಸೌಕರ್ಯ. ಸಂಡಾಸಿನ ಹಿಂಭಾಗದಲ್ಲಿ ಕವುಳಿಗೆ ಹೂಗಳು ಸಮೃದ್ಧವಾಗಿ ಬೆಳೆದು ನಿಂತಿದ್ದುವು. ಎರಡು ಎಕ್ಕೆಯ ಗಿಡಗಳೂ ಕೂಡ.

ಮನೆಯ ಕೆಲಸದವರು ಸಂಡಾಸ ಬಳಸುತ್ತಿರಲಿಲ್ಲ. ಬಳಸಲು ಅಧಿಕಾರವಿರಲಿಲ್ಲವೆಂದೇನಲ್ಲ. ಬಳಸುವ ಆಸಕ್ತಿಯೇ ಇರಲಿಲ್ಲ. ಅವರು ಸಂಜೆಯ ಹೊತ್ತಿಗೆ ಗುಂಪಾಗಿ ಪಶ್ಚಿಮದ ಬಯಲಿನ ಉತ್ತರದ ತೋಡಿಗೆ ನಡೆಯುತ್ತಿದ್ದರು. ನೆಲ್ಲಿ ಮರದ ಕೆಳಗೆ ಒಂದು 'ಸಂಚಾರ' ಉಂಟೆಂಬುದಾಗಿ ಸುದ್ದಿ ಹರಡಿದ್ದೂ ಅವರೆ. ಸಂಜೆ ಹೊತ್ತಿಗೆ ಯಾರೂ ಆ ಕಡೆ ಹೋಗದಂತೆ ಮಾಡಲು ಅವರು ಕಂಡುಕೊಂಡ ಉಪಾಯವಾಗಿರಬೇಕು.

ಕತ್ತಲೆಯಲ್ಲಿದ್ದುಕೊಂಡು ಅವರು ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ಕೆಲವೊಮ್ಮೆ ಉತ್ತರದ ವರಾಂಡದಲ್ಲಿ ಕುಳಿತುಕೊಂಡರೆ ದೂರದಲ್ಲಿ ಹರಡಿದ ಮಂಜಿನಿಂದ ಅವರ ಮಾತುಗಳನ್ನು ಹೆಕ್ಕಿ ತೆಗೆಯಲು ನನಗೆ ಸಾಧ್ಯವಾಗುತ್ತಿತ್ತು. ನನ್ನನ್ನು ಯಾವತ್ತೂ ಅವರು ಬಯಲಿಗೆ ಕರೆದುಕೊಂಡು ಹೋಗಿರಲಿಲ್ಲ. 'ಹಾವಿರಬಹುದು' ಎಂದು ಹೇಳಿ ಹೆದರಿಸುವುದಕ್ಕೆ ಅವರು ಯತ್ನಿಸಿದ್ದರು. ನಾಲಪ್ಪಾಟ್ಟಿನಲ್ಲಿ ಹಾವುಗಳು ಕಾಣಸುತ್ತಿದ್ದುವು. ಒಂದು ದಿನ ಬೆಳಿಗ್ಗೆ ಮಾಳಿಗೆ ಮೆಟ್ಟಲಿನಲ್ಲಿ ಎಣ್ಣೆ ಹಚ್ಚಿ ಮಿನುಗಿಸಿದಂತೆ ಹೊಳೆಯುವ ಒಂದು ಕೃಷ್ಣಸರ್ಪ ಕಾಣಿಸಿಕೊಂಡಿತು. ಅದನ್ನು ಗೂಡು ಸೇರಿಸುವ ಪ್ರಯತ್ನದಲ್ಲಿದ್ದಾಗಲೆ ಅದು ಎಲ್ಲರ ಕಣ್ಮುಂದೆ ಇದ್ದಕ್ಕಿದ್ದಂತೆಯೆ ಕಾಣದಾಯಿತು. ಆ ಬಳಿಕ ಅದನ್ನು ಕೆಲವರು ನಾಗಬನದಲ್ಲಿ ಕಂಡದ್ದಾಗಿ ಹೇಳುವುದು ಕೇಳಿಬಂತು. ಮಂಡಲಿ, ನಾಗರ, ಅಣಲಿ, ಕೇರೆ ಮೊದಲಾದವುಗಳು ಅಂಗಳದಲ್ಲಿ, ಹಿತ್ತಿಲಿನಲ್ಲಿ ಸ್ವೇಚ್ಛೆಯಾಗಿ ಹರಿದಾಡುತ್ತಿದ್ದುವು. ಹಾವನ್ನು ಕೊಲ್ಲುವುದಕ್ಕೆ ಅಂದು ಯಾರೂ ಮುಂದೆ ಬರುತ್ತಿರಲಿಲ್ಲ. ಹಾವನ್ನು ಕೊಂದರೆ ಅದರ ಶಾಪ ಸಂತಾನಕ್ಕೆ ತಟ್ಟುವುದೆಂದು ನಂಬಿ ಎಲ್ಲರೂ ಹೆದರುತ್ತಿದ್ದರು.

ನಾಲಪ್ಪಾಟ್ಟಿನಲ್ಲೂ ಪರಿಸರದಲ್ಲೂ ಹಲವು ಜೀವಿಗಳು ನಮ್ಮೊಂದಿಗೆ ಬದುಕಿದ್ದುವು. ಪೂರ್ವ ದಿಕ್ಕಿನ ಅಂಗಳದಲ್ಲಿದ್ದ ಅವರೆಯ ಚಪ್ಪರದಲ್ಲಿ ಸಾವಿರ ಲೆಕ್ಕದ ಸೀಲಿ ತುಂಬಿಗಳು ಹಾರಾಡುತ್ತಿದ್ದುವು. ಕೊಳದ ಮೊಸಳೆಗಳು ನಡುನಡುವೆ ದಡಕ್ಕೆ ಬಂದು ಬಿಸಿಲಲ್ಲಿ ಮಲಗಿ ಮೈಮರೆಯುತ್ತಿದ್ದುವು. ಗೋಡೆಯಲ್ಲಿ ಜೇಡಗಳೂ ಚೇಳುಗಳೂ ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತಿದ್ದುವು. ಬೇಲಿಯಲ್ಲಿ ಮುಂಗುಸಿ ಕುಟುಂಬಗಳೂ. ಇವುಗಳ ಮಧ್ಯೆ ಯಾವ ಶತ್ರುತ್ವವನ್ನೂ ತೋರಗೊಡದೆ ನಾವು ಬದುಕಿದ್ದೆವು. ಮೆಟ್ಟಲುಗಳೆಡೆಯಲ್ಲಿ ಕಿತ್ತಳೆ ಬಣ್ಣದ ಹಾವುರಾಣಿಗಳು ತಂಗಿದ್ದವು. ಬಚ್ಚಲು ಮನೆಯಲ್ಲಿ ಶತಪದಿಯೂ. ಹಾಗಿದ್ದೂ ನಮ್ಮೊಳಗೆ ಭೀತಿ ಬೆಳೆಯಲೇ ಇಲ್ಲ. ಅವರಾರೂ ನಮ್ಮ ಶತ್ರುಗಳಲ್ಲ ಎಂಬುದಾಗಿ ನಾವು ನಂಬಿ ನಡೆದೆವು. ನಿಂಬೆ ಮರಗಳ ಕೊಂಬೆಗಳಲ್ಲಿ ಹಸಿರು ಹಾವುಗಳು ಹರಿದಾಡಿದವು. ಭಾರೀ ವಿಷದವುಗಳು.

ಆದರೂ ನಾವು ಮಾಬಲ ಹುಳಿ, ನಿಂಬೆ ಹಣ್ಣುಗಳನ್ನು ಕೊಯ್ದು ತೆಗೆದು ಅಜ್ಜಿಗೆ ಉಪ್ಪಿನ ಕಾಯಿ ಮಾಡುವುದಕ್ಕೆ ಕೊಂಡು ಹೋಗಿ ಕೊಟ್ಟೆವು. ದೊಡ್ಡಮ್ಮನೇ ಪಲ್ಯ ತಯಾರು ಮಾಡುತ್ತಿದ್ದರು. ಕುಂಬಳಕಾಯಿ, ಚೀನಿ ಕಾಯಿಗಳ ಸಿಪ್ಪೆ, ಹಾಗಲಕಾಯಿ, ಪಚ್ಚೆಹೆಸರು ಮುಂತಾದುವನ್ನು ಅವರು ಉಪ್ಪು ನೀರಲ್ಲಿ ಮುಳುಗಿಸಿ ಗೆರಸೆಗಳಲ್ಲಿಟ್ಟು ಒಣಗಿಸುತ್ತಿದ್ದರು. ಕೆಲವೊಮ್ಮೆ ಬಾವಿಕರೆಯಲ್ಲಿ ಬೆಳೆದು ನಿಂತಿದ್ದ ಕರಿಜೀರಿಗೆಯನ್ನೂ ಅವರು ಬಳಸುತ್ತಿದ್ದರು.

ಭತ್ತ ಬೇಯಿಸುವ ಜವಾಬ್ದಾರಿ ವಹಿಸಿದ್ದು ಮುತ್ತಜ್ಜಿ. ಅಜ್ಜಿಯ ಅಮ್ಮ. ಅವರು ನಡುನಡುವೆ 'ವಳ್ಳೀ, ಕಾಳೀ, ಲಕ್ಷ್ಮೀ' ಎಂದೆಲ್ಲಾ ಗಟ್ಟಿಯಾಗಿ ಕೂಗಿ ಕರೆದು ತನ್ನ ಜವಾಬ್ದಾರಿಯನ್ನು ಜಾಹೀರು ಪಡಿಸುತ್ತಿದ್ದರು. ಸಾಯಂಕಾಲದ ಚಹಾದ ತಯಾರಿ ನನ್ನ ಚಿಕ್ಕಮ್ಮನ ಕೆಲಸವಾಗಿತ್ತು. ಪೂರ್ವ ದಿಕ್ಕಿನ ಕೋಣೆಯನ್ನು 'ಚಾ ಬೆರಸುವ ಕೋಣೆ' ಎಂಬುದಾಗಿ ನಾವೆಲ್ಲ ಕರೆಯುತ್ತಿದ್ದೆವು. ಅಲ್ಲಿ ಒಂದು ಮರದ ಅಲಮಾರದಲ್ಲಿ ಸಕ್ಕರೆ ಹಾಕಿಡುತ್ತಿದ್ದ ನೀಲಿ ಚೈನಾಮಣ್ಣಿನ ಭರಣಿಯೂ ಚಾ ಹುಡಿ ಹಾಕಿಡುವ ಟಿನ್ನೂ ಚಾ ಕಪ್ಪುಗಳೂ ಇದ್ದುವು. ನೀರಿಡುವಾತ ಒಂದು ಕಬ್ಬಿಣದ ಕೆಟಲಿನಲ್ಲಿ ಕುದಿಯುವ ನೀರನ್ನು ಚಿಕ್ಕಮ್ಮನಲ್ಲಿಗೆ ತಂದು ಕೊಡುತ್ತಿದ್ದನು. ಕಿಟಕಿ ತೆರೆದಿಟ್ಟರೂ ಕೂಡ ಮಧ್ಯಾಹ್ನದ ಮೇಲೆ ಬೆಳಕು ಸಿಗದ ಒಂದು ಕೋಣೆಯಾಗಿತ್ತದು. ಅವರೆಯ ಚಪ್ಪರದ ದುಂಬಿಗಳ ಮೊರೆತ ಕೇಳುತ್ತ ನಾವು ಚಹಾ ಕುಡಿಯುತ್ತಿದ್ದೆವು. ಚಹಾದೊಟ್ಟಿಗೆ ನಾವು ತಿನ್ನುತ್ತಿದ್ದ ಫಲಾಹಾರವನ್ನು ಅಜ್ಜಿ ಬಡಿಸಿಕೊಡುತ್ತಿದ್ದರು. ಅದು ಸಾಮಾನ್ಯವಾಗಿ ನೇಂದ್ರ ಬಾಳೆ ಹಣ್ಣನ್ನು ಅಕ್ಕಿ ಹಿಟ್ಟಿನಲ್ಲಿ ಅದ್ದಿ ಹುರಿದದ್ದೋ, ನೈಯಪ್ಪವೋ, ಉದ್ದಿನ ವಡೆಯೋ ಆಗಿರುತ್ತಿತ್ತು. ಆದರೆ ವಿಶೇಷ ದಿವಸಗಳಲ್ಲಿ ಎಲೆಯಪ್ಪ ಎಂಬ ಹೆಸರಿನ ಒಂದು ರುಚಿಕರ ಆಹಾರ ತಿನ್ನಲು ಸಿಗುತ್ತಿತ್ತು. ಅದು ಎಲೆಯಲ್ಲಿ ಹೊದಿಸಿ ಆವಿಯಲ್ಲಿ ಬೇಯಿಸುವ ಒಂದು ಫಲಾಹಾರವಾಗಿತ್ತು.

ನನ್ನ ಅಣ್ಣನಿಗೆ ಪ್ರಿಯವಾದ ಆಹಾರ ಉಂಡ್ಲಿಕವಾಗಿತ್ತು. ಒಂದು ನೆಲ್ಲಿಕಾಯಿಯ ಗಾತ್ರದಲ್ಲಿ ಅಕ್ಕಿ ಉಂಡೆ ಮಾಡಿ ಹುರಿದು ತೆಗೆಯುತ್ತಿದ್ದುದು ಉಂಡ್ಲಿಕ. ಹಲವೊಮ್ಮೆ ಅದು ತಯಾರಿಸುವಾಗ ಅಡುಗೆ ಮನೆಯಿಂದ ಪಟಪಟ ಸಿಡಿಯುವ ಶಬ್ದ ಕೇಳಿಬರುತ್ತಿತ್ತು. ಶ್ರಾದ್ಧ ಆಚರಿಸುವಾಗ ನಾಲಪ್ಪಾಟ್ಟಿನ ಕೊಳದ ದಕ್ಷಿಣ ದಿಕ್ಕಿನಲ್ಲಿರುವ ಶ್ರಾದ್ಧದ ಮನೆಯಲ್ಲಿ ಪುರೋಹಿತ ವರ್ಗದವರು ಬಂದು ಅಡುಗೆ ಮಾಡುತ್ತಿದ್ದರು. ಅಂದಿನ ಊಟ ಅತ್ಯಂತ ರುಚಿಕರವಾಗಿ ನನಗೆ ತೋರುತ್ತಿತ್ತು. ಹುಳಿ, ಪಲ್ಯ, ಕೂಟ್ಟಲ್, ಅವಿಲು, ಸಾಂಬಾರ್ ಮೊದಲಾದುವುಗಳಲ್ಲದೆ ಅವರು ಶುಂಠಿ ಮೊಸರಿನ ಪಾಕ ತಯಾರಿಸುತ್ತಿದ್ದರು. ಎಲ್ಲ ರುಚಿಗಳೂ ಒಂದುಗೂಡಿ ಆ ಭೋಜನ ಹಲವು ರಾಗಗಳು ಸೇರಿದ ಒಂದು ಕಛೇರಿಯಂತೆ ತೋರುತ್ತಿತ್ತು. ಊಟವಾದ ಮೇಲೆ ನಾನು ದೊಡ್ಡಮ್ಮನ ಸಂಚಿಯಿಂದ ವೀಳ್ಯದೆಲೆ, ಸುಣ್ಣ, ಅಡಿಕೆ ತೆಗೆದು ತಿನ್ನುತ್ತಿದ್ದೆ. ಅಜ್ಜಿ ವೀಳ್ಯ ತಿನ್ನುತ್ತಿರಲಿಲ್ಲ. ಓರ್ವ ವಿಧವೆಗೆ ವಿಧಿಸಿರುವ ಎಲ್ಲ ತ್ಯಾಗಗಳನ್ನೂ ಅವರು ಅನುಸರಿಸುತ್ತಿದ್ದರು. ಅವರು ರಾತ್ರಿ ಊಟ ಮಾಡುತ್ತಿರಲಿಲ್ಲ. ಆದರೂ ಈ ರೀತಿಯ ವ್ರತಗಳು ಅವರ ಸೌಂದರ್ಯಕ್ಕೆ ಮಂಕು ಕವಿಸಿದ್ದಾಗಿ ನನಗೆ ತೋರಲಿಲ್ಲ. ಅವರ

ಕೆನ್ನೆಗಳು ಬಿಳಿಯ ಪಿಂಗಾಣಿ ತಟ್ಟೆಯಂತಿದ್ದುವು. ಕಣ್ಣುಗಳು ಮಕ್ಕಳದೆಂಬ ಹಾಗೆ ಹೊಳೆಯುತ್ತಿದ್ದುವು. ಅವುಗಳಲ್ಲಿ ಕೆಂಪು ನರಗಳಿರಲಿಲ್ಲ.

'ಗಾಜಿನ ತಟ್ಟೆಯಲ್ಲಿ ನೇರಿಳೆ ಹಣ್ಣು ಇಟ್ಟ ಹಾಗೆ ನನ್ನ ಕಣ್ಣೂಂತ ಹಿಂದೊಮ್ಮೆ ಒಬ್ಬಳು ಹುಡುಗಿ ಹೇಳಿದ್ಳು. ಅವಳ ದೃಷ್ಟಿ ತಾಗಿ ನನ್ನ ಕಣ್ಣು ಸೀದು ಹೋದೀತೆಂದು ನಾನು ಭಾವಿಸಿದ್ದೆ' ಅಜ್ಜಿ ಹೇಳಿದ್ದರು.

'ದೃಷ್ಟಿ ತಾಗೋದು ಅಂದ್ರೇನು ?' ನಾನು ಕೇಳಿದ್ದೆ.

'ಅದೆಲ್ಲ ಹೇಳಿದರೆ ನಿನಗೆ ಅರ್ಥವಾಗಲಿಕ್ಕಿಲ್ಲ.' ಅಜ್ಜಿ ನಗುತ್ತ ಹೇಳಿದರು.

ಚಂದ್ರಶೇಖರ ದೇವನಾ ಪುತ್ರನೆ
ಏಕದಂತನೆ ನಿನಗಿದೊ ವಂದನೆ

ನಾಲಪ್ಪಾಟ್ಟಿನ ತೆಂಕಮೂಲೆಯಲ್ಲಿ ಓಣಂ ಹಬ್ಬದ ಎರಡನೆಯ ದಿನ ನಡೆದ ಕೈತಟ್ಟಿಯಾಟದಲ್ಲಿ ಕಣ್ಣತ್ತಿನ ಕೊಚ್ಚುವಮ್ಮ ತನ್ನ ಕಣ್ಣುಗಳನ್ನು ಕಿರಿದುಗೊಳಿಸಿ ಕುತ್ತಿಗೆಯ ಮಾಂಸಪೇಶಿಗಳನ್ನು ಉಬ್ಬಿಸಿಕೊಂಡು ಗಟ್ಟಿಯಾಗಿ ಹಾಡಿದರು.

'ಮಾಡಪ್ಪಾಟಿನ ತಂಬುರಾಟ್ಟಿಯವರ ಹಾಡದು-ಕೊಚ್ಚುವಮ್ಮ ಹಾಡಿದ್ದು. ಅರಮನೆಯ ರಾಜವಂಶದೋರು ಬರೆದದ್ದು'. ಕೆಲಸದಾಕೆ ಲಕ್ಷ್ಮಿ ನನ್ನ ಕಿವಿಯಲ್ಲಿ ಉಸುರಿದಳು. ಅವಳ ಉಸಿರಿನ ವಾಸನೆ ನನ್ನ ಕೈಕಾಲುಗಳನ್ನು ತಲ್ಲಣಗೊಳಿಸಿತು. 'ನಾನು ಹೇಳೋದು ಕೇಳ್ಳೋದಿಲ್ವೆ ಮಗೂ' ಲಕ್ಷ್ಮಿ ಕೇಳಿದಳು. 'ಕೇಳಿಸ್ತು' ನಾನು ಅಸಹನೆಯಿಂದ ಹೇಳಿದೆ.

ತೆಂಕಮೂಲೆಯಿಂದ ಮೇಲಿನ ಮಲಗುವ ಕೋಣೆಗೆ ಹೋಗುವುದಕ್ಕಿರುವ ಏಣಿಯ ಅತಿ ಕೆಳಗಿನ ಮೆಟ್ಟಲಿನಲ್ಲಿ ನಾನು ಕುಳಿತುಕೊಂಡಿದ್ದೆ. ನನಗೆ ಕೈತಟ್ಟಿಯಾಟ ನೋಡಬೇಕೆಂಬ ಆಸೆಯಿದ್ದುದು ಗೊತ್ತಾಗಿ ಹಳ್ಳಿಯ ಹೆಂಗಸರನ್ನು ಅಜ್ಜಿ ಕರೆಸಿದ್ದರು. ಅನೇಕರು ಬಂದು ನೆರೆದಿದ್ದರು. ತೆಂಕ ಮೂಲೆಯಲ್ಲಿ ಅವರೆಲ್ಲರಿಗೂ ಆಡುವುದಕ್ಕೆ ಬೇಕಾದಷ್ಟು ಸ್ಥಳ ಸೌಕರ್ಯವಿರಲಿಲ್ಲ. ಆದ್ದರಿಂದಲೇ ಇರಬೇಕು, ಬಂದು ಹತ್ತು ನಿಮಿಷ ಕಳೆಯಬೇಕಿದ್ದರೆ ಅವರು ಅಹವಾಲು ಹೇಳತೊಡಗಿದ್ದು. ಎಲಿಯಜಾಟ್ಟಿನ ಅರಮನೆಯಲ್ಲಿಯೂ ಅಂಬಾಳತ್ತಿನ ಹೊರಮನೆಯಲ್ಲೂ ಆಡಿ ಬಳಕೆಯಾದವರಿಗೆ ನಾಲಪ್ಪಾಟಿನ ತೆಂಕಮೂಲೆಯ ಬಗ್ಗೆ ತಾತ್ಸಾರ ಮೂಡಿದ್ದರೆ ಆಚ್ಚರಿಯೇನಿಲ್ಲ. ಅವರ ಸಿಡುಕು ಮೂತಿ ಕಂಡು ಕಸಿವಿಸಿಗೊಂಡೇ ಇರಬೇಕು, ಅಜ್ಜಿ ಕೆಲಸದವನಿಗೆ ಆಟ ಪ್ರಾರಂಭವಾಗುವುದಕ್ಕೆ ಮೊದಲೇ ಫಲಾಹಾರವನ್ನೂ ಚಹಾವನ್ನೂ ತರಲು ಹೇಳಿದ್ದು. ಚಹಾ, ವಡೆ, ಶಾವಿಗೆ, ಹೂಬಾಳೆ, ಬಾಳೆಕಾಯಿ ಚಿಪ್ಸು, ಸಿಕ್ಕಿದಾಗ ಮನಸ್ಸಿಲ್ಲದಿದ್ದರೂ ಅವರ ಪ್ರಮುಖರು ಪಸನ್ಮುಖ ಬೀರಿದರು. ಒಂದಿಬ್ಬರು ನನ್ನನ್ನು ಪ್ರೀತಿಯ ಅಂಗಚೇಷ್ಟೆಗಳೊಂದಿಗೆ ಅಪ್ಪಿಕೊಂಡರು ಕೂಡ.

'ಅಲ್ಲಾ, ಈ ಮಗೂನ ಕಿವಿ ಒಟ್ಟೆ ಮಾಡ್ಲಿಲ್ವೆ ?' ಇದಕ್ಕೆ ಐದೆಂಟು ವರ್ಷ ಪ್ರಾಯಾಗ್ಲಿಲ್ವೆ ? ಇನ್ಯಾವಾಗ ಇದರ ಕಿವಿ ಒಟ್ಟೆ ಮಾಡೋದು ?' ಒಬ್ಬಾಕೆ ಯಾರೊಂದಿಗೆ ಎಂದಿಲ್ಲದೆ ಗಟ್ಟಿಯಾಗಿ ಕೇಳಿದಳು.

ಆಕೆಯ ಪ್ರಶ್ನೆಗೆ ಯಾರೂ ಉತ್ತರಿಸಲಿಲ್ಲ. ನನಗೆ ಮಾತ್ರ ಕಿರಿಕಿರಿ ಎನ್ನಿಸಿ ನನ್ನ ಕಿವಿಗಳನ್ನು ಎಳೆಯುತ್ತಾ ಕುಳಿತೆ. ಕಿವಿಯ ಬೋಳುತನವನ್ನು ಮುಚ್ಚಲು ಬಯಸಿದೆ. ಹೆಂಗಸರ ಚಿಕ್ಕಮಕ್ಕಳು, ಆಡುವುದಕ್ಕೆ ಬಂದವರು, ಗೋಡೆಗೆ ಆತುಕೊಂಡು ಕುಕ್ಕರಿಸಿದರು. ಅವರಲ್ಲಿ ನನಗಿಂತ ಕಿರಿಯ ವಯಸ್ಸಿನವರನ್ನೂ ನಾನು ಕಂಡೆ. ಅವರ ಕಿವಿಗಳನ್ನು ತೂತು ಮಾಡಲಾಗಿತ್ತು. ಅವರು ಲೋಲಾಕು, ಜುಮ್ಕಿ ಮುಂತಾದವನ್ನು ಧರಿಸಿದ್ದರು. ಗೋಡೆಗೆ ಆತು ಕುಳಿತು ಮಗುವಿಗೆ ಮೊಲೆ ಕೊಡುತ್ತಿದ್ದ ಓರ್ವ ಹೆಂಗಸನ್ನು ನಾನು ದಿಟ್ಟಿಸಿದೆ. ಆಕೆಯ ಕಿವಿಯಲ್ಲಿ ಕೆಂಪು ಕಲ್ಲುಗಳಿಂದ ಕೂಡಿದ ಉದ್ದನೆಯ ಜುಮ್ಕಿಗಳಿದ್ದುವು. ಮಗುವಿನ ಕಿವಿಯಲ್ಲಿ ಗಿಡ್ಡ ಲೋಲಾಕೂ.

'ನನ್ನ ಕಿವಿ ಒಟ್ಟೆ ಮಾಡೋದು ಯಾವಾಗ?' ನಾನು ಕೇಳಿದೆ. ಅಜ್ಜಿ ಕೇಳಲಿ ಅಂತಲೇ ನಾನು ಆ ಪ್ರಶ್ನೆ ಕೇಳಿದ್ದು. ಆದರೆ ಅದಕ್ಕೆ ಉತ್ತರ ಹೇಳಿದ್ದು ನನ್ನ ಕಾಲ ಬಳಿ ಕುಳಿತಿದ್ದ ಲಕ್ಷ್ಮಿ.

'ಮಗೂನ ಸ್ವಯಂವರ ನಿಶ್ಚಯವಾದ ಕೂಡ್ಲೆ ಕಿವಿ ಒಟ್ಟೆ ಮಾಡ್ತಾರೆ.'

'ನನ್ನ ಸ್ವಯಂವರ ಯಾವಾಗ?'

ಲಕ್ಷ್ಮಿ ಗಟ್ಟಿಯಾಗಿ ನಕ್ಕಳು.

'ಸ್ವಯಂವರ ಮಾಡಿಸ್ಲಿಕ್ಕೆ ಅವಸರಾನಾ? ಹಾಗಾದ್ರೆ ಬೇಗ ಅತ್ಲಾಗೆ ದೊಡ್ಡೋಳಾಗಿ ಬಿಡಿ. ಒಂದ್ರಾಶಿ ತುಪ್ಪ, ಹಾಲು ಕುಡ್ಡು ಬಿಡಿ. ಆದ್ರೆ ಪಳೆಂಟು ವಯಸ್ಸಿನ ಮಗೂನ್ನ ಯಾರೂ ಮದ್ವೆ ಮಾಡ್ಲಿಕ್ಕಿಲ್ಲ. ಯಾಕೆ ಮದ್ವೆ ಮಾಡೋದು? ಸೊಂಟದಲ್ಲಿಟ್ಟು ನಡೀಲಿಕ್ಕಾ?'

ನಾನು ಆ ಕಿರಿಕಿರಿ ವಿಷಯದಿಂದ ಅವಳ ಗಮನವನ್ನು ಬೇರೆಡೆಗೆ ಸೆಳೆಯಲು ಯತ್ನಿಸಿದೆ.

'ಈ ಹೆಂಗಸ್ರೆಲ್ಲ ಯಾರು?'

'ಅಕ್ಕೊ, ಆ ಪದ್ಯ ಹೇಳೋ ಹೆಂಗ್ಸು, ಅದುವೇ ಕಣ್ಣತ್ತಿನ ಕೊಚ್ಚುವಮ್ಮ ಪಾಪ್ಯಮ್ಮನ ಮಗಳು. ಮತ್ತೆ ಮಣ್ಣಾಂತರದ ಕಾರ್ತ್ಯಾಯಿನೀ ಮತ್ತು ಲಕ್ಷ್ಮಿ ಕುಟ್ಟಿ. ಆ ನಿಂತಿರೋದು ಚಾನ್ನಾತ್ತೇಲ ಓತ್ತಿಲಿನ.....'

'ಅಯ್ಯಾ, ಮಗೂಗೆ ಇವರನ್ನೆಲ್ಲ ಗೊತ್ತಿಲ್ವೆ?'

'ಕಣ್ಣತ್ತಿನ ಚಿನ್ನು ಬರ್ಲಿಲ್ವೆ?' ಮುತ್ತಜ್ಜಿ ಕೇಳಿದರು.

'ಇಲ್ಲ. ಚಿನ್ನೂಗೆ ಜ್ವರ' ಉಣ್ಣಿಮಾಯಮ್ಮ ಹೇಳಿದಳು. ಅವರು ಆಡುವಾಗ ಮೊಣಕಾಲು ಮಡಿಚಿ ನಡುನಡುವೆ ಬಗ್ಗುವುದೂ ಏಳುವುದೂ ಮಾಡಿದರು.

'ಲಕ್ಷ್ಮಿ ಆಡೋದಿಲ್ವೆ?' ಮುತ್ತಜ್ಜಿ ಕೆಲಸದವಳನ್ನು ಕೇಳಿದಳು.

'ನಂಗೆ ಹೀಗೆ ಬಗ್ಗಿ ಆಡ್ಲಿಕ್ಕೆ ಕೂಡ್ಲಿಕ್ಕಿಲ್ಲ ದೊಡ್ಡಮ್ಮೋರೆ' ಅವಳು ಹೇಳಿದಳು:

'ನನ್ನ ಸೊಂಟ ಮತ್ತೆ ಅಲುಗಾಡ್ಲಿಕ್ಕಿಲ್ಲ. ನನ್ಗೆ ಧನ್ವಂತರಿ ಹಚ್ಚಿ ಮಿಂದು ಒಂದ್ಕಡೆ ಮಲಗಿದ್ರೆ ಸಾಲ್ದಲ್ಲಾ, ನನಗಿಲ್ಲಿಯ ಕೆಲ್ಸಾನೂ ನೋಡ್ಬೇಡ್ವೆ?'

ಅದು ಒಂದು ರೀತಿಯ ಆರೋಪಣೆಯ ಮಾತೆಂದು ಅರ್ಥೈಸಿಕೊಂಡ ಮುತ್ತಜ್ಜಿ ಆಮೇಲೇನೂ ಹೇಳಲಿಲ್ಲ.

'ಲಕ್ಷ್ಮಿಗೆ ಕೈತಟ್ಟಿಯಾಟ ಗೊತ್ತಿಲ್ಲ, ಅಲ್ವೆ?' ನಾನು ಅವಳಲ್ಲಿ ಕೇಳಿದೆ.

'ನಂಗೆ ಕೈತಟ್ಟಿಯಾಟೆಲ್ಲ ಗೊತ್ತುಂಟು. ನನ್ನಷ್ಟು ಆಟ ಗೊತ್ತಿರೋ ಹುಡುಗ್ಯರಿಲ್ಲ. ಅದು ಗೊತುಂಟಾ ಮಗೂಗೆ ? ಒಮ್ಮೆ ಮೂಕೋಲಿನ ದೇವಸ್ಥಾನದ ಹಿತ್ಲಿನಲ್ಲಿ ಆಟ ಇತ್ತು. ನನ್ನನ್ನೂ ಒತ್ತಾಯ ಮಾಡಿ ಆಡ್ಸಿದ್ರು. ನೀವು ಉಣ್ಯೆಜಮಾನ್ ಅಂತ ಕೇಳ್ಳಿಲ್ವೆ ? ಕೇಳದಿರ್ಲಿಕ್ಕಿಲ್ಲ. ಲೋಕಕ್ಕೇ ಹೆಸರುವಾಸಿಯಾದೋರು. ನೋಡೋದಕ್ಕೂ ರಾಜರ ಹಾಗೆ, ಬಿಳಿಯಾಗಿ ದಪ್ಪವಾಗಿ ಗುಂಗುರು ಕೂದ್ಲಾಗಿ. ಅವರು ನನ್ನ ಪೋಟ್ಹೋ ತೆಗೆದ್ರು. ನನ್ನಾಟ ಅವರಿಗೆ ಅಷ್ಟು ಹಿಡಿಸ್ತು. ಪೋಟ್ಹೋ ತೆಗೀತಾರೇಂತ ಗೊತ್ತಾದ ಕೂಡ್ಲೆ ನಾನಲ್ಲಿಂದ ಜಾರಿಬಿಟ್ಟೆ. ಅವ್ರು ಅಲ್ಲಿದ್ದವ್ರತ್ರೆಲ್ಲ ಕೇಳೋರಂತೆ ನನ್ನ ನೋಡ್ತಾ.... ಈ ಹುಡ್ಗಿ ಎಲ್ಲೀದ್ದೂ ? ಈ ಹುಡ್ಗಿಯ ಹೆಸ್ರೇಂತಾಂತ. ಅಯ್ಯೋ ಮಗೂ, ನಾನು ಹೆದ್ರಿ ಗಡಗಡಾಂತ ನಡುಗಿದೆ. ನನ್ನ ಮಾವ ಅದು ಕೇಳ್ತಿದ್ರೆ ನನ್ನನ್ನೂ ಕೊಲ್ತಿದ್ರು, ಉಣ್ಯೆಜಮಾನ್ರನ್ನೂ ಕೊಲ್ತಿದ್ರು.'

'ನಿನ್ನ ಮಾವನಿಗೆ ಕೈತಟ್ಟಿಯಾಟ ಇಷ್ಟ ಇಲ್ವೆ ?' ನಾನು ಕೇಳಿದೆ.

'ಕೈ ತಟ್ಟಿ ಆಟವಾ ? ನನ್ನ ಮಾವನಿಗೊ ? ನನ್ನ ಮೂಕೋಲ ಸ್ಥಾನದ ಭಗೋತೀ, ನೀವ್ಗೇನು ಗೊತ್ತು ಮಗೂ ? ನಿಮ್ಮ ಮಾವನ ಹಾಗೆ ನನ್ನ ಮಾವಾಂತ ತಿಳ್ದಿದ್ದೀರಿ ಅಲ್ವೆ ? ಕೈತಟ್ಟಿ ಆಟ, ಒಟ್ಟಂತುಳ್ಳಲ್, ನಾಟ್ಕ ಎಲ್ಲ ನೋಡ್ತಾ ಕೂರೋರು ನನ್ನ ಮಾವಾಂತ ತಿಳ್ಕಂಡಿದ್ದೀರಾ ? ನನ್ನ ಮಾವ ಒಬ್ಬ ಶೂರಪರಾಕ್ರಮಿ. ಮುಖಚಾವಡಿಯಲ್ಲಿ ಕುಳಿತಾಗ ಆಕಳಿಕೆ ಕೂಡ ಕೇಳಿಸ್ಬಾರ್ದು. ಅದು ಗೊತ್ತುಂಟಾ ? ಊರೋರ್ಗೆಲ್ಲಾ ನನ್ಮಾವಾಂದ್ರೆ ಭಯ, ಪೆಟ್ಟೊಂದು ತುಂಡೆರಡು. ಹೆಂಗ್ಸರು ಮನೇಂದ ಹೊರಕ್ಕೆ ಬಂದ್ರೆ ಮಾವ ಅವ್ರನ್ನು ಕೊಂದೇಬಿಟ್ಬಾರು, ಅದು ಕಂಡಿತ. ಹೆಣ್ಣಾಗಿ ಹುಟ್ಟಿದ್ರೆ ತಗ್ಗಿ ಬಗ್ಗಿ ನಡೀಬೇಕೂಂತ ಮಾವ ಹೇಳೋರು. ಒಂದಿವ್ಸ ಒಬ್ಬ ಬಳೆ ಮಾರೋನನ್ನು ಕರ್ದು ನಾನೆರಡು ಡಬ್ಬರ್ ಬಳೆ ತಕ್ಕೊಂಡೆ. ಹೇಳೋದ್ದೇ ಬೇಡಾ ಮಗು. ನನ್ನ ಹೊಡ್ದು ಚಚ್ಚಿ ಹಾಕಿದ್ರು. ನನ್ನ ಕೈಗೆ ಸರೀ ಬಿಸಿ ಇಟ್ರು. ಕಾಣೋದಿಲ್ವೆ ಮಗೂ ಗೆರೆಗೆರೆಯಾಗಿ ಕಲೆ. ಓಡಿಕಡ್ಡಿ ಹೊತ್ತಿಸಿ ಮಾವ ಇಟ್ಟದ್ದು. ಜೀವವೇ ಹೋಗ್ಬಿಡ್ತು ಮಗು. ನನ್ನ ದೇವ್ರೆ, ನಾನಿನ್ನು ಗಂಡಸ್ರತ್ರ ಈ ಜನ್ಮದಲ್ಲಿ ಮಾತಾಡ್ಲಿಕ್ಕಿಲ್ಲ.'

'ನೀನು ಶಂಕರನ ಪತ್ರ ಮಾತಾಡೋದ್ಯಾಕೆ ? ಶಂಕರ ಗಂಡಸಲ್ವೆ ?'

ಲಕ್ಷ್ಮಿ ಗಟ್ಟಿಯಾಗಿ ನಕ್ಕಳು. 'ನಮ್ಮ ಶಂಕರನ್ ನಾಯರಾ ? ಅದೊಂದು ಗಂಡೂ ಹೆಣ್ಣೂ ಅಲ್ಲದ್ದಲ್ವಾ. ಅದ್ರತ್ರ ಮಾತಾಡಿದ್ರ ಮಾವ ಬೈಲಿಕ್ಕಿಲ್ಲ'.

'ಶಂಕರ ಒಮ್ಮೊಮ್ಮೆ ದಾಡಿ ಮಾಡ್ತಾನಲ್ಲ. ಗಂಡಸ್ರಲ್ವೆ ದಾಡಿ ಮಾಡೋದು' ನಾನು ಕೇಳಿದೆ.

'ದಾಡಿ ಮಾಡಿದಾಂತ ಗಂಡ್ಸಾಗ್ಲಿಕ್ಕೆ ಆಗೋದಿಲ್ಲ, ಮಗೂ' ಲಕ್ಷ್ಮಿ ಹೇಳಿದಳು.

'ಶ್. ಮಾತಾಡದೆ ಕೂತ್ಕೊ ಲಕ್ಷ್ಮಿ. ನಾವಾದ್ರೂ ಹಾಡು ಕೇಳ್ತೀವ' ಅಜ್ಜಿ ಹೇಳಿದರು.

'ವೀರ ವಿರಾಟ ಕುಮಾರ ವಿಭೋ' ಕಣ್ಣಾತ್ತಿನ ಕೊಚ್ಚುವಮ್ಮ ಹಾಡತೊಡಗಿದಳು. ಅಷ್ಟರಲ್ಲೆ ಆಡುವವರೂ ಚೆನ್ನಾಗಿ ಬೆವರಿ ಹೋಗಿದ್ದರು.

'ನಾನು ಸ್ವಲ್ಪ ಹೊತ್ತು ~~ಇಲ್ಲಿ~~ ಕೂತ್ಕೋತೇನ. ನನಗೆ ಏದುಸಿರು ಬರ್ತದೆ.'

ಒಬ್ಬಾಕೆ ಯುವತಿ ಹೇಳಿದಳು. ಅವಳು ನನ್ನ ಬಟ್ಟೆಯ ಅಂಚು ಮುಟ್ಟುತ್ತಾ ಕೇಳಿದಳು.

'ಇದು ಪ್ಯಾರಾಚೂಟ್ ಸಿಲ್ಕಾ?'

'ನಂಗೊತ್ತಿಲ್ಲ.' ನಾನು ಹೇಳಿದೆ.

'ನೀವ್ಯಾಕೆ ಆಟ ನಿಲ್ಲಿದ್ದು?' ಲಕ್ಷ್ಮಿ ಕೇಳಿದಳು.

'ನಿನ್ನೆ ಮಡಪ್ಪಾಟ್ಟಿನಲ್ಲಿ ಆಟ ಇತ್ತು. ಹಿಂದಿರುಗಬೇಕಿದ್ದರೆ ಪೂರ್ತಿ ಕತ್ತಲಾಗಿತ್ತು. 'ಕಣ್ಣಿನಾಮುಣ್ಣಿ' ಹಾಡ್ಲಿಕ್ಕೆ ಶುರು ಮಾಡ್ಬೇಕಿದ್ರೆ ದೀಪ ಇಟ್ಟಾಗಿತ್ತು. ರಾತ್ರಿಯಿಡೀ ಕಾಲು ಸಿಡಿತ. ಸ್ವಲ್ಪಾನೂ ನಿದ್ರೆ ಮಾಡ್ಲಿಲ್ಲ. ನಾಳೆ ಅಂಬಾಳತ್ತಿನಲ್ಲಿ ಆಟ. ಅಲ್ಲಿ ಆಡ್ಲಿಕ್ಕೆ ನಂಗಿಷ್ಟವಿಲ್ಲ.'

'ಅದ್ಯಾಕೆ ಅಲ್ಲಿ ಮಾತ್ರ ಆಡ್ಲಿಕ್ಕೆ ನಿಂಗಿಷ್ಟ ಇಲ್ಲದ್ದು?' ಲಕ್ಷ್ಮಿ ಕೇಳಿದಳು.

'ಅಲ್ಲಿ ಹೊರ ಮನೇಲಿ ಆಟ ಆಡೋವಾಗ ಆ ಪಶ್ಚಿಮದ ಕೋಣೆಯಿಂದ ಒಂದು ಜನ ನನ್ನನ್ನೇ ನೋಡಿ ರಕ್ತ ಹೀರ್ತಾನೆ. ಆ ಕೋಣೇಲಷ್ಟೂ ಕತ್ತಲೆ. ಆ ಅಷ್ಟ ಕಣ್ಣು ಮಾತ್ರ ಹೊಳೀತಿರ್ತದೆ ಅಮಾಸೆ ದಿನ ಕಬ್ಬೆಕ್ಕಿನ ಕಣ್ಣು ಹೊಳೆಯೋಥರ.'

'ಯಾರು ಆ ಜನ?'

'ಆಜನದ ಹೆಸ್ರು ಮಾತ್ರ ಹೇಳ್ಲಿಕ್ಕಿಲ್ಲ. ನಾವು ಪಾಪದೋರು. ಸೊತ್ತು ಸಂಪಾದ್ನೆ ಏನೂ ಇಲ್ಲದೋರು. ನಾ ಆ ಜನದ ತಪ್ಪುಗಳನ್ನು ಹೇಳ್ತಾ ನಡೆದ್ರೆ ಗೂಂಡಾಗಳಿಂದ ನನ್ನ ಹೊಡೆಸ್ಯಾರು. ನಂಗೆ ಪೆಟ್ಟು ತಿನ್ಲಿಕ್ಕೆ ಆಗ್ಲಿಕ್ಕಿಲ್ಲ'.

'ಅವರು ನಿನ್ನನ್ನು ನೋಡಿ ರಕ್ತ ಕುಡೀತಾರೆ ಅಂದ್ಯಲ್ಲ? ಅವರಿಗ್ಯಾರು ರಕ್ತ ತಂದು ಕೊಡೋರು? ಅವರಿಗೆಲ್ಲಿಂದ ರಕ್ತ ಸಿಗೋದು?'

'ಇದೊಳ್ಳೆ ಕತೆಯಾಯ್ತು. ನಾ ಹೇಳಿದ್ದನ್ನು ಹಾಗೇ ನಂಬಿಟ್ಟೆ, ಅಲ್ವೆ? ನನ್ನ ರಕ್ತ ಸಿಕ್ಕಿದ್ರೆ ಆ ಜನ ಕುಡೀತದೆ. ರಕ್ತ ಸಿಗ್ಲಿಕ್ಕಿಲ್ಲ. ಆ ಜನ ನನ್ನನ್ನೇ ದುರುಗುಟ್ಟಿ ನೋಡ್ತದೇಂತ ನಾ ಹೇಳಿದ್ದು.'

'ಯಾಕೆ ದುರುಗುಟ್ಟಿ ನೋಡ್ತದೆ?'

'ಇದೊಳ್ಳೆ ಕತೆಯಾಯ್ತು. ಗಂಡಸ್ರು ಚಂದದ ಹುಡುಗೇರನ್ನು ಯಾಕೆ ದುರುಗುಟ್ಟಿ ನೋಡ್ತಾರೇಂತ ಕೇಳಿದ್ರೆ ನಾನೇನುತ್ರ ಕೊಡ್ಲಿ?' ಮುಟ್ಲಿಕ್ಕೆ ಆಸೆಯಾಗಿ, ಮತ್ತಿನ್ಯಾಕೆ?'

ಲಕ್ಷ್ಮಿಯೂ ಆ ಹೆಂಗಸೂ ಸೇರಿ ಬಿದ್ದು ಬಿದ್ದು ನಕ್ಕರು. ಮುತ್ತಜ್ಜಿ ಹೇಳಿದರು: 'ಶ್, ನಗಾಡದೆ ಕೂತ್ಕೊಳ್ಳಿ, ಹಾಡು ಕೇಳಿ.'

ಆಗ ಬಡಗು ದ್ವಾರದಿಂದ ಅಗಸರ ಲಕ್ಷ್ಮಿ ಕುಟ್ಟಿ ಶುಭ್ರವಸನಧಾರಿಯಾಗಿ ಒಳಗೆ ಬಂದಳು. ಅವಳ ಮುಗುಳ್ನಗೆ ಎಲ್ಲರಿಗೂ ಹಿಡಿಸಿತು ಎಂಬುದಾಗಿ ಭಾಸವಾಯಿತು. ಲಕ್ಷ್ಮಿಕುಟ್ಟಿಯ ಹಿಂದೆ ಮಗಳು ಬಾಲಾ ಕೂಡಾ ಇದ್ದಳು.

'ನಾನೂ ಸೇರ್ಲಾ?' ಲಕ್ಷ್ಮಿಕುಟ್ಟಿ ಕೇಳಿದ್ಲು.

'ಸೇರಿ. ನಾವು ಚಪ್ಪಾಳೆಯಾಟ ಪ್ರಾರಂಭಿಸ್ಲಿಕ್ಕಾಯ್ತು.'

ಉಣ್ಣಿಯಮ್ಮ ಕೂಗಿ ಹೇಳಿದ್ಲು: 'ಯಾಕಿಷ್ಟು ತಡ?'

'ಒಂದ್ರಾಶಿ ಹೊಸವಸ್ತ್ರಗಳು ಒಗೀಲಿಕ್ಕಿತ್ತು. ನಿನ್ನೆ ಸಗಣಿ ನೀರ್ನಲ್ಲಿ ಹಾಕಿಟ್ಟದ್ದು.

ಎಲ್ಲ ಬೂದಿ ಬೆರೆಸಿದ ನೀರಿಗೆ ಹಾಕಿ ಬೇಯಿಸಿದೆ. ಅಂಗೈಯ ಚರ್ಮೆಲ್ಲ ಸುಲ್ದು ಹೋಯ್ತು. ರಾತ್ರಿಯಾಗುವಾಗ ಅಸೌಖ್ಯ. ಉರಿಯೋದ್ರಲ್ಲಿ ಕೂಡೋದಿಲ್ಲ. ನಿದ್ರೆ ಬರೋದಿಲ್ಲಾಂತ ಹೇಳಿದ್ರೆ ಸಾಲ್ದಾ?'

'ನಿನ್ನ ಬಟ್ಟೆ ಒಗಿಯೋ ಕಲ್ಲ ನಿಲ್ಲಿಸ್ಬಾರ್ದಾ ಲಕ್ಷ್ಮಿಕುಟ್ಟಿ?' ಒಬ್ಬ ಹೆಂಗಸು ಕೇಳಿದಳು.

'ಅಗಸರ ಮನೆಯಲ್ಲಿ ಹುಟ್ಟಿದ್ದಕ್ಕೆ ಸಾಯೋವರೆಗೂ ಪಂಚೆ ಒಗೀಬೇಕೂಂತ ನಿಯಮ ಇಲ್ವಲ್ಲ?'

'ಒಗ್ಯದಿದ್ರೆ ಉಣ್ಣೋದೊ? ನಾಲ್ಕಾಣೆ ದುಡ್ಡು ಈ ಒಗ್ಯೋದ್ರಿಂದಲ್ವೆ ಹುಟ್ಟೋದು? ಈ ಹುಡುಗಿಯನ್ನು ಬೆಳಸಿ ದೊಡ್ಡೋಳನ್ನಾಗಿ ಮಾಡಿ ಯಾರ ಕೈಗಾದ್ರೂ ಒಪ್ಪಿ ಕೊಡೋವರೆಗಾದ್ರೂ ನಾ ಕೈಯೊಡ್ಡದಿರೋಕಾಗುತ್ತೆ? ಈ ಹುಡುಗಿಗೆ ಎರಡು ಹೊತ್ತು ಗಂಜೀನಾದ್ರೂ ಕೊಡಬೇಡ್ವೆ?'

ಲಕ್ಷ್ಮಿಕುಟ್ಟಿಯನ್ನು ಮತ್ಯಾರೂ ಪ್ರಶ್ನಿಸಲಿಲ್ಲ. ಆಕೆಯೂ ಹಾಡಿನಲ್ಲಿ ಸೇರಿಕೊಂಡಳು, ಕೈತಟ್ಟಿಯಾಡುವುದಕ್ಕೆ ತೊಡಗಿದಳು. ಬಾಲಾ ತನ್ನ ಲಂಗದ ಸೊಂಟದ ಮಡಿಕೆಯಿಂದ ಆರು ಉರುಟು ಕಲ್ಲುಗಳನ್ನು ಹೊರ ತೆಗೆದು ನನಗೆ ತೋರಿಸಿದಳು.

'ಬರ್ತೀರಾ? ನಾವು ಜಗಲಿಯಲ್ಲಿ ಕೂತು ಕಲ್ಲಾಟ ಆಡುವ' ಅವಳು ಹೇಳಿದಳು.

'ನಾನು ಬರೋದಿಲ್ಲ. ನನಗೆ ಕೈತಟ್ಟಿ ಆಡೋ ಆಟ ನೋಡ್ಬೇಕು?'

ಆಡುವ ಹೆಂಗಸ್ರನ್ನು ನೋಡಿ ಆಕೆ ಕೊಚಕೊಚ ಕೊಂಞಾನ ಮಾಡಿದಳು.

'ಈ ಹಾಡೆಲ್ಲ ನಾವು ಎಷ್ಟು ಸಲ ಕೇಳಿದ್ದೇವೆ' ಅವಳು ಪಿರಿಪಿರಿ ಮಾಡಿದಳು.

'ನೀನಿಲ್ಲಿ ಕೂತ್ಕೊ ಬಾಲಾ' ನಾನು ಏಣಿಯ ಮೆಟ್ಟಲಿಗೆ ಕೈ ತೋರಿಸಿ ಹೇಳಿದೆ.

ಏಣಿ ಮೆಟ್ಟಲಿನ ಹಳೆಯ ಮೆಟ್ಟಲೊಂದರಲ್ಲಿ ಅವಳು ಕುಳಿತಳು. ತನ್ನ ಲಂಗವನ್ನು ಮೇಲೆತ್ತಿಕೊಂಡು 'ಹೊಸ್ಸ ಲಂಗ. ಇದ್ಕೆ ಮಣ್ಣಾದ್ರೆ ಅಮ್ಮ ಹೊಡ್ತಾರು' ಅವಳು ನಗುತ್ತಾ ಹೇಳಿದಳು.

'ನೀನು ಚೆಂದಾಗಿದ್ದಿ ಬಾಲಾ. ಈ ಕರ್ಕಾಟಕ ತಿಂಗಳಲ್ಲೂ ನೀನು ಸರೀ ದಪ್ಪಾ ಆಗಿದ್ಯಾ' ಲಕ್ಷ್ಮಿ ಹೇಳಿದಳು.

'ನಾನು ದಿವ್ಸಾಗ್ಲೂ ಒಂದು ಹಸಿ ಮೊಟ್ಟೆ ಕುಡೀತೇನೆ. ಅದು ಕುಡ್ದಾದ ಮೇಲೆ ಅದರ ಓಡಿಗೆ ತೆಂಗಿನೆಣ್ಣೆ ಹಾಕಿ ಅದನ್ನೂ ಕುಡೀತೇನೆ. ಅದೇ ನನ್ನ ಮದ್ದು. ನನ್ನ ಅಮ್ಮನೂ ಕುಡೀತಾರೆ. ನನ್ನ ಅಮ್ಮ ತೋರ ಆಗಿದ್ದಾರೇಂತ ನಿನ್ನೆ ಮಾರಾರ್ ಹೇಳ್ತಿದ್ರು'

'ಯಾವ ಮಾರಾರ್?' ಲಕ್ಷ್ಮಿ ಬಾಲಾಳ ಭುಜಗಳನ್ನು ಗಟ್ಟಿಯಾಗಿ ಹಿಡಿದು ಕೇಳಿದಳು: 'ಯಾವ ಮಾರಾರು ಹೇಳಿದ್ದು?'

'ಒಬ್ಬ ಮಾರಾರ್.'

'ಯಾವ ಮಾರಾರೂಂತ ನಾನು ಕೇಳಿದ್ದು?'

'ನಂಗೊತ್ತಿಲ್ಲ. ಈ ಲೋಕದಲ್ಲಿ ಎಷ್ಟು ಮಂದಿ ಮಾರಾರ್ ಇದ್ದಾರು, ಅವ್ರಲ್ಲಿ ಒಬ್ಬ ಮಾರಾರ್. ನಂಗಷ್ಟೆ ಗೊತ್ತು.'

'ಯಾ ಮಗಳೆ, ಒಂದು ಮೊಳ ಉದ್ದ ಬೆಳೀಬೇಕಿದ್ರೆ ಹುಡುಗಿಯ ಇಕ್ಷೇಸ್ ನೋಡ್ಬಾರ್ದಾ? ಬೆಳ್ದು ಬೀಜಗಟ್ಟಿದೆ. ನಿನ್ನ ಕೆಣೆಯೆಲ್ಲ ನಾನು ಸರಿ ಮಾಡ್ತೇನೆ. ನಿನ್ನಮ್ಮನತ್ರ ಹೇಳಿಕೊಡ್ತೇನೆ. ಇಷ್ಟು ಬೆಳೀಬೇಡಾಯ್ತಾ ಹುಡ್ಗೀ....'

ಬಾಲಾ ಅನುಕಂಪ ಯಾಚಿಸುವವಳಂತೆ ತನ್ನ ದೊಡ್ಡ ಕಣ್ಣುಗಳನ್ನು ತೆರೆದು ನನ್ನ ಕಡೆಗೆ ನೋಡಿದಳು.

'ಪಂಕಜಾಕ್ಷನೆ ಸಾಗರ ವರ್ಣನೆ
ವಾಸುದೇವನೆ ಜಗನ್ನಾಥನೆ'

ಉಣ್ಣಿಯಮ್ಮ ಜೋರಾಗಿ ಹಾಡುತ್ತಿದ್ದಳು. ಬೆವರಿ ಕೆಂಪಾದ ಆ ಮುಖದಲ್ಲಿ ಒಂದು ರೀತಿಯ ರುದ್ರ ಭಾವವನ್ನು ನಾನು ಕಂಡೆ. ನನ್ನ ಅಜ್ಜಿಯೂ ಮುತ್ತಜ್ಜಿಯೂ ಮಾವನ ತಾಯಿಯೂ ಚಿಕ್ಕಮ್ಮನೂ ಆಟ ನೋಡಿ ಆನಂದಿಸುತ್ತಿದ್ದರು.

'ನನ್ನೊಟ್ಟಿಗೆ ಕಲ್ಲಾಟ ಆಡ್ಲಿಕ್ಕೆ ಬರ್ಲಿಕ್ಕಿಲ್ಲ. ಅಲ್ವೆ?' ಬಾಲಾ ಕೇಳಿದಳು.

ನಾನೂ ಬಾಲಾಳೂ ಮನೆಯಿಂದ ಹೊರಗೆ ದಾಟಿದೆವು. ಅಂಗಳದ ಮಣ್ಣಿನಲ್ಲಿ ಬಟ್ಟೆ ಎತ್ತಿ ಕುಳಿತುಕೊಳ್ಳುತ್ತ ಬಾಲಾ ಹೇಳಿದಳು: ನಂಗೆ ಹಾಡೂಂದ್ರೆ ತುಂಬಾ ಇಷ್ಟ. ಆದ್ರೆ ಎಲ್ರೂ ಸೇರಿ ಗಂಟ್ಲು ಬಿರಿಯೋವಾಗ ನಂಗೆ ನನ್ನ ಕಿವಿಯೇ ಒಡೆದು ಹೋಗೋ ಹಾಗೆ ಆಗ್ತದೆ.

'ನಂಗೂ ಕಿವಿ ನೋವಾಗ್ತದೆ' ನಾನು ಹೇಳಿದೆ.

'ಎರಡು ಕಿವಿಗೂ ಒಂದೊಂದು ಬೆರಳಿಟ್ಟು ನೋಡಿ. ಆಗ ನಮಗೆ ಸಮುದ್ರದ ಶಬ್ದ ಕೇಳ್ಲಿಕ್ಕಾಗ್ತದೆ' ಬಾಲ ಹೇಳಿದಳು.

ತೋರುಬೆರಳಿನಿಂದ ಕಿವಿಗಳನ್ನು ಮುಚ್ಚಿದಾಗ ಒಂದು ಮೈಲು ದೂರದಲ್ಲಿ ನೆಲೆಗೊಂಡಿದ್ದ ಅರಬಿ ಸಮುದ್ರದ ಮೊರೆತವನ್ನು ನಾನೂ ಕೇಳಿದೆ.

ನಾನು ಚಿಕ್ಕವಳಿದ್ದಾಗ ಟೆಲಿವಿಶನಾಗಲೀ ಸಿನಿಮಾವಾಗಲೀ ಜನಪ್ರಿಯ ಸಾಹಿತ್ಯವಾಗಲೀ ನನ್ನ ಗ್ರಾಮದಲ್ಲಿರಲಿಲ್ಲ. ಆದ್ದರಿಂದಲೇ ಇರಬೇಕು, ಅತಿಥಿ ಸತ್ಕಾರವನ್ನು ಒಂದು ಕಲೆಯೆಂಬಂತೆ ಅರಳಿಸುವುದಕ್ಕೆ ಎಲ್ಲರೂ ಮಿತಿಮೀರಿ ಶ್ರಮಿಸುತ್ತಿದ್ದುದು. ಅವರ ವಾಸ್ತವ್ಯವನ್ನು ಲಂಬಿಸುವಂತೆ ಮಾಡಲು ರುಚಿಕರವಾದ ಆಹಾರ ಪದಾರ್ಥಗಳನ್ನು ಉಡುಗೊರೆಗಳನ್ನು ಆತಿಥೇಯರು ನೀಡುತ್ತಿದ್ದರು. ನಾಲಪ್ಪಾಟ್ಟಿಗೆ ಬರುತ್ತಿದ್ದ ಅತಿಥಿಗಳು ಕನಿಷ್ಠ ಒಂದು ವಾರವಾದರೂ ಸಂತೋಷದಿಂದ ಬೀಡು ಬಿಡುತ್ತಿದ್ದರು. ಮಾವನ ಚುರುಕು ಮಾತುಗಳನ್ನು ಆಸ್ವಾದಿಸುತ್ತ ಹೊತ್ತು ಹೋಗುತ್ತಿದ್ದುದೇ ಗೊತ್ತಾಗದೆ ಹೆಚ್ಚಿನ ಸಮಯವನ್ನವರು ಮೊಗಸಾಲೆಯಲ್ಲೇ ಕಳೆಯುತ್ತಿದ್ದರು. ಅವರದ್ದೊಂದು ಜನಪ್ರಿಯ ವ್ಯಕ್ತಿತ್ವ. ವಾಗ್ಮಿಗಳೂ, ಸಾಹಿತಿಗಳೂ, ನೀತಿ ಶಾಸ್ತ್ರಜ್ಞರೂ, ಆಯುರ್ವೇದ ಪಂಡಿತರೂ, ಜ್ಯೋತಿಷ್ಯಿಗಳೂ ಮಾವನ ಸ್ನೇಹಿತರಾಗಿದ್ದರು. ಸ್ನೇಹಿತರಲ್ಲಿ ಮುಖ್ಯರಾದವರು ಕಂಡಿತವಾಗಿ ಶ್ರೀ ಕುಟ್ಟಿಕೃಷ್ಣ ಮಾರಾರ್ರೇ ಆಗಿದ್ದರು. ವರ್ಷದಲ್ಲಿ ಎರಡು ಬಾರಿಯಾದರೂ ಅವರು ನಾಲಪ್ಪಾಟ್ಟಿಗೆ ಬರುತ್ತಿದ್ದರು. ಒಮ್ಮೊಮ್ಮೆ ಬಂದಾಗಲೂ

ಎರಡು ವಾರಗಳಷ್ಟು ಕಾಲ ತಂಗುತ್ತಿದ್ದರು. ಮಾವನ ನಿಧನಾನಂತರ ಪ್ರಕಟಿಸಿದ ಒಂದು ಲೇಖನದಲ್ಲಿ ಮಾವ ಸಾಲ ಕೊಡುವುದಕ್ಕೆ ಹಿಂಜರಿದರೆಂಬ ಇಂಗಿತವಿತ್ತು. ಆದ್ದರಿಂದಲೇ ಇರಬೇಕು, ಮಾವನ ಕೊನೆಯ ವರ್ಷಗಳಲ್ಲಿ ಮಾರಾರ್ ನಾಲಪ್ಪಾಟ್ಟಿಗೆ ಬಾರದಿದ್ದುದು. ಮಾವ ರಾಜನಂತೆ ಬದುಕಿದವರು. ಆದರೆ ಅವರ ಕೈಯಲ್ಲಿ ಹಣವಿರಲಿಲ್ಲ. ಹಣ ಸಂಪಾದನೆಯ ಯಾವ ಮಾರ್ಗವೂ ಅವರ ಕಣ್ಮುಂದೆ ಇರಲೂ ಇಲ್ಲ. ಪುಸ್ತಕಗಳನ್ನು ಮಾರುವುದು ಸುಲಭದ ಕೆಲಸವಾಗಿರಲಿಲ್ಲ. ಮಾರಾರ್‌ರ ಬೇಡಿಕೆ ಮಾವನನ್ನು ಅತ್ಯಧಿಕ ದುಃಖಕ್ಕೆ ಈಡು ಮಾಡಿತ್ತು. ತಾನು ಬಡವನೆಂದು ಬಹಿರಂಗವಾಗಿ ಹೇಳುವುದಕ್ಕೆ ಬೇಕಾದ ಧೈರ್ಯ ಅವರಿಗಿದ್ದಿರಲಿಕ್ಕಿಲ್ಲ. ಅಂತೂ ಆ ಬಾಳಗೆಳೆಯರು ಒಂದು ತಪ್ಪು ಅಭಿಪ್ರಾಯ ನಿಮಿತ್ತವಾಗಿ ಬೇರ್ಪಟ್ಟರು. ಬೇರ್ಪಡುವುದಕ್ಕೆ ಮೊದಲು ಮಾರಾರ್ ಹಲವು ಬಾರಿ ನಾಲಪ್ಪಾಟ್ಟಿನ ಅತಿಥಿಯಾಗಿದ್ದರು. ಮಾವ ಹಾಗೂ ಅವರ ನಡುವೆ ನಡೆಯುತ್ತಿದ್ದ ಸಂಭಾಷಣೆಯನ್ನು ನಾನು ತೆಂಕಚಾವಡಿಯಲ್ಲಿ ಅಜ್ಜಿಯ ಮಡಿಲಲ್ಲಿ ತಲೆಯಿಟ್ಟು ಮಲಗಿ ಆಲಿಸುತ್ತಿದ್ದೆ. ಮಾರಾರ್‌ರ ಧ್ವನಿ ದುರ್ಬಲವಾಗಿದ್ದುದರಿಂದ ಅವರು ಹೇಳುತ್ತಿದ್ದುದೊಂದೂ ನನಗೆ ಅರ್ಥವಾಗುತ್ತಿರಲಿಲ್ಲ. ಮಾವನ ಸ್ವರ ದೃಢವೂ ಪರಿಚಿತವೂ ಆಗಿತ್ತು. ನನಗೆ ಮಲಯಾಳ ಕಲಿಯಬೇಕು ಎಂದು ಮಾವನ ಹತ್ತಿರ ಹೇಳಿದಾಗ ಮಾರಾರ್ ತಂದಿದ್ದ 'ಮಲಯಾಳ ಶೈಲಿ' ಎಂಬ ಪುಸ್ತಕವನ್ನು ಮಾವ ನನ್ನೆದುರಿಗೆ ಚಾಚಿದರು. ಅದು ಓದಿದ ಮೇಲೆ ನನಗೆ ಮಲಯಾಳಂ ಭಾಷೆ ಬಳಸುವ ಧೈರ್ಯ ಬಂತು.

ಮಾರಾರ್ ಸಂಕೋಚ ಪ್ರವೃತ್ತಿಯವರಾಗಿದ್ದರು. ಮಾವನೊಂದಿಗಲ್ಲದೆ ಮತ್ತಾರೊಂದಿಗೂ ಮಾತಾಡಿದ್ದೇ ಇಲ್ಲ. ಅವರು ನಾಗಬನದ ಬದಿಬದಿಯಿಂದಲೂ ಪಶ್ಚಿಮದ ಹಿತ್ತಾಲಿಗಾಗಿಯೂ ನಡೆಯುತ್ತಿದ್ದರು. ಸಂಡಸಿಗೆ ಹೋಗುವಾಗ ಹೆಂಗಸರು ಕಿಟಕಿಗಳ ಪಕ್ಕದಲ್ಲಿ ನಿಂತುಕೊಂಡು ಅವರನ್ನು ನೋಡುತ್ತಿದ್ದರು. ಮಾರಾರ್ ಮಾತ್ರವಲ್ಲ, ಬೇರೆ ಯಾವ ಅತಿಥಿ ಬಂದರೂ ಹೆಂಗಸರು ಕಿಟಕಿಗಳೆಡೆಯಿಂದ ನೋಡುತ್ತಿದ್ದರು. ಊಟಕ್ಕೆ ಮಾವನೊಂದಿಗೆ ತೆಂಕಚಾವಡಿಯಲ್ಲಿ ಕುಳಿತವರನ್ನು ಬಡಗುಚಾವಡಿಯ ಅಗಲದ ದಳಿಗಳೆಡೆಯಿಂದ ಸುಲಭವಾಗಿ ನೋಡಬಹುದಾಗಿತ್ತು. ಮುತ್ತಜ್ಜಿಯಾಗಲೀ ಅಜ್ಜಿಯಾಗಲೀ ಹೆಚ್ಚು ಹೊತ್ತು ಯಾರನ್ನೂ ನೋಡಿ ನಿಲ್ಲುತ್ತಿರಲಿಲ್ಲ. ನೋಡಿ ನಿಲ್ಲುವುದಕ್ಕೆ ಬೇಕಾದ ಸೌಷ್ಠವ ಒಬ್ಬ ಅತಿಥಿಗೂ ಇರುತ್ತಿರಲಿಲ್ಲ.

ಚೇಲನಾಟ್ಟ್ ಅಚ್ಯುತಮೇನೋನ್ ಅತಿ ಹೆಚ್ಚು ಊಟ ಮಾಡುತ್ತಿದ್ದವರು ಎಂಬುದು ನನ್ನ ನೆನಪು. ಕೃಷಿಯ ಬಗ್ಗೆ, ಜಮೀನ್ದಾರ - ಒಕ್ಕಲಿಗರ ಬಗ್ಗೆ ಯಾವಾಗ ನೋಡಿದರೂ ಆವೇಶಭರಿತರಾಗಿ ಮಾತನಾಡುತ್ತಿದ್ದ ಶಂಕರನ್ ನಾಯರ್ ಎಂಬವರು ಅಪರೂಪಕ್ಕೊಮ್ಮೆ ನಾಲಪ್ಪಾಟ್ಟಿಗೆ ಬರುತ್ತಿದ್ದರು. ಅವರೆಂದರೆ ಎಲ್ಲರಿಗೂ ಭಯ. ಗೋಪಿಂದ ಮೆನೋನ್ ಎಂಬ ಹೆಸರಿನ ಓರ್ವ ವಕೀಲರು ಮೂರು ದಿವಸ ತಂಗುವುದಕ್ಕೆ ಬರುತ್ತಿದ್ದರು. ಮಾವನ ಆತ್ಮೀಯರೊಬ್ಬರು ಜ್ಯೋತಿಷಿಗಳಿದ್ದರು. ಶೂಲಪಾಣಿ ವಾರಿಯರ್. ತನ್ನ ಹಾಗೂ ಮನೆಯವರ ಜಾತಕಗಳನ್ನು ಮತ್ತೆ ಮತ್ತೆ

ವಾರಿಯರ ಮೂಲಕ ನೋಡಿಸುವುದು ಮಾವನ ಅಭ್ಯಾಸವಾಗಿತ್ತು. ಜ್ಯೋತಿಷ್ಯದಲ್ಲಿ ನಂಬಿಕೆಯಿರುವುದರಿಂದಲೋ ಅಥವಾ ಹೊತ್ತು ಕಳೆಯಲೆಂದು ನೋಡಿಸುತ್ತಿದ್ದುದೋ ನನಗೆ ಗೊತ್ತಿಲ್ಲ. ತಿಳುವಳಿಕೆ ನೀಡುವ ಯಾವ ಪ್ರಕಾರವೇ ಆದರೂ ಮಾವನಿಗೆ ಅದೊಂದು ಹೊತ್ತು ಕಳೆಯುವ ದಾರಿಯೆಂದೇ ನನ್ನ ಅನಿಸಿಕೆ. ಎಲ್ಲದರಲ್ಲೂ ಭಾಗವಹಿಸುತ್ತಿದ್ದ ಮಾವ ಯಾವುದರಲ್ಲೂ ಮುಳುಗುತ್ತಿರಲಿಲ್ಲ. ಮಾವ ದುಃಖಿಸಿದ್ದನ್ನು ನಾನು ಒಮ್ಮೆ ಮಾತ್ರ ನೋಡಿದ್ದೆ. ಮಾವನ ತಾಯಿಯ ಶವವನ್ನು ಸುತ್ತಿಕಟ್ಟಿ ನೆಂಟರಿಷ್ಟರು ತೆಂಕಓತ್ತಿಲಿಗೆ ಕೊಂಡು ಹೋಗುವಾಗ. ಅವರು ಸಿಹಿಮೂತ್ರ ರೋಗಿಯಾಗಿ ತೆಂಕಚಾವಡಿಯಲ್ಲಿ ಮಲಗಿದ್ದರು. ಮಂಚಕ್ಕೆ ಆತು ಕುಳಿತುಕೊಂಡು ಅವರು ಒಮ್ಮೆಲೆ ಅತ್ತು ಬಿಟ್ಟರು. ಅಳುಪಿನ ಕಟ್ಟೆ ಒಡೆದು ಹೋಯಿತು. ಆ ಅಳು ನನ್ನನ್ನು ಅಚ್ಚರಿಗೆ ಕೆಡಪಿತ್ತು. ಕಾರಣ, ನಾವು ಅತ್ತರೆ "ಛೆ, ಅಳಬಾರದು" ಎಂದುಮುಂತಾಗಿ ಸಮಾಧಾನ ಹೇಳುವ ಮಾವ ಸ್ವಯಂ ಅತ್ತು ಬಿಡುತ್ತಾರೆಂದು ನನಗೆ ನಂಬೋದಕ್ಕೇ ಸಾಧ್ಯವಾಗಿರಲಿಲ್ಲ. ಅವರು ತನ್ನ ಅಮ್ಮನೊಂದಿಗೆ ಮಾತನಾಡುತ್ತಿರಲಿಲ್ಲ. ಹೆಂಗಸರಲ್ಲಿ ಯಾರಿಗಾದರೂ ಸರಿಯೆ ಎಂಬಂತೆ ತೆಂಕಚಾವಡಿಗಿರುವ ಬಾಗಿಲಿನ ಹತ್ತಿರ ಬಂದು ನಿಂತು ಗಟ್ಟಿಯಾಗಿ ಏನನ್ನಾದರೂ ಹೇಳುತ್ತಾರೆ, ಅಷ್ಟೇ. ಪ್ರಶ್ನೆ ಕೇಳಿದರೆ ಉತ್ತರ ಹೇಳುತ್ತಿದ್ದುದು ನನ್ನ ಅಜ್ಜಿ. ಅವರು ಹೆಂಗಸರೆಲ್ಲರ ಪ್ರತಿನಿಧಿಯಾಗಿದ್ದರು. ಮುತ್ತಜ್ಜಿಯಂದಿರು ದೇವರ ನಾಮ ಹೇಳಿ ಬದುಕಿದವರು. ಲಕ್ಷಗಟ್ಟಲೆ ಬಾರಿ ದೇವರ ನಾಮ. ನಾರಾಯಣ, ರಾಮ ರಾಮ, ನಮಃಶ್ಶಿವಾಯ ಮೊದಲಾದ ನಾಮಗಳು. ಮಾವನ ತಾಯಿಯ ಹಾಗೂ ಅಜ್ಜಿಯ ಅಮ್ಮನಾದ ಮುತ್ತಜ್ಜಿಯ ಕತ್ತಿನಲ್ಲಿ ಚಿನ್ನದಲ್ಲಿ ಕಟ್ಟಿಸಿದ ತುಳಸಿ ಮಾಲೆಗಳಿದ್ದುವು. ಕೈ ಬೆರಳುಗಳಲ್ಲಿ ಚಿನ್ನದ, ಬೆಳ್ಳಿಯ, ಚೆಂಬಿನ, ಕಬ್ಬಿಣದ ಹಲವು ಬಗೆಯ ಉರುಟಾದ ಉಂಗುರಗಳೂ.

ಒಮ್ಮೆ ಮಾವನನ್ನು ಕಾಣಲೆಂದೂ ನಾಲಪ್ಪಾಟ್ಟಿನಲ್ಲಿ ತಂಗಲೆಂದೂ ವಾಳಕುನ್ನಂ ನಂಬೂದಿರಿ ಬಂದಿದ್ದರು. ಅವರು ಮಾಯಾಜಾಲ ವಿದ್ಯೆಯಲ್ಲಿ ನಿಪುಣರೆಂಬುದಾಗಿ ಮಾವ ನಮ್ಮೊಂದಿಗೆ ಹೇಳಿದರು. ನಮ್ಮ ಒತ್ತಾಯ ತಡಕೊಳ್ಳಲಾಗದೆ ಅವರು ನಾಲಪ್ಪಾಟಿನ ಹೊರಚಾವಡಿಯಲ್ಲಿ ಇಂದ್ರಜಾಲ ಪ್ರದರ್ಶನ ನೀಡಿದರು. ಎಲ್ಲರ ಉಂಗುರಗಳನ್ನೂ ಬೆರಳಿಂದ ತೆಗೆಸಿ ಅವುಗಳನ್ನು ಹುಗಿದು ಹಾಕುವ ಮೊದಲಾದ ಕೆಲವು ವಿದ್ಯೆಗಳನ್ನವರು ತೋರಿಸಿದ್ದಾಗಿ ನೆನಪು. ಕೊನೆಗೆ ನಾನು ಉತ್ತರದ ಚಾವಡಿಗೆ ಬಂದಾಗ ದೇವಕಿ ಬೆವತು ಹೋಗಿ ನೆಲದಲ್ಲಿ ಬಿದ್ದಿದ್ದಳು.

'ಏನಾಯ್ತು ದೇವಕಿ ?' ನಾನು ಗಟ್ಟಿ ಕೇಳಿದೆ.

'ನನ್ನ ಕತ್ತಿನಲ್ಲಿದ್ದ ಚೈನನ್ನು ಯಾರೋ ಓಡಿದು ಎಳ್ದ ಹಾಗೆ ಅನ್ನಿಸ್ತು. ನನ್ನ ರವಿಕೆ ಒಳಗೂ ಯಾರೋ ಕೈ ಹಾಕಿದ ಹಾಗೆ. ನನ್ನಿಂದಾಗಲ್ಲಪ್ಪಾ. ಮೈಯಿಡೀ ನಡುಕ'.

'ಯಾರು ನಿಮ್ಮ ರವಿಕೆ ಒಳಗೆ ಕೈ ಹಾಕಿದ್ದು ?'

'ಆ ನಂಬೂರಿ. ಆ ಇಂದ್ರ ಜಾಲದವ.'

'ನಂಬೂದಿರಿ ಅಷ್ಟುದೂರ ನಿಂತಿದ್ರಲ್ಲ. ಅವರು ನಿಮ್ಮನ್ನು ನೋಡಿ ಕೂಡ ಇಲ್ಲ.'

'ನೋಡಿದ್ರು, ನೋಡಿದ್ರು, ದೂರ ನಿಂತು ಒಂದೊಂದೇ ಇಂದ್ರಜಾಲ

ತೋರಿಸೋವಾಗ ನನ್ನ ನೋಡಿದ್ರೂಂತ. ನಿಮ್ಗೆ ಕಂಡಿರ್ಲಿಕ್ಕಿಲ್ಲ. ನನ್ನ ನೋಡಿ ರಕ್ತ ಕುಡೀತಿದ್ರು.'

'ನಿಂಗೆ ಅದೆಲ್ಲ ಸುಮ್ಮನೆ ತೋರಿ ಹೋದದ್ದು ದೇವಕಿ.' ಮುತ್ತಜ್ಜಿ ಹೇಳಿದರು: 'ಸುಮ್ಮನೆ ಅಪವಾದ ಹಾಕಿದರೆ ದೈವದೋಷ ಬಂದೀತು.'

'ನನ್ನ ಯಾರೂ ನೋಡ್ಬೋದು. ನನ್ಗೆ ಯಾರೂ ಉಪದ್ರ ಕೊಡ್ಬೋದು. ಕೇಳ್ಲಿಕ್ಕೆ ಯಾರು ಇಲ್ವಲ್ಲ?' ದೇವಕಿ ದೂರಿಕೊಂಡಳು.

'ಅಪ್ಪೋರಿಗೆ ನಂಬೂರಿ ಒಡೇರ ಮೇಲೆ ಯಾಕಿಷ್ಟು ಸಿಟ್ಟು?' ಉಣ್ಣಿಮಾಯಿ ಕೇಳಿದಳು.

'ನಿಮಗೆ ಎಲ್ಲ ಗಂಡಸ್ರ ಮೇಲೂ ಸಿಟ್ಟುಂಟು, ಅಲ್ವೆ?' ನಾನು ದೇವಕಿಯನ್ನು ಕೇಳಿದೆ.

'ನಿಮ್ಗೆ ನನ್ನ ಮನಸ್ಸು ಅರ್ಥವಾಯ್ತು ಮಗೂ' ದೇವಕಿ ಗುಣುಗುಣಿಸಿದಳು. ಅವಳು ಎದ್ದಿದ್ದಳು. ಕೋಣೆಯ ಕಂಬಕ್ಕೊರಗಿ ನಿಂತಿದ್ದ ಶಂಕರನನ್ನು ನೋಡಿದಳು. 'ಗಂಡಸ್ರನ್ನು ನಂಬಿದ್ರೆ ಅವ್ರು ಮೋಸ ಮಾಡ್ತಾರೆ ಮಗೂ. ಮೊದಮೊದ್ಲು ಸಕ್ರೆ ಮಾತಾಡ್ತಾರೆ. ಕೊನೆಗೆ ಮೋಸ ಮಾಡ್ತಾರೆ'

'ನಿಮ್ಗೆ ಗಂಡಸ್ರು ಮೋಸ ಮಾಡಿದ್ರೋ' ನಾನು ಕೇಳಿದೆ.

'ಮೋಸ ಮಾಡ್ಲಿಕ್ಕೆಲ್ಲ ನಾನು ಸಿಗ್ಲಿಕ್ಕಿಲ್ಲ ಮಗೂ. ಯಾವ ಕಲೆಕ್ಟರ್ ಸಾಯಿಬ ಬಂದ್ರೂ ನಾನು ಮೋಸಕ್ಕೆ ಸಿಗ್ಲಿಕ್ಕಿಲ್ಲ. ಆ ಆಸೆಯೆಲ್ಲ ಅವ್ರ ಮನಸ್ನಲ್ಲಿರ್ಲಿ.'

ದೇವಕಿಯ ಏರು ಧ್ವನಿಯ ಮಾತು ಕೇಳುತ್ತ ಅಂಗಳಕ್ಕೆ ಕ್ಯಾಕರಿಸಿ ಉಗುಳುತ್ತ ಶಂಕರನ್ ಅಡುಗೆ ಮನೆಗೆ ನಡೆದ. ಉಣ್ಣಿಮಾಯಿ ಹಲಸಿನ ಹಣ್ಣು ಕೊಯ್ಯುತ್ತಿದ್ದಳು. ಅವಳು ತಲೆ ತಗ್ಗಿಸಿ ಕುಲುಕುಲು ನಕ್ಕಳು. ಅವಳ ಮೂಗಿನ ತುದಿಯಲ್ಲಿ ಸ್ವಲ್ಪ ಮಯಣ ಅಂಟಿಕೊಂಡಿತು.

'ಇಡೀ ಮೇಣಾಯ್ತು' ಅವಳು ಗಟ್ಟಿ ಹೇಳಿದಳು. ಮುತ್ತಜ್ಜಿಯೂ ಆಗ ಗಟ್ಟಿಯಾಗಿ ನಕ್ಕರು.

•

ಅಜ್ಜಿ ಊಟ ಮಾಡಿ ವಿಶ್ರಾಂತಿಗಾಗಿ ಮೇಲೆ ಹೋದಾಗ ಲಕ್ಷ್ಮಿ ಎಂಬ ಕೆಲಸದಾಕೆ ಓಡಿ ಬಂದು ನನ್ನ ಕಿವಿಯಲ್ಲಿ ಮಂತ್ರಿಸಿದಳು:

'ಕೊರವಂಜಿ ಬಂದ್ಯಾಳೆ.'

'ಯಾರು?'

'ಕೈ ನೋಡೋ ಕೊರವಂಜಿ. ನೀವು ಕೊರವಂಜಿಗಳನ್ನು ನೋಡ್ದೇ ಇಲ್ವೆ? ಗಿಳೀನ್ನೂ ತಂದ್ಯಾಳೆ. ನೀವೊಂದು 'ಮುಕ್ಕಾಲು' ಕೊರವಂಜಿಗೆ ಕೊಟ್ರೆ ಗಿಳಿ ಕೊಕ್ಕಿನಿಂದ ಒಂದು ಚೀಟಿ ತಗೀತದೆ. ಅದ್ರಲ್ಲಿರ್ತದೆ ನಿಮ್ಮ ಹಣೆಬರಹ.'

'ಎಲ್ಲಿದ್ದಾಳೆ ಕೊರವಂಜಿ?'

'ಭತ್ತಕುಟ್ಟೋ ಮನೇಲಿ ಕೂತ್ಕೊಳ್ಳಿದೇನೆ. ಅಜ್ಜಮ್ಮ ಕಂಡ್ರೆ ಕೈ ನೋಡಿಸ್ಲಿಕ್ಕೆ ಒಪ್ಪೋದಿಲ್ಲ'. ಭತ್ತ ಕುಟ್ಟುವ ಮನೆಯ ಬರಿನೆಲದಲ್ಲಿ ಕುಳಿತುಕೊಂಡು ತನ್ನ

ಮಗುವಿಗೆ ಕೊರವಂಜಿ ಮೊಲೆ ಕೊಡುತ್ತಿದ್ದಳು. ಹಾಲು ಬೆರೆಸಿದ ಕಾಫಿಯ ಬಣ್ಣವಿತ್ತವಳಿಗೆ. ಹಣೆಯಲ್ಲೂ ಗಲ್ಲದಲ್ಲೂ ಕಡು ಹಸಿರು ಬಣ್ಣದ ಚುಕ್ಕಿಗಳಿದ್ದುವು.

ಕೊರವಂಜಿ ನನ್ನನ್ನು ನೋಡಿ ಹಸನ್ಮುಖ ಬೀರಿದಳು. ಮಗುವಿನ ಬಾಯಿಯ ಒಂದು ಬದಿಯಿಂದ ಮೊಲೆಹಾಲು ಹರಿಯಿತು. ಮಗುವೂ ನನ್ನನ್ನು ನೋಡಿ ನಗುವುದಾಗಿ ಭಾಸವಾಯಿತು.

'ಕೊರವಂಜೀಂತಾನಾ ಹೆಸರೂ?' ನಾನು ಕೇಳಿದೆ. ಲಕ್ಷ್ಮಿಗೆ ನನ್ನ ಪ್ರಶ್ನೆ ಇಷ್ಟವಾಗಲಿಲ್ಲ.

'ಎಂತ ಮಗೂ, ಅಂತಾ ಪ್ರಶ್ನೆಯೆಲ್ಲ ಕೇಳೋದು. ಕೊರವಂಜಿಗಳಿಗೆ ಹೆಸ್ರುಂಟೊ? ಅವಕ್ಕೆ ಹೆಸ್ರಿಲ್ಲ. ಮನೇ ಹೆಸ್ರಿಲ್ಲ. ಅವು ಮನೆ ಮನೆಗಳೆಲ್ಲ ಹತ್ತಿ ಇಳಿದು ನಡೀತವೆ. ಅವಕ್ಕೆ ಮನೆಯಿಲ್ಲ, ಊರಿಲ್ಲ.'

'ರಾತ್ರಿ ಮಲಗೋದೆಲ್ಲಿ?'

'ರಾತ್ರಿ ಮರದಡೀಲಿ ಮಲಗೋದು. ಅಲ್ಲಿದ್ರೆ ಮಲೆಯ ಒಳಗೆ ಯಾವುದೋ ಗುಹೇಲಿ. ಅಲ್ವೆ ಕೊರವಂಜೀ?'

ಕೊರವಂಜಿ ತಲೆ ಕುಲುಕಿದಳು. ಮತ್ತೊಮ್ಮೆ ನನ್ನನ್ನು ನೋಡಿ ಮುಗುಳ್ನಕ್ಕಳು. ಅವಳ ಬಾಯಲ್ಲಿ ತಾಂಬೂಲವಿತ್ತು. ಅದಕ್ಕೇ ಇರಬೇಕು ಅವಳ ತುಟಿಗಳು ಒಳ್ಳೆ ಕೆಂಪಗಿತ್ತು.

'ಎಂತ ಅದು ಹಣೇಲಿ, ಗಲ್ಲದಲ್ಲಿ ಚುಕ್ಕೆ ಚುಕ್ಕೆಯಾಗಿ ಪಚ್ಚೆ ಬಣ್ಣದ್ದು?'

'ಪಚ್ಚೆಹಾಕಿದ್ದು. ಕೊರವಂಜಿಗಳೂ ಕೊರಗರೂ ಪಚ್ಚೆ ಕುತ್ತಿಸಿಕೊಳ್ತಾರೆ. ಒಂದು ಸೂಜೀಲಿ ಚುಚ್ಚಿ ರಕ್ತ ಬಂದಮೇಲೆ ಅದ್ರ ಮೇಲೊಂದು ಎಲೇ ರಸ ಉಜ್ಜಿ ಬಿಡೋದು' ಲಕ್ಷ್ಮಿ ಹೇಳಿದಳು.

ಆಗಲೂ ಕೊರವಂಜಿ ಏನೂ ಮಾತನಾಡಲಿಲ್ಲ. ನನಗೆ ಲಕ್ಷ್ಮಿಯ ಮಾತಿನ ಧೋರಣೆ ನಿರುತ್ಸಾಹ ತಂದಿತು. ನಾನು ಕೊರವಂಜಿಯನ್ನು ಕೇಳಿದ ಪ್ರಶ್ನೆಗಳಿಗೆಲ್ಲ ಲಕ್ಷ್ಮಿ ತಾನೇ ಉತ್ತರ ಹೇಳುವುದು ನನಗೆ ಏನೇನೂ ಇಷ್ಟವಾಗಲಿಲ್ಲ. ನಾನು ಅವಳ ಕೈ ಕೊಡವಿ ಕೊರವಂಜಿಯ ಹತ್ತಿರ ಸರಿದು ನಿಂತೆ.

'ಈ ಕಡೆ ನಿಲ್ಲಿ ಮಗೂ' ಲಕ್ಷ್ಮಿ ಗದರಿದಳು: 'ಕೊರವಂಜಿಯನ್ನು ಮುಟ್ಬೇಡಿ. ಅದರ ಮೈಯೆಲ್ಲ ಕೆಸ್ರು.'

ಅವಮಾನಿಸಲ್ಪಟ್ಟೂ ಕೊರವಂಜಿ ನಗುಮುಖದವಳಾಗಿಯೇ ಇದ್ದಳು. ನನ್ನ ಮುಖ ಆಕೆಯ ಕಣ್ಣುಗಳಲ್ಲಿ ಪ್ರತಿಫಲಿಸುವುದನ್ನು ನಾನು ನೋಡಿದೆ. ಆಕೆಯ ಮುಖದಿಂದ ಹೊಗೆ ಸೊಪ್ಪಿನದ್ದೂ ಹೊಸ ಮಣ್ಣಿನದ್ದೂ ವಾಸನೆ ಹೊಮ್ಮಿತು.

'ಈ ಕಡೆ ನಿಲ್ಲಿ ಮಗೂ. ಇಲ್ಲಿದ್ರೆ ನಾನೀಗ ಅಜ್ಜಮ್ಮನ್ನ ಕರೀತೀನಿ. ಕೊರವಂಜಿನ್ನು ಮುಟ್ಟಿದ್ರೆ ಕೂಡ್ಲೆ ಹೋಗಿ ಮೀಬೇಕು. ಅವು ಅಲೆಮಾರಿಗಳಲ್ವೆ?'

'ಕೊರವಂಜಿಯ ಮನೆಯೆಲ್ಲಿ?' ನಾನು ಕೇಳಿದೆ. ಆಗಲೂ ಕೊರವಂಜಿ ಮಾತನಾಡಲಿಲ್ಲ. ಎಲ್ಲ ಪ್ರಶ್ನೆಗಳಿಗೂ ಉತ್ತರವಾಗಿ ತನ್ನ ಮುಗುಳ್ನಗೆಯುಂಟಲ್ಲ ಎಂಬ ಭಾವ ಅವಳದ್ದು.

'ಕೊರವಂಜಿಗಳಿಗೆ ಮನೆಯಿಲ್ಲಾಂತ ಗೊತ್ತಿಲ್ವೆ ಮಗೂ ?' ನಾ ಹೇಳ್ಳಿಲ್ವೆ, ಅವುಗಳಿಗೆ ಮನೆ, ಗುಡಿಸ್ಲು ಇಲ್ಲಾಂತ. ಮಗೂಗೆ ನನ್ಮೇಲೆ ನಂಬಿಕೆ ಇಲ್ವಲ್ವ ?'

'ನೀ ಹೋಗಿ ಮಲಕ್ಕೊ' ನಾನು ಕೆಲಸದವಳಿಗೆ ಹೇಳಿದೆ.

'ಹೌದೌದು. ನಾನು ಹೋಗಿ ನಿದ್ದೆ ಮಾಡ್ತೇನೆ. ಆ ಹೊತ್ತುನೋಡಿ ಕೊರವಂಜಿ ನಿಮ್ಮನ್ನು ಹಿಡ್ಕೊಂಡು ನಡೆದು ಬಿಟ್ರೆ ?'

ಕೊರವಂಜಿ ನನ್ನನ್ನು ಹಿಡ್ಕೊಂಡು ಹೋಗ್ಲಿಕ್ಕಿಲ್ಲ. ಅಲ್ವೆ ?' ನಾನು ಕೇಳಿದೆ.

'ಇಲ್ಲ' ಅವಳೆಂದಳು.

'ಇವ್ರು ಎರಡು 'ಮುಕ್ಕಾಲು' ಕೊಡ್ತಾರೆ. ನನ್ನದೂ ಮಗೂನದ್ದೂ ಕೈ ನೋಡ್ತಿಯಾ ? ಗೂಡಿನ ಬಾಗ್ಲು ತೆರ್ದು ಗಿಳೀನ್ನ ಹೊರಕ್ಬಿಡು. ಗಿಳಿ ಚೀಟಿ ತೆಗೀಲಿ' ಲಕ್ಷ್ಮಿ ಹೇಳಿದಳು.

ಆಗಷ್ಟೆ ನಾನು ಆ ಗಿಳಿಯನ್ನು ಮೊದಲ ಬಾರಿಗೆ ನೋಡಿದ್ದು.

ಅದರ ಗೂಡನ್ನು ಒಂದು ಕೆಂಪು ಬಟ್ಟೆಯಿಂದ ಮುಚ್ಚಲಾಗಿತ್ತು. ಆ ಬಟ್ಟೆ ಸರಿಸಿ ಗೂಡು ತೆಗೆದು ನನ್ನ ಮುಖದ ಹತ್ತಿರ ಹಿಡಿದು ಕೊರವಂಜಿ ಹೇಳಿದಳು.

'ಗಿಳಿಯಮ್ಮಂಗೆ ಸೋಕ್ಯವಿಲ್ಲ. ಇವತ್ತು ಗಿಳಿಯಮ್ಮ ಚೀಟಿ ತೆಗೀಲಿಕ್ಕಿಲ್ಲ.'

'ಅದು ಚೀಟಿ ತೆಗೀದಿದ್ರೆ ದುಡ್ಡೂ ಸಿಗ್ಲಿಕ್ಕಿಲ್ಲ' ಲಕ್ಷ್ಮಿ ಹೇಳಿದಳು.

ಕೊರವಂಜಿ ಮ್ಲಾನವದನೆಯಾದಳು.

'ಗಿಳಿಯಮ್ಮಂಗೆ ಏನೇನೂ ಕೊಡ್ಡೋದಿಲ್ಲ. ಇವತ್ತದು ಏನೂ ತಿಂದಿಲ್ಲ.'

ಗೂಡಿನಲ್ಲಿಟ್ಟಿದ್ದ ಚಿಕ್ಕ ತಟ್ಟೆಯಲ್ಲಿ ಧಾನ್ಯ ತುಂಬಿದ್ದುದನ್ನು ನಾನು ಕಂಡೆ. ಸಾಮುಕ್ಕಿಯಂಥ ಧಾನ್ಯ.

'ಸ್ವಲ್ಪ ಹಾಲು ಕೊಟ್ಟರೆ ?' ನಾನು ಕೇಳಿದೆ.

'ಗಿಳಿಯಮ್ಮ ಏನೂ ಕುಡಿಯಾಕಿಲ್ಲ. ಅದ್ಕೇನೂ ಕೂಡ್ದು.'

'ಗಿಳಿಗೇನಾಗಿದೆ ?'

'ಹೊರ್ಕಟೆ, ರಾತ್ರೀ ಹಗಲೂ ಹೊರ್ಕಟೆ, ಕಣ್ಣು ತಾಗಿದ್ದು.'

'ಅದು ಸತ್ತೋದಿತಾ ?' ನಾನು ಕೇಳಿದೆ.

'ಗೊತ್ತಿಲ್ವಮ್ಮಾ' ಆಕೆ ಹೇಳಿದಳು.

ಗಿಳಿಗೆ ಎಲೆ ಹಸುರು ಬಣ್ಣವಿತ್ತು. ಕೊಕ್ಕಿನ ಮೇಲೆ ಗಾಯದ ಕಲೆಗಳಿದ್ದವು. ದೈನ್ಯತೆ ಬಿಂಬಿಸುವ ಕಣ್ಣುಗಳು ಆ ಗಿಳಿಗಿದ್ದಂತೆ ನನಗೆ ಭಾಸವಾಯಿತು.

'ಇದಕ್ಕೆಷ್ಟು ಪ್ರಾಯ ಆಗ್ತಹುದು ?' ನಾನು ಕೇಳಿದೆ.

'ಇದಕ್ಕೆ ಮುನ್ನೂರು ವಯಸ್ಸಾಯ್ತಮ್ಮಾ' ಕೊರವಂಜಿ ಹೇಳಿದಳು.

'ಮುನ್ನೂರಾ ? ಹಸಿ ಸುಳ್ಳು ಹೇಳ್ಬೇಡ ಕೊರವಂಜಿ' ಲಕ್ಷ್ಮಿ ಹೇಳಿದಳು.

'ಹೌದಮ್ಮಾ ನಿಜಕ್ಕೂ ನನ್ನಪ್ಪನ ಅಮ್ಮನ ಗಿಳಿಯಿದು. ಅವರಿಗೆ ಅವರ ತಂದೇ ಕೈಯಿಂದ ಸಿಕ್ಕಿದ ಗಿಳಿಯಿದು.'

'ಇದರ ಹೆಸರೆಂತ ?'

'ಸಿವಗಾಮಿ.'

'ಹೆಣ್ಣು ಗಿಳಿ, ಅಲ್ವೆ ?'

'ಹೌದು, ಹೆಣ್ಣು ಗಿಳಿ.'

ಶಿವಗಾಮಿಯನ್ನು ಹೊರತೆಗೆದು ಕೊರವಂಜಿ ಅದರ ನೆತ್ತಿಗೆ ಮುತ್ತಿಟ್ಟಳು. ಮಡಿಲಲ್ಲಿ ಮಲಗಿ ನಿದ್ರಿಸಿದ್ದ ಮಗು ಎದ್ದು ಅಳತೊಡಗಿತು.

'ನಾನು ಗಿಳಿಯನ್ನು ಮುಟ್ಲಿಯಾ ?'

'ಮಗೂನ ಕೈಯಿಂದ ಗಿಳಿ ಹಾರಿ ಬಿಟ್ಟೀತು. ಅವ್ರ ಕೈಗೆ ಗಿಳೀನ್ನ ಕೊಡ್ಬೇಡ' ಲಕ್ಷ್ಮಿ ಹೇಳಿದಳು.

'ಗಿಳಿಯಮ್ಮನಿಗೆ ಓಡ್ಲಿಕ್ಕಾಗೋದಿಲ್ಲ. ಅದಕ್ಕೆ ಸೋಕ ಪಿಲ್ಲ' ಕೊರವಂಜಿ ಹೇಳಿದಳು.

ನಾನು ಅದನ್ನು ನೇವರಿಸಿದೆ. ಅದರ ಕುತ್ತಿಗೆಯಲ್ಲಿ ಒಂದು ನಾಡಿ ಮಿಡಿಯುವುದನ್ನು ನಾನು ಅದ್ಭುತವೆಂಬಂತೆ ಕಂಡು ಓಡಿದೆ. ಅದು ರೆಕ್ಕೆಯನ್ನು ಒಮ್ಮೆ ಅಗಲಿಸಿ ಒಳಿಕ ಸೋತ ಭಾವದಿಂದ ನನ್ನ ಅಂಗೈಯಲ್ಲಿ ಸುರುಟಿ ಕೂತಿತು. ಅದರ ರೆಕ್ಕೆಯಲ್ಲಿ ಅಂಟಿದ್ದ ಉಮಿ, ಕಸಗಳನ್ನು ನಾನು ಊದಿ ಕೆಡವಿದೆ.

'ನಾನು ಗಿಳಿಯನ್ನು ಕೆಳಗಿಡ್ಲ ?'

'ಗಿಳಿಯಮ್ಮ ಹಾರ್ಲಿಕ್ಕಿಲ್ಲ.'

ಗಿಳಿ ಮೆಲ್ಲಗೆ ಹರಿದು ಹರಿದು ಭತ್ತ ಕುಟ್ಟುವ ಒರಲಿನ ಹತ್ತಿರಕ್ಕೆ ಹೋಯಿತು. ಅಲ್ಲಿ ನೆಲದಲ್ಲಿ ಬಿದ್ದಿದ್ದ ಒಂದು ಭತ್ತವನ್ನದು ಕೊಕ್ಕಿನಲ್ಲಿ ಕುಕ್ಕಿತು. ಗಿಳಿಯ ಬಲಕಾಲು ಸ್ವಲ್ಪ ಕುಂಟುತ್ತಿತ್ತು.

'ಅದರ ಕಾಲಿಗೇನಾಯ್ತು ?'

'ಬೆಕ್ಕಿಡಿದದ್ದು. ಸರಿಗೆಯ ಎಡೇಂದ ಬೆಕ್ಕಿಡೀತು. ದುಡ್ಡು ಕೊಟ್ರೆ ಕೈ ನೋಡ್ತೋದಮ್ಮಾ'

ನಾನವಳಿಗೆ ಒಂದಾಣೆ ಕೊಟ್ಟೆ.

'ಮಾನಗೆಟ್ಟ ಗಂಜಿ ಉಣ್ಣಾಕ್ಕಿಲ್ಲ' ಕೊರವಂಜಿ ನನ್ನ ಎಡದ ಕೈ ನೋಡುತ್ತಾ ಹಾಡಿದಳು. ಮತ್ತವಳು ಭತ್ತ ಕುಟ್ಟೋ ಮನೆಯಿಂದ ಹೊರಕ್ಕೆ ನಡೆದು ಬಾಯಲ್ಲಿದ್ದ ವೀಳ್ಯದೆಲೆ ಮುಂತಾದುವನ್ನು ಹ್ಯೊಗೆ ಮಣ್ಣಿನಲ್ಲಿ ಉಗುಳಿದಳು.

'ನನ್ನ ಮದ್ವೆ ಯಾವಾಗಾಂತ ಹೇಳ್ತೀಯಾ' ಲಕ್ಷ್ಮಿ ಕೊರವಂಜಿಯನ್ನು ಕೇಳಿದಳು. ದಡ್ಡುಗಳಿಂದ ಕೂಡಿದ ಚೌಕಾಕೃತಿಯ ಕೈಯನ್ನು ಕೊರವಂಜಿಯ ಕಡೆ ಚಾಚಿ ಕಣ್ಣು ಮುಚ್ಚಿ ಧ್ಯಾನಸ್ಥಳಾದವಳಂತೆ ಅವಳು ನಿಂತಳು. ನನಗೆ ನಗು ಬಂತು. 'ಯಾಕಮ್ಮಾ ನಗ್ತೀಯಾ ? ಬಡೋರಿಗೂ ಮದ್ವೇಂತ ಬೇಡ್ವೆ ?'

ಕೊರವಂಜಿ ಗಂಟಲು ಸರಿಪಡಿಸಿದಳು. ಅವಳು ಲಕ್ಷ್ಮಿಯ ಅಂಗೈಯನ್ನು ಬಹಳ ಹೊತ್ತು ದುರುಗುಟ್ಟಿ ನೋಡಿದಳು.

'ನಿಮ್ಗೆ ಮದ್ವೆಯ ರೇಖೇನೇ ಇಲ್ವಲ್ಲಮ್ಮಾ' ಅವಳು ಹೇಳಿದಳು.

'ಸಂಗೀ ಜನ್ಮದಲ್ಲಿ ಮದುವೇನೇ ಇರ್ಲಿಕ್ಕಿಲ್ವೆ ?'

'ಇಲ್ವಲ್ಲಾ, ಆದರೆ, ಸಂತಾನ ರೇಖೆ ಕಾಣ್ತದೆ. ಎಲ್ಡು ಗಂಡು, ಮೂರು ಹೆಣ್ಣು'

'ನನ್ನ ಗೋಯಿನೋರಿನ ದೈವವೇ.... ನನ್ನ ಮೋಸ ಮಾಡ್ತಾನೆ ? ಆ ಹಡಬೆಗೆ ಹುಟ್ಟಿದವ ನನ್ನ ಮೋಸ ಮಾಡ್ತಾನೆ ?'

ಲಕ್ಷ್ಮಿ ಜೋರು ಜೋರಾಗಿ ಅಳತೊಡಗಿದಳು. ಕೊರವಂಜಿ ತನ್ನ ರವಕೆ ತುದಿ ಗಟ್ಟಿ ಕಟ್ಟಿದಳು. ಮಗುವನ್ನೆತ್ತಿ ತೂಗು ಬಟ್ಟೆಯಲ್ಲಿ ನೇತು ಹಾಕಿ ಗಿಳಿಗೂಡು ತೆಗೆದುಕೊಂಡು ಬೇಲಿಯ ಕಡೆಗೆ ಬೇಗ ಬೇಗ ನಡೆದಳು.

'ನನ್ನ ಆಣೆಯೂ ಹೋಯ್ತಲ್ಲೋ' ಲಕ್ಷ್ಮಿ ಅತ್ತಳು.

'ನಿನ್ನ ಆಣೆಯಲ್ಲ ಹೋದ್ದು. ನನ್ನ ದುಡ್ಡಲ್ವೆ ನಾನು ಕೊಟ್ಟದ್ದು ?'

'ಈ ಮಗೂನ ದುಡ್ಡು ಹೋಯ್ತಲ್ಲೋ! ಈ ದರಿದ್ರ ಹಿಡಿದ ಕೊರವಂಜಿಗಳು ಮನೆಗ ಸೇರ್ಸೋದಿಕ್ಕೆ ಯೋಗ್ಯರಲ್ಲಾ. ಅಜ್ಜಮ್ಮನಿಗೆ ಗೊತ್ತಾದ್ರೆ ನನ್ನ ಬೈದು ಕಣ್ಣು ತೆಗೆದಾರು'

'ನೀನು ಕರೆದದ್ದಕ್ಕಲ್ವಾ ಆ ಕೊರವಂಜಿ ಬಂದದ್ದು ?'

'ಅದೀಗ ಚೆನ್ನಾಯ್ತು. ನಾನು ಕೊರವಂಜಿಗಳನ್ನೆಲ್ಲ ಕರೀಲಿಕ್ಕಿಲ್ಲಪ್ಪ. ಇಲ್ಲಿಗವಳನ್ನು ಕರ್ದದ್ಯಾರು ? ನಂಗೊತ್ತಿಲ್ಲ. ಶಂಕರನಾಯರೇ ಕರೆದಿರ್ಬೇಕು.' ಲಕ್ಷ್ಮಿ ಧ್ವನಿ ತಗ್ಗಿಸಿ ಹೇಳಿದಳು.

ಒಮ್ಮೆ ನಾನು ಅಜ್ಜಿಯ ಕೆಲಸದವರೊಂದಿಗೆ ಗುರುವಾಯೂರಿಗೆ ಹೋಗುತ್ತಿದ್ದಾಗ ವೈಲತ್ತೂರಿನಲ್ಲಿ 'ಹೋಹೋ' ಎಂಬುದಾಗಿ ಗಟ್ಟಿ ಶಬ್ದ ಮಾಡುತ್ತ ಹೋಗುತ್ತಿದ್ದ ಜನಗಳ ಒಂದು ಗುಂಪನ್ನು ನೋಡಿದೆ. ಸಂಘದ ನಾಯಕ ಅಂಗಿ ಧರಿಸದ ಓರ್ವ ದಢೂತಿ ಮನುಷ್ಯನಾಗಿದ್ದ. ಆತನ ಅಗಲವಾದ ಬಾಯಿಂದ ಕರ್ಕಶವಾದ ಆ ಧ್ವನಿ ಆಗಾಗ ಹೊಮ್ಮುತ್ತಿತ್ತು. ಅಜ್ಜಿ ನನ್ನ ಕೈಯನ್ನು ಗಟ್ಟಿಯಾಗಿ ಹಿಡಿದು ಒಂದು ಮಾಮರದ ಹಿಂದೆ ಅವಿತಳು. ಕೆಲಸದವರು, ತಬ್ಬಿಬ್ಬುಗೊಂಡದ್ದರಿಂದಲೇ ಇರಬೇಕು, ತೆಂಗಿನ ಹೊಂಡಕ್ಕೆ ಕಾಲು ಜಾರಿ ಬಿದ್ದದ್ದು. ಅಲ್ಲಿಂದ ಮೇಲೇಳಲಿಕ್ಕೆ ಅವರು ಕಾಲಿನ ಕಸರತ್ತು ಮಾಡುತ್ತಾ ಪಾಡು ಪಡುತ್ತಿದ್ದರು. ಅಜ್ಜಿ ಅಂಗೈಯಿಂದ ತನ್ನ ಬಾಯಿ ಮುಚ್ಚಿ ನಕ್ಕರು.'

'ಹೋ' ದಡಿಯ ಮತ್ತೊಮ್ಮೆ ಕೂಗಿದ. ಆತ ನನ್ನ ಅಜ್ಜಿಯನ್ನು ಸೂಕ್ಷ್ಮವಾಗಿ ನೋಡುತ್ತ ನಿಧಾನವಾಗಿ ದಾಟಿ ಹೋದ. ಅಜ್ಜಿಯ ಕೆನ್ನೆ ನಾಚಿಕೆಯಿಂದಲೇ ಇರಬೇಕು, ಕೆಂಪಾಯಿತು.

'ಯಾರು ಆ ದಡಿಯ ? ಯಾಕೆ ಆತ ಹೋ ಹೋಂತ ಕೂಗೋದು ?'

'ಅದೊಬ್ಬ ನಂಬೂರಿ. ತಂಬುರಾನ್, ನಂಬೂರಿ ಮುಂತಾದೋರು ನಡೆದು ಹೋಗುವಾಗ 'ಹೋಹೋ' ಅನ್ತಾರೆ. ಮೈಲಿಗೆ ಮಂದಿ ಹತ್ತಿರ ಸುಳಿಯದಿರಲೀಂತ.'

'ಮೈಲಿಗೆ ಮಂದಿಯಾ ?'

'ಹ್ಞಂ. ಕೆಳಜಾತಿಯವರು.'

'ನಾವು ಕೆಳಜಾತಿಯವರಾ ?'

'ನಾವು ಕೆಳಜಾತಿಯವರಲ್ಲ......... ಆದರೂ ನಾವು ಅವರಷ್ಟು ಮೇಲ್ಜಾತಿಯವರಲ್ವಲ್ಲ.'

'ಅವರನ್ನು ಕಂಡಾಗ ಹೆದರಿದಿರಿ ಅಲ್ವೆ ?'

'ಹೆಧ್ರಿಕೆಯೇನೂ ಇಲ್ಲ' ತೆಂಗಿನ ಗುಂಡಿಯಿಂದ ಉಣ್ಣಿಮಾಯ ಮೇಲೆದ್ದಳು. ದೇವಕಿ ಆಗಲೂ ತನ್ನ ತೋರವಾದ ಕಣಕಾಲುಗಳನ್ನು ಮೇಲಕ್ಕೆತ್ತುತ್ತ ಒದ್ದಾಡುತ್ತಿದ್ದಳು.

'ನನ್ನಿಂದಾಗಲ್ಲಪ್ಪಾ ನನ್ನಿಂದಾಗಲ್ಲ' ಅವಳು ಏದುಸಿರಿನ ನಡುವೆ ಕೂಗಿದಳು.

'ನಂಬೂರ್ಯೊರ್ಡೇರನ್ನು ಕಂಡಾಗ ಅಮ್ಮೋರಿಗೆ ಜೀವವೇ ಹೋಗಿ ಬಿಡ್ತು' ಉಣ್ಣಿಮಾಯ ಹೇಳಿದಳು. 'ಕೈಕಾಲುಗಳು ತಣ್ಣೀರಿನ ಹಾಗೆ ತಂಪಾಯ್ತು.'

'ಈಚೆಗೇಳಂತೊಮ್ಮೆ ನಿನ್ನ ಕೋಮಾಳಿಬುದ್ಧಿ ತೋರಿಸ್ಬೇಡ' ಅಜ್ಜಿ ಬಾಗಿ ನಿಂತು ಒಂದು ಕೈಯನ್ನು ದೇವಕಿ ಕಡೆ ಚಾಚಿದರು.

'ನಂಗೆ ಹತ್ತೋಕೆ ಆಗಲ್ಲಮ್ಮೋ.... ನಾನಿಲ್ಲೇ ಸತ್ತೋಗ್ತೇನೆ ನನ್ನಮ್ಮೋ...'

ದೇವಕಿಯ ಕಣ್ಣುಗಳು ವಿಕಾರವಾದುವು. ಕಣ್ಣಿಗೊಂಬೆ ಮೇಲಕ್ಕೆ ಏರತೊಡಗಿತ್ತು.

'ಇದೇನಿವಳಿಗೆ' ಹುಚ್ಚು ಹಿಡೀತಾ ?' ಅಜ್ಜಿ ಯಾರೊಂದಿಗೆ ಎಂದಿಲ್ಲದೆ ಕೇಳಿದರು. ನಮ್ಮನ್ನು ದಾಟಿ ಹೋದ ನಂಬೂದಿರಿಯೂ ಬಳಗದವರೂ ಹಿಂದಿರುಗಿ ಬಂದರು.

'ಏನಾಯ್ತು ?' ಆತ ಕೇಳಿದ. ಅಜ್ಜಿ ಉತ್ತರಿಸಲಿಲ್ಲ. 'ದೇವಕಿ ಅಮ್ಮೋರು ತೆಂಗಿನ ಗುಂಡಿಗೆ ಬಿದ್ರು. ಈಗ ಏಳ್ಳಿಕ್ಕೂಡೋದಿಲ್ಲ. ದೃಷ್ಟಿ ಮೇಲೆ ಹೋಗ್ತಾ ಉಂಟು. ಮೂರ್ಛೆರೋಗಾಂತ ತೋರ್ತದೆ' ಉಣ್ಣಿಮಾಯ ಹೇಳಿದಳು.

ನಂಬೂದಿರಿ ದೇವಕಿಯ ಕಾಲುಗಳನ್ನು ನೋಡಿದರು.

'ರಾಮಾ, ಅದನ್ನು ಹಿಡಿದೊಮ್ಮೆ ಹತ್ತಿಸ್ತೀಯಾ' ಆತ ಗುಂಪಿನಲ್ಲಿದ್ದ ಒಬ್ಬನಲ್ಲಿ ಹೇಳಿದರು.

ಕಪ್ಪಗೆ ದಪ್ಪಕ್ಕಿದ್ದ ಒಬ್ಬ ಯುವಕ ದೇವಕಿಯನ್ನು ಬಾಚಿ ಎತ್ತಿ ಒಂದು ಮಾವಿನ ಬುಡದಲ್ಲಿ ಮಲಗಿಸಿದ. ಅಷ್ಟು ಹೊತ್ತಿಗೆ ಅವಳ ಕಣ್ಣುಗಳು ಪೂರ್ಣವಾಗಿ ಮುಚ್ಚಿ ಹೋಗಿದ್ದವು.

ದೇವಕಿ ನಿದ್ರೆಯ ಅಭಿನಯ ಮಾಡುತ್ತಿದ್ದಾಳೆಂದು ನನಗೆ ತೋರಿತು.

'ಅದಕ್ಕೆ ಎಂತ ರೋಗವೂ ಇಲ್ಲ. ಹಾಂಕಾರ ತೋರ್ಸೋದು.... ಹಾಂ. ನಾ ಹೋಗ್ಲಾ ?' ನಂಬೂದಿರಿ ಅಜ್ಜಿಗೆ ಹೇಳಿದರು.

ಹೋಹೋ ಎನ್ನುತ್ತಾ ಅವರು ಅಪ್ರತ್ಯಕ್ಷರಾದಾಗ ಅಜ್ಜಿ ಹೇಳಿದರು.

'ಇನ್ನು ದೇವಕಿಯನ್ನು ಕರ್ಕೊಂಡು ನಾನೆಲ್ಲಿಗೂ ಹೋಗ್ಲಿಕ್ಕಿಲ್ಲ. ಮರ್ಯಾದೆ ಹೋಯ್ತು.'

'ದೇವಕಿ ಹಾಂಕಾರ ತೋರಿಸ್ತಾಳಾ ?' ನಾನು ಪಿಸುದನಿಯಲ್ಲಿ ಕೇಳಿದೆ.

ದೇವಕಿ ಮತ್ತೆಯೂ ಬಿಕ್ಕತೊಡಗಿದಳು.

'ಆತ ನನ್ನನ್ನು ಎತ್ತಿದಾಗ ಆತನ ಉಗುರು ತಾಗಿ ನನ್ತೊಡೇಲಿ ಗೀರು ಬಿತ್ತು. ಉರಿಯೋದ್ರಲ್ಲಿ ಕೂಡೋದಿಲ್ಲ' ಅವಳು ಗೊಣಗಿದಳು.

'ಹಾಗಿದ್ರೆ ಅಮ್ಮೋರಿಗೆ ಎಚ್ಚರವಿತ್ತು. ಅಲ್ವೆ ?' ಉಣ್ಣಿಮಾಯ ಕೇಳಿದಳು.

'ನಂಬೂರ್ಯೊರ್ಡೇರ ಕಾರ್ಯಸ್ಥ ಅಮ್ಮೋರನ್ನು ಎತ್ತಿ ಮೇಲೆ ತಂದಾಗ ಅವ್ರಿಗೆ ಎಚ್ಚರವಿತ್ತು' ಉಣ್ಣಿಮಾಯ ಅಜ್ಜಿಯೊಂದಿಗೆ ಹೇಳಿದಳು.

'ಇನ್ನೀ ಜನ್ಮದಲ್ಲಿ ನಾನು ಇವಳನ್ನು ಕರ್ಕೊಂಡು ಎಲ್ಲಿಗೂ ಹೊರಡ್ಲಿಕ್ಕಿಲ್ಲ' ಅಜ್ಜಿ ಹೇಳಿದರು.

ಕಡಲಾಯಿ ಮನೆಯವರ ಕೊಳದಲ್ಲಿ ಇಳಿದು ಮುಖ ತೊಳೆದಾಗ ದೇವಕಿಗೆ ಮೈಮರೆಯುವಿಕೆ ನೀಗಿ ಸಾಕಷ್ಟು ಪ್ರಜ್ಞೆ ಮೂಡಿ ಬಂತು.

'ನಂಗೇನು ಹಿಡೀತೂಂತ ನಂಗೇ ಗೊತ್ತಿಲ್ಲ ಮಗೂ' ಅವಳು ಹೇಳಿದಳು: 'ಆ ನಂಬೂರ್ಯೊರ್ಡೇರ ಕಾರ್ಯಸ್ಥನ ಕಣ್ಣು ಕಂಡಾಗ್ಲೇ ನಾನು ಕುಸ್ದೆ. ಕೋಳಿ ಮರೀನ್ನು ಕುಕ್ಕಿ ಕೊಂಡೊಯ್ಯೋದಕ್ಕೆ ಬರೋ ಹದ್ದಿನ ಹಾಗಲ್ವೆ ಆಜನ ನನ್ನ ನೋಡಿದ್ದು! ಹೀಗುಂಟಾ ಒಂದು ನೋಟ? ನನ್ನೆದೇಲಿ ನಿಮ್ಮ ಕೈಯಿಟ್ಟು ನೋಡಿ ಮಗೂ.... ಎದೆ ಒಳಗಿಂದ ಒಂದು ಲಾಗ. ನನ್ನ ಮೈಯಿಡೀ ನಡ್ಗಿ ಹೋಯ್ತು. ನನ್ನ ತೊಡೇಲಿ ಆ ವ್ಯಕ್ತಿಯ ಉಗುರೂ ಕಂತಿತು. ನನ್ನ ಏನು ಮಾಡಿದ್ರೂ ಕೇಳ್ಳಿಕ್ಯಾರಿಲ್ವಲ್ಲ. ನಾನು ಕಲ್ತೂ ಇಲ್ಲ. ನನ್ನ ಯಾರೂ ಬೇಕಾದ್ರೂ ಕರೀಬಹುದಲ್ಲ. ಯಾರೂ ಕೇಳ್ಳಿಕ್ಕಿಲ್ಲಲ್ಲ'

ದೇವಕಿ ಕಂಠ ಬಿಗಿದು ಮಾತನಾಡುತ್ತಲೇ ಇದ್ದಳು. ಅಜ್ಜಿಯೂ ಉಣ್ಣಿಮಾಯೆಯೂ ನಮಗಿಂತ ಹತ್ತಡಿ ದೂರದಲ್ಲಿ ನಡೆಯುತ್ತಿದ್ದರು. ಅವರು ಪಾಯಸ ತಯಾರಿಸುವ ಕಡಾಯದ ಬಗ್ಗೆ ಚರ್ಚಿಸುತ್ತಿದ್ದರು.

'ನಾನು ಯಾರಿಗೂ ಬೇಡ್ವಲ್ಲ' ದೇವಕಿ ಮುಂದುವರಿಸಿದಳು: 'ನನ್ನನ್ನ್ಯಾರಿಗೂ ಇಷ್ಟವಿಲ್ಲಲ್ಲ. ನಾನು ಸತ್ರೂ ಯಾರಿಗೂ ದುಃಖವಿಲ್ಲ. ನಿಮ್ಮ ಕುಟುಂಬದೋರ್ಗೂ ನನ್ನ ಕಂಡ್ರೆ ಆಗೋದಿಲ್ಲ ಮಗೂ. ನಿನ್ನೆ ಸಂಜೆ ನಾನು ಅಂಗಳದಾಚೆ ಮಲ್ಲಿಗೆ ಕೊಯ್ಯೋದಕ್ಕೆ ಹೋಗೋವಾಗ ಅಜ್ಜಮ್ಮ ಹೇಳಿದ್ರು, ಎದುರ್ಗಡೆ ಅಂಗಳದಲ್ಲಿ ನಿಲ್ಬೇಡ, ಒಳಗೆ ಹೋಗು ದೇವಕೀಂತ. ಸಂಜೆ ಬಡಗಿನ ಅಂಗಳದಲ್ಲಿ ಬೆಳ್ದಿಂಗಳು ನೋಡ್ತಾ ನಿಂತರೆ ನಿಮ್ಮ ಮುತ್ತಜ್ಜಿ ಹೇಳಿದ್ರು, ದೇವಕೀ ಒಳಗೆ ಹೋಗು, ಸಂಜೆ ಹೊತ್ತಿಗೆ ಹಿಂದಿನ ಜಗಲೀಲಿ ನಿಲ್ಬೇಡಾಂತ. ನೀವು ಹೇಳಿ ಮಗು, ನಾನಿನ್ನು ಎಲ್ಲಿ ನಿಲ್ಬೇಕೂಂತ? ಮಲ್ಲಿಗೆ ಕೊಯ್ಯೂ ಬಾರ್ದು. ಬೆಳ್ದಿಂಗಳು ನೋಡ್ಲೂಬಾರ್ದು. ನಾನಿನ್ನೇನು ಮಾಡ್ಬೇಕು?'

ಆ ಕ್ಷಣ ನನ್ನ ಕಣ್ಣುಗಳು ತುಂಬಿದವು. 'ಪಾಪಜಳ್' ಕಾದಂಬರಿಯ ಕೊಸತ್ತಳಂತೆ ದೇವಕಿ ದುಃಖಿತೆ ಎಂದು ನನಗೆ ಅನ್ನಿಸಿತು. ನಾನಾಕೆಯ ಅಗಲವಾದ ದಡ್ಡುಗಟ್ಟಿದ ಅಂಗೈಯನ್ನು ಹಿಡಿದೆ. ನನಗೆ ಅಳು ತಡೆಯಲಾಗಲಿಲ್ಲ. ನನ್ನ ಬಿಕ್ಕಳಿಕೆ ಕೇಳಿ ಉಣ್ಣಿಮಾಯಿ ತಿರುಗಿ ನೋಡಿದಳು.

'ಇದೀಗ ಚೆನ್ನಾಯ್ತು. ಮಗೂನ್ನ ಅಳಿಸಿ ಬಿಟ್ರು ಅಮ್ಮೋರು' ಅವಳು ಹೇಳಿದಳು.

'ನಾಯೇನೂ ಮಾಡ್ಲಿಲ್ಲ' ದೇವಕಿ ಹೇಳಿದಳು.

ಅಜ್ಜಿ ಹಿಂದಿರುಗಿ ಬಂದು ನನ್ನನ್ನು ಸಮಾಧಾನ ಪಡಿಸಿದರು.

'ದೇವಕಿಗೆ ಏನೂ ಆಗ್ಲಿಲ್ಲ ಕಮಲಾ. ಅವ್ಳು ಸುಮ್ನೆ ಹಾಂಕಾರ ತೋರ್ಸಿದ್ದಲ್ವೆ? ಯಾರೊಬ್ಬರ ದುಃಖವನ್ನು ನೋಡ್ಲಿಕ್ಕೆ ಸಾಧ್ಯ ಇಲ್ದೇ ಹೋದ್ರೆ ನೀನು ಹೇಗೆ ಬದುಕ್ತೀಯಾ? ಅವಳ್ನ ಎತ್ತಿಕೊ ಉಣ್ಣಿಮಾಯೆ. ಬಿಸಿಲು ಜೋರಾಗೋದಕ್ಕೆ ಮೊದ್ಲು ನಾವು ಗುರುವಾಯೂರಿಗೆ ತಲುಪಬೇಡ್ವ?'

'ಈ ಹಾಂಕಾರ ಬಾಕಿದ್ದೋರತ್ರ ಸಾಲ್ದಾ ಅಮ್ಮೋರೆ? ಮಗೂನತ್ರ ಬೇಕಾಗಿತ್ತಾ?'

ಉಣ್ಣಿಮಾಯ ಕೇಳಿದ್ದು. ದೇವಕಿ ತನ್ನ ಮೂಗಿನ ಹೊಳ್ಳೆಗಳನ್ನು ಅಗಲಗೊಳಿಸಿದಳು. ಅವಳ ಕಣ್ಣುಗಳು ಕೆಂಪಾದದ್ದು ಕಂಡು ಬಂತು. ಅವಳು ಮತ್ತೊಂದು ತೆಂಗಿನ ಹೊಂಡಕ್ಕಿಳಿದು ಆ ಕ್ಷಣದಲ್ಲಿ ಕಣ್ಮರೆಯಾದಳು.

'ಮತ್ತೆಯೂ ಬಿದ್ದೇ ತೆಂಗಿನ ಹೊಂಡಕ್ಕೆ?' ಅಜ್ಜಿ ಕೇಳಿದರು.

'ಅಮ್ಮೋರು ಮೂತ್ರ ಮಾಡ್ಲಿಕ್ಕಿಳಿದದ್ದು. ನನ್‌ಗೆ ಶಬ್ದ ಕೇಳ್ತಿದೆ' ಉಣ್ಣಿಮಾಯ ಹೇಳಿದಳು.

ಅಂಬಾಳತ್ತಿನ ಕುಟುಂಬ ಅಂದು ವಿಭಜನೆಗೊಂಡಿರಲಿಲ್ಲ. ನಮ್ಮ ಅತ್ತೆಯ ಮೂವರು ಸೋದರರು ಮತ್ತು ಮೂವರು ಸೋದರಿಯರು ಆ ಮನೆಯಲ್ಲಿಯೇ ಇದ್ದರು. ಕೊನೆಯ ಸೋದರಿ- ಶಾರದಕ್ಕ ಎಂಬುದಾಗಿ ಕರೆಯಲ್ಪಡುತ್ತಿದ್ದ ಶಾರದಮ್ಮ ಅವರೂ ಅವರ ಗಂಡನೂ ಮಕ್ಕಳೂ ಒಂದು ವಾರದ ರಜೆಯಲ್ಲಿ ಊರಿಗೆ ಬಂದಿದ್ದ ಸಮಯದಲ್ಲಿಯೇ ಇರಬೇಕು, ಕೆಳಗೆ ಹೇಳಿದ ಎರಡು ಪದಗಳು ಇದ್ದಕ್ಕಿದ್ದಂತೆಯೆ ಒಂದು ದಿನ ಆ ವಾತಾವರಣದಲ್ಲಿ ಪ್ರತಿಧ್ವನಿಗೊಂಡದ್ದು.

'ಮುನ್ಸೀಫರು ಬರುತ್ತಾರೆ' ಮುನ್ಸೀಫರೂ ಹೆಂಡತಿಯೂ ಶಾರದಕ್ಕನ ಹಾಗೂ ಅವರ ಗಂಡನಾದ ಎಂಜಿನಿಯರ್ ಕುಮಾರಮೇನೋನ್‌ರ ಸ್ನೇಹಿತರಾಗಿದ್ದರು. ಕುಲೀನರು, ಸಂಸ್ಕಾರ ಉಳ್ಳವರು, ಶಾಸ್ತ್ರೀಯ ಸಂಗೀತದಲ್ಲಿ ಪರಿಣತಿ ಉಳ್ಳವರು. ಅದಕ್ಕೂ ಹೆಚ್ಚಾಗಿ ಹಣವಂತರು.

'ಮುನ್ಸೀಫು ಬರ್ತಾರೆ' ಮಾಲತಿ ಕುಟ್ಟಿ ನನ್ನಲ್ಲಿ ಹೇಳಿದಳು: 'ನಾಲ್ಕು ದಿವಸ ಅಂಭಾಳತ್ತಿನಲ್ಲೆ ಇರ್ತಾರಂತೆ. ಮಕ್ಳೂ ಬರ್ತಾರೆ. ಒಂದು ಮಗೂಗೆ ನಮ್ದೇ ಪ್ರಾಯಾಂತೆ. ಗಮ್ಮತ್ತು. ನಮ್ಗೆ ಆಡ್ಬೋದಲ್ವಾ?'

ಪಶ್ಚಿಮದ ಚಾವಡಿಯಿಂದ ಅತ್ತೆಯ ಹಿರಿಯ ಸಹೋದರಿ ಸಣ್ಣಕ್ಕ ಎಂದು ಕರೆಯಲ್ಪಡುವ ಪಾರುಕುಟ್ಟಿಯಮ್ಮ ತನ್ನ ಸೋದರ ಸೋದರಿಯರಿಗೂ ಮನೆಯಲ್ಲಿರುವ ಮಕ್ಕಳಿಗೂ ಕೆಲಸದವರಿಗೂ ಭಿಕ್ಷೆ ಬೇಡುವುದಕ್ಕೆ ಬರುವವರಿಗೂ, ದನಗಳಿಗೂ ಎಲ್ಲ ಕೇಳಲಿ ಎಂಬಂತೆ ಗಟ್ಟಿಯಾಗಿ ಕೂಡಿ ಹೇಳಿದಳು:

'ಮುನ್ಸೀಫ್ ಬರ್ತಿಯಾರೆ.'

ಮೀನಾಕ್ಷಿಯಕ್ಕನ ಮೇಲುಸ್ತುವಾರಿಯಲ್ಲಿ ಮುಖದ್ವಾರವನ್ನೂ ಚಾವಡಿಯನ್ನೂ ಬಚ್ಚಲು ಕೋಣೆಯನ್ನೂ ನೀರು ಹಾಕಿ ತೊಳೆಯುವ ಕೆಲಸ ಕೂಡಲೆ ಪ್ರಾರಂಭವಾಯಿತು. ಎಡ ಅಂಗೈಯನ್ನು ಅಂಡಿಗೆ ಆತುಕೊಟ್ಟು ಮರುಕೈಯಲ್ಲಿ ಕುತ್ತಿ ಹಿಡಿಸೂಡಿ ಹಿಡಿದು ಮರಿಯಾ ಸಣ್ಣ ಮುಗುಳ್ನಗೆಯೊಂದಿಗೆ ಅತ್ತ ಇತ್ತ ನಡೆದಳು. ಅಂದು ಅವರಿಗೆ ಇಪ್ಪತ್ತು ವಯಸ್ಸಿದ್ದಿರಬಹುದು. ದಪ್ಪನೆಯ ಶರೀರ. ಸ್ಪ್ರಿಂಗಿನ ಹಾಗೆ ಗುಂಗುರು ಕೂದಲು. ಓಂದೂಗಳ ರವಿಕೆಯನ್ನೂ ಕ್ರಿಶ್ಚಿಯನ್ನರ ಅದ್ದ ಪಂಚೆಯನ್ನೂ ಧರಿಸುತ್ತಿದ್ದಳು: ಇಟ್ಟಿಯಚ್ಚನ್‌ರ ಪತ್ನಿ ಮರಿಯ - ಮತ್ತೊಬ್ಬ ಮರಿಯ - ತೆಳ್ಳನೆಯ ದೇಹಪ್ರಕೃತಿಯವಳು. ಅವರು ಯಾವತ್ತೂ ಕೆಲಸ ಹೆಚ್ಚಾಯಿತೆಂಬ ಆಕ್ಷೇಪ ಹೇಳುತ್ತಿದ್ದವರು. ಅವರ ಕೈಯಲ್ಲಿ ಸೆಗಣಿ ಸಾರಿಸುವ ಚಟ್ಟಿಯೂ ಹಾಳೆಯ

ತುಂಡುಗಳೂ ಕಾಣಿಸಿದವು. ಅವರ ಗುಂಪಿನಲ್ಲಿ ದೊಡ್ಡರೋತು, ಚಿಕ್ಕರೋತು ಎಂಬುದಾಗಿ ಕರೆಯಲ್ಪಡುವ ಇಬ್ಬರು ಹೆಂಗಸರಿದ್ದರು. ಕೋಣೆಗಳನ್ನು ಶುಚಿಗೊಳಿಸುವುದರೆಡೆಗೆ ಸಣ್ಣ ಪುಟ್ಟ ಕಲಹಗಳೂ ಅಪಸ್ವರಗಳೂ ಕೇಳಿ ಬರುತ್ತಿದ್ದವು. ನೆಲ ಶುಚಿಗೊಳಿಸಿಯಾದ ಮೇಲೆ ಅಂಗಳದ ಹುಲ್ಲು ಕೀಳುವ ಸರಳ ಕೆಲಸ ಪ್ರಾರಂಭವಾಯಿತು. ಅದು ಕ್ರಿಶ್ಚಿಯನ್ ಹೆಂಗಸರ ಜವಾಬ್ದಾರಿಯಾಗಿತ್ತು. ಮತ್ತ ಅಂಬಾಳತ್ತಿನ ಮನೆಯ ಕೆಲಸದವರ ಸಮೂಹ ನೆರೆಕರೆಯವರ ಹತ್ತಿರ ತಲುಪಿತು. ನಾಲಪ್ಪಾಟ್ಟಿನ ಪೂರ್ವಚಾವಡಿಗೆ ಎದುರುಬದುರಾಗಿದ್ದ ಅವರೆಯ ಚಪ್ಪರದಿಂದ ಸಾಪಿರಗಟ್ಟಲೆ ಅವರೆ ಕೋಡುಗಳನ್ನವರು ಚಿವುಟಿ ತೆಗೆದರು. ಮಹಾಬಲಹುಳಿ ಮರ ಅಲುಗಾಡಿಸಿ ಹತ್ತು ಹನ್ನೆರಡು ಹುಳಿಗಳನ್ನು ಬೀಳಿಸಿದರು. ಉತ್ತರದ ಓತ್ತಿಲಿನಲ್ಲಿದ್ದ ಬೆಂಡೆ ತೋಟದಿಂದ ಇನ್ನೂ ಬೆಳೆದಿರದ ಬೆಂಡೆಕಾಯಿ ಕೊಯ್ದು ತೆಗೆದರು. ಹಾಗಲ ಚಪ್ಪರದಿಂದ ಹಾಗಲಕಾಯನ್ನೂ ತೆಂಗಿನ ಬದಿಯ ಚಪ್ಪರದಲ್ಲಿದ್ದ ಕುಂಬಳ ಕಾಯಿಯನ್ನೂ ಕಿತ್ತು ತೆಗೆದರು.

'ಆ ಮುಂಡಪ್ಪದ ಮಾವನ್ನು ಕೊಯ್ಬೇಡ. ಅದು ಮಕ್ಕಿಗೆ ತುಂಬ ಇಷ್ಟ.' ಮುತ್ತಜ್ಜಿ ಕೂಗಿ ಹೇಳಿದರು. ಇಟ್ಟಿಯಚ್ಚನೂ ಚಾಪ್ಪನ್‌ನಾಯರೂ ಅಚ್ಯುತನೂ ಮುಂಡಪ್ಪಮರವನ್ನು ನೋಡದೆ ಮುಂದೆ ಹೋಗುತ್ತಿದ್ದರು. ಮುತ್ತಜ್ಜಿಯ ಮಾತು ಕೇಳಿ ಅವರು ಹಿಂದಿರುಗಿ ನೋಡಿದರು. ಮುಂಡಪ್ಪಮರದಲ್ಲಿ ಕೈಯಳತೆಗೆ ಸಿಕ್ಕುವ ಬೆಳೆದು ನಿಂತ ಮಾವಿನ ಕಾಯಿಗಳನ್ನವರು ಕಂಡರು.

'ಮುನ್ಶೀಫಿಗೂ ಮಕ್ಕುಂಟಲ್ಲ. ಅವಕ್ಕೂ ಮಾವಿನ ಹಣ್ಣು ತಿನ್ನೋ ಆಸೆ ಇರ್ಲಿಕ್ಕಿಲ್ವೆ?' ಚಾಪ್ಪನ್ ನಾಯರ್ ಹೇಳಿದರು. ಮಾವಿನ ಮರಕ್ಕೆ ಅಚ್ಯುತನ್ ನಾಯರ್ ಹತ್ತಿದರು. ಒಂದು ಕೊಂಬೆ ತುಂಡಾಗಿ ಬಿತ್ತು. ಕುಕ್ಕೆ, ತೊಟ್ಟೆಗಳು ತುಂಬಿದವು. ಹಿಂದಿರುಗುವಾಗ ಗದ್ದೆಯಿಂದ ಸೌತೆಮಿಡಿಗಳನ್ನೂ ಮಾಂಬುಳ್ಳಿಕೃಷ್ಣನ ಅಂಗಳದಿಂದ ಕೆಂಪು ಕೀರೆಯನ್ನೂ ಕೊಯ್ಯುವುದಕ್ಕವರು ಮರೆಯಲಿಲ್ಲ.

'ಒಟ್ಟು ಎಷ್ಟು ಜನ ಬರ್ತಾರೆ?' ಅಜ್ಜಿ ಯಾರೊಂದಿಗೆ ಎಂದಿಲ್ಲದೆ ಕೇಳಿದರು.

ಯಾರೂ ಅದಕ್ಕೆ ಉತ್ತರ ಹೇಳಲಿಲ್ಲ. ಅಂಬಾಳತ್ತಿನ ಭತ್ತ ಕುಟ್ಟೋ ಮನೆಯಲ್ಲಿ ಅವಲಕ್ಕಿ ಕುಟ್ಟುತ್ತಿದ್ದಾರೆ ಎಂಬುದಾಗಿ ಉಣ್ಣಿಮಾಯ ಬಂದು ರಿಪೋರ್ಟ್ ಮಾಡಿದಳು.

'ಒಳ್ಳೆ ಕೆಂಪು ಅವಲಕ್ಕಿ.'

ಮಧ್ಯಾಹ್ನದ ಊಟ ಮುಗಿದು ಎಲ್ಲರೂ ನಿದ್ರಿಸುವ ಹೊತ್ತಿಗೆ ಅಂಬಾಳತ್ತಿನಿಂದ ಮತ್ತೊಬ್ಬ ವ್ಯಕ್ತಿ ಬಂದ. ಗೋಯಿಶ್ಕಾರ್ ನಾಚಿಕೊಂಡು ಕೆಳಹಾಕಿದ ಮುಖದೊಂದಿಗೆ ದಕ್ಷಿಣದ ಚಾವಡಿಯಲ್ಲಿ ನಿಂತು ಗಂಟಲಲುಗಿಸಿದ.

'ಏನು ಗೋಯಿಶ್ಕಾರೆ?'

'ಮುನ್ಶೀಫಿಗೆ ಎಲೆ ಹಾಕೋದು ಮೇಜಿನ ಮೇಲೆ. ಒಂದು ಮೇಜಿನ ಹೊದ್ಕೆ ಬೇಕು. ಕಲ್ಕತ್ತೇಂದ ತಂದ ಯಾವ್ದಾದ್ರೂ ಹೊದ್ಕೆ ಇದ್ರೆ ಕೊಡ್ಲಿಕ್ಕೇಳ್ಕಾರೆ.'

ಅದೇ ಹೊತ್ತಿಗೆ ಏದುಸಿರು ಬಿಡುತ್ತ ಬಂದ ಇನ್ನೊಬ್ಬ ದೂತ ಹೇಳಿದ:

'ಚಾಯಕಪ್ಪು ಬೇಕೂಂತೇಳಿದ್ರು. ಅಡೀಲಿಡ್ಲಿಕ್ಕೆ ಸಾಸುರೂ. ಮುಂಚೀಪಿಗೆ ಚಾಯು ಕುಡೀಲಿಕ್ಕೆ.'

ಅಜ್ಜಿ ತಬ್ಬಿಬ್ಬಾಗಿ ಪೂರ್ವದ ಕೋಣೆಗೆ ಓಡಿದರು. ಅಜ್ಜಿಯ ಕೆನ್ನೆಗಳು ಅದುರಿದುವು.

'ಕಪ್ಪಿನಲ್ಲೆಲ್ಲ ಧೂಳು ಕೂತಿದೆ. ವಿ.ಎಂ. ನಾಯರ್ ಬಂದಾಗ ಮಾತ್ರವೇ ಇಲ್ಲಿ ಅದನ್ನೆಲ್ಲ ಉಪಯೋಗಿಸೋದು. ಸೋಪು ಹಾಕಿ ತೊಳೀಲಿಕ್ಕೇಳ್ಬೇಕಾಯ್ತಾ?' ಅಜ್ಜಿ ಹೇಳಿದರು.

ಆರು ಕಪ್ಪು ಸಾಸರುಗಳನ್ನು ಅಜ್ಜಿ ರಪ್ಪಾಯಿಯ ಕೈಯಲ್ಲಿ ಕೊಟ್ಟರು. ಅಂಚಿನಲ್ಲಿ ಮಾತ್ರ ಸಪೂರವಾದ ಸ್ವರ್ಣ ರೇಖೆಯಿರುವ ಬಿಳಿಯ ಕಪ್ಪುಗಳವು. ಇಂಗ್ಲೆಂಡಿನಲ್ಲಿ ಸಿದ್ಧಗೊಂಡ ಚೈನಾಬೋರ್ನ್.

'ಜಾಗ್ರತೆ ಕೊಂಡು ಹೋಗು' ಅಜ್ಜಿ ರಪ್ಪಾಯಿಯನ್ನು ಎಚ್ಚರಿಸಿದರು. 'ಇದೆಲ್ಲ ತುಂಡಾದರೆ ಇನ್ನೀ ಊರ್ನಲ್ಲಿ ಕೊಳ್ಳಿಕ್ಕೆ ಸಿಗ್ಲಿಕ್ಕಿಲ್ಲ. ಗೊತ್ತಾಯ್ತಲ್ಲ' ನಮ್ಮ ಕೆಲಸದಾಕೆ ಕೂಗಿ ಹೇಳಿದಳು.

'ಓ ಮತ್ತೆ! ಚಿನ್ನದಲ್ಲಿ ಮಾಡಿದ ಕಪ್ಪಲ್ವೆ?' ರಪ್ಪಾಯಿ ಗೊಣಗಿದ. ಆತ ಅವೆಲ್ಲವನ್ನು ಆಲಸಿಯಂತೆ ಒಂದು ಗೋಣಿಯಲ್ಲಿ ಕಟ್ಟಿ ಹೆಗಲಮೇಲಿಟ್ಟು ನಡೆಯತೊಡಗಿದ.

ಅಜ್ಜಿ ಒಗೆದಿರಿಸಿದ್ದ ಒಂದು ಖಾದಿ ಮೇಜು ಹೊದಿಕೆಯನ್ನು ಮೇಲ್ಗಡೆಯಿಂದ ತೆಗೆದುಕೊಂಡು ಬಂದರು. ತೌಡು ಬಣ್ಣದ ಎಲೆಗಳೂ ಹೂಗಳೂ ತುಂಬಿದ ಬಟ್ಟೆ. ನಾಲ್ಕೂ ಮೂಲೆಗಳಲ್ಲಿ ಚಿಕ್ಕ ಚಿಕ್ಕ ಹೂಗಳು.

'ಇದು ಸಾಕಾ ಗೋಯಿಶ್ವಾರೆ?'

'ಸಾಕು, ಸಾಕು. ಧಾರಾಳ ಸಾಕು. ಬರುವ ವಾರ ಒಗ್ದು ತರ್ತೇನೆ, ಆಯ್ತಾ?'

'ಮುನ್ಸೀಫ್ ಅಲ್ಲಿ ಎಷ್ಟು ದಿವ್ಸ ಇರ್ತಾರೆ?' ಮುತ್ತಜ್ಜಿ ಕೇಳಿದರು.

'ಯಾರ್ಗೂ ಹೀಗೇಂತ ಗೊತ್ತಿಲ್ಲ. ಸಣ್ಣ ಮಗೂಗೆ ಗುರುವಾಯೂರ್ನಲ್ಲಿ ಅನ್ನ ಕೊಡ್ಲಿಕ್ಕುಂಟು. ಮತ್ತೊಂದು ವಾರ ನಿಂತಾರೋ ಏನೋ. ಕುಮಾರ ಮೆನೋನ್ರ ಗೆಳೇರಂತೆ.'

'ಅಡುಗೆಯೆಲ್ಲ ಯಾರು ಮಾಡ್ತಾರೆ?' ಮುತ್ತಜ್ಜಿ ಕೇಳಿದರು.

'ಹೊರ್ಗಿಂದ ಯಾರೂ ಇಲ್ಲ. ನಾವೆಲ್ಲ ಇದ್ದೇವಲ್ಲ?'

'ಮೀನು ಮಾಂಸ ತಿನ್ನೋದಿಲ್ಲಾಂತ ಕೇಳಿದೆ. ಆದಿನ್ನೂ ಸುಲಭಾಯ್ತು. ಹುಳಿ ಮೇಲೋಗರ ಮಾಡ್ಲಿಕ್ಕೇಳಿದ್ರು ಕೇಶೂ ಮೆನೋನ್. ಮುಲ್ಲಾತ್ತಿಂದ ಎಂಟು ಸೇರು ಹಾಲು ತಂದಿದ್ರು.'

'ಅಂಬಾಳತ್ತಿನಲ್ಲಿ ದನ ಕರ್ಯೋದಿಲ್ವಾ?'

'ಕರೀತದೆ. ಆದ್ರೆ ಮುನ್ಸೀಪು ಬರೋದಲ್ವೆ? ಎಲ್ಲದಕ್ಕಾಗ್ವಾಗ ಸಾಕಾಗ್ಲಿಕ್ಕಿಲ್ಲ. ಅದಕ್ಕೆ ಮುಲ್ಲಾತ್ತಿಂದ ರಾಮ ನಾಯರ್ ತಂದದ್ದು ಎಂಟು ಸೇರು ಹಾಲು. ತೊಂದ್ರೆಯಿಲ್ಲಾಯ್ತಾ. ಚೂರೂ ನೀರು ಸೇರಿಸ್ಲಿಲ್ಲ.'

'ರಾಮನ್ ನಾಯರ್ ಒಬ್ಬ ಸಾಧು ವ್ಯಕ್ತಿ' ಕೆಲಸದವಳು ಆಕಾಶ ನೋಡಿ ಹೇಳಿದಳು.

'ಹಾಗಾದ್ರೆ ನಾವ್ಹೋಗ್ಲಾ? ಗೋಯಿಶ್ಕಾರ್ ಉಟ್ಟಿದ್ದ ಮೈ ಒರಸುವ ಬಟ್ಟೆಯೊಳಗಿನಿಂದ ಕೌಪೀನದ ಬೆಳ್ಳಗಿನ ಬಾಲ ಒಂದು ವಿಜಯ ಪತಾಕೆಯೆಂಬಂತೆ ಹಾರುತ್ತಿದ್ದಂತೆಯೇ ಆತ ದಳಕ ಬಳಕ ನಡೆದು ಹೋದ. ಆತನ ಎರಡು ಪಾದದಲ್ಲೂ ಆಣೆಗಳು ಬೆಳೆದು ನಿಂತಿದ್ದುವು. ನೋವು ನುಂಗುತ್ತ ಬದುಕುವ ಬದುಕಾಗಿತ್ತು ಆತನದು.

'ಎಕ್ಕೆ ಹಾಲು ದಿವ್ಸಾಗ್ಲೂ ಹಚ್ಚಿದ್ರೆ ಸಾಕು. ಆಣೆ ಬಿಡಿ, ಅದ್ರ ಕಲೆ ಕೂಡ ಕಾಣ್ಲಿಕ್ಕಿಲ್ಲ' ಕೆಲಸದವಳು ಗೋಯಿಶ್ಕಾರ್‌ರು ಹೋಗುವುದನ್ನು ನೋಡುತ್ತ ಹೇಳಿದಳು.

ತೆಕ್ಕರು ಮನೆಯ ಕಲ್ಯಾಣಿಯಮ್ಮ ಸಂಜೆಗೆ ಮೊದಲೇ ನಾಲಪ್ಪಾಟ್ಟಿನ ತೆಂಕ ಮನೆಗೆ ಬಂದು ಸೇರಿದ್ದಳು. ಅವರ ರವಿಕೆ ಬೆವರಿನಲ್ಲಿ ಮುಳುಗಿ ಹೋಗಿತ್ತು.

'ಅಂಬಾಳತ್ತಿಗೆ ಕಜ್ಜಾಯ ಕಾವಲಿ ಬೇಕೂಂತ ಹೇಳಿದ್ದಕ್ಕೆ.'

'ಉಹ್ಞಂ. ಇನ್ನಿವತ್ತು ಅಪ್ಪ ಕಜ್ಜಾಯ ಮಾಡ್ತಾರಂತಾ?' ಮುತ್ತಜ್ಜಿ ಕೇಳಿದರು.

'ನಾಳೆ ಮುನ್‌ಸೀಫ್ ಬರೋದಲ್ವೇ? ಮಕ್ಕಿಗೆ ತಿನ್ಲಿಕ್ಕೇನಾದರೂ ಫಲಾರ ಮಾಡ್ಬೇಡ್ವೆ?'

'ಅವರು ಬರೋದ್ಯಾವಾಗ?' ಅಜ್ಜಿ ಕೇಳಿದ್ರು.

'ಯಾವಾಗಾಂತ ಅಲ್ಯಾರಿಗೂ ಸರೀ ಗೊತ್ತಿಲ್ಲ. ಇವತ್ರಾತ್ರಿ ಆಗ್ಬೇಕಿದ್ರೆ ಬಂದಾರೇನೋ. ಕಾರಲ್ಲಿ ಬರೋದಲ್ವ. ಮೂರು ಮಕ್ಳೂ. ಮಕ್ಕಳನ್ನು ನೋಡ್ಕೊಳ್ಳೋ ಮುದ್ಕೀನೂ ಬರ್ಬೋದು. ಅವ್ರು ಪಟ್ಟಾಂಬಿಯೋಳಂತೆ.'

ಅಂದು ಸೋಮವಾರ. ಸಂಜೆಗೆ ಟಪ್ಪಾಲು ಬಂದಾಗ ಕಾಗದ ಪತ್ರಗಳ ನಡುವೆ ಮಾತೃಭೂಮಿ ವಾರಪತ್ರಿಕೆಯೂ ಇತ್ತು. ಚಿಕ್ಕಮ್ಮ ಅದನ್ನು ಬಿಡಿಸಿ ಗಟ್ಟಿ ಓದತೊಡಗಿದರು. ಆಗಷ್ಟೆ ಕಾರಿನ ಸದ್ದು ಗದ್ದಲ ಕೇಳಿದ್ದು.

'ಮುನ್ಸೀಫ್ ಬಂದರು' ನಾನು ಸಂತೋಷದಿಂದ ಕೂಗಿ ಹೇಳಿದೆ. ಮೆಟ್ಟಲ ಬಳಿ ಹೋಗಿ ನಿಂತರೆ ಕಾರಿನೊಳಗಿರುವವರನ್ನೆಲ್ಲ ಚೆನ್ನಾಗಿ ನೋಡಬಹುದೆಂದು ಭಾವಿಸಿ ನಾನು ಮುಖದ್ವಾರಕ್ಕೆ ಓಡಿದೆ.

'ಕಮಲೆ, ವಾಪಸ್ಸು ಬಾ' ಅಜ್ಜಿ ಕೋಪದಿಂದ ಕೂಗಿ ಹೇಳಿದರು. ನಾನು ಹಿಂದಿರುಗಿದೆ. ಅಷ್ಟರಲ್ಲಿ ಕಾರು ಅಂಬಾಳತ್ತಿನ ಮನೆಗೆ ತಲುಪಿಯಾಗಿತ್ತು.

'ಒಂದುಮಗೂನ್ನ ನಾನ್ನೋಡಿದೆ' ನಾನು ಹೇಳಿದೆ.

'ಈ ಕತ್ಲೇಲಿ ಅದ್ಹೇಗೆ ಕಾರೊಳಗಿರೋರನ್ನು ಕಾಣ್ಲಿಕ್ಕೆ ಸಾಧ್ಯ' ಅಜ್ಜಿ ಕೇಳಿದರು.

'ಕಾರ್ನಲ್ಲಿ ಯಾರು?' ಮಾವ ಅಮ್ಮನಲ್ಲಿ ಕೇಳಿದರು.

'ಮುನ್ಸಿಫರು. ಕುಮಾರ ಮೇನೋನ್ನ ಪರಿಚಯದೋರು. ಹೆಂಡ್ತಿ ಮಕ್ಕೆಲ್ಲ ಬರ್ತಾರೆ. ಅಂಬಾಳತ್ತಿನಲ್ಲಿ ಒಂದ್ವಾರ ಇರ್ತಾರಂತೆ.' ಮಾಲತಿಕುಟ್ಟಿಯ ಬಗ್ಗೆ ನನಗೆ ಅಸೂಯೆ ಅನ್ನಿಸಿತು. ರಾತ್ರಿಯಾಗುವವರೆಗೆ ಮುನ್ಸೀಫರ ಮಕ್ಕಳ ಜೊತೆ ಆಟ ಆಡಬಹುದಲ್ಲ. ಒಂದು ವೇಳೆ, ನನ್ನ ಬಗ್ಗೆಯಿದ್ದ ಸ್ನೇಹ ಈ ಹೊಸ ಗೆಳೆತನ ನಿಮಿತ್ತವಾಗಿ ಕಮರಿಹೋಗಬಹುದು.

'ನಾನು ಮುನ್ಸೀಫನ್ನು ನೋಡ್ಲಿಕ್ಕೆ ಹೋಗೋದ್ಯಾವಾಗ ?' ನಾನು ಅಜ್ಜಿಯನ್ನು ಕೇಳಿದೆ.

'ನೀನು ಮುನ್ಸೀಫನ್ನು ನೋಡ್ಲಿಕ್ಕೆ ಹೋಗ್ಬೇಡ. ಅವರು ಹಿಂದಿರುಗಿ ಹೋಗೋತನಕ ನೀನು ಅಂಬಾಳತ್ತಿಗೆ ಆಡ್ಲಿಕ್ಕೆ ಹೋಗ್ಬೇಡ.'

'ನಂಗೆ ಆ ಮಕ್ಕನ್ನು ನೋಡ್ಬೇಕು.'

'ಬೇಡ.'

'ನಾ ಹೋಗ್ತೇನೆ.'

'ಅಮ್ಮಿ ಮುನ್ಸೀಫನ್ನು ನೋಡ್ಲಿಕ್ಕೆ ಹೋಗ್ತೇನೆಂತ ಹಠ ಹಿಡೀತಾಳೆ' ಅಣ್ಣ ಹೇಳಿದ.

'ಯಾವ ಮುನ್ಸೀಫನ್ನು ನೋಡ್ಲಿಕ್ಕೂ ಅವಳು ಹೋಗೋದಿಲ್ಲ. ಅವಳು ಇಲ್ಲೇ ಆಟ ಆಡ್ತಿರ್ತಾಳೆ. ಆ ಮಕ್ಕು ಇಲ್ಲಿಗೆ ಬಂದ್ರೆ ಆಡ್ಲಿ. ಅಲ್ದೆ ಅಲ್ಲಿ ಹೋಗೋದು ಸರಿಯಲ್ಲ' ಅಜ್ಜಿ ಹೇಳಿದರು.

'ಅಂಬಾಳತ್ತಿನೋರನ್ನು ಕಾಣ್ಲಿಕ್ಕಲ್ವೆ ಮುನ್ಸೀಪು ಬಂದಿರೋದು ? ಕಮಲೇನ್ನು ನೋಡ್ಲಿಕ್ಕಲ್ವಲ್ಲಾ ?' ಮುತ್ತಜ್ಜಿ ಹೇಳಿದರು. ಎಲ್ಲರೂ ನನ್ನನ್ನು ನೋಡಿ ಜೋರಾಗಿ ನಕ್ಕರು.

ಮಂಗಳವಾರ ಅತಿ ಮುಂಜಾನೆ ಕಾರಿನ ಶಬ್ದ ಕೇಳಿಯೇ ನಾನು ಎಚ್ಚತ್ತದ್ದು. ಮುನ್ಸೀಫೂ ಕುಂಟುಂಬದವರೂ ಗುರುವಾಯೂರಿಗೆ ಹೋಗುತ್ತಿರಬೇಕೆಂದು ಮುತ್ತಜ್ಜಿ ಹೇಳಿದರು. ಕೆಲಸದವಳು ಬೇಲಿ ಬದಿ ನಿಂತುಕೊಂಡು ಕಾರಿನಲ್ಲಿದ್ದವರನ್ನು ಕಣ್ಣು ಬಿಟ್ಟು ನೋಡಿದಳು.

ಕಾರು ಹೋದನಂತರ ಅವಳು ಹೇಳಿದಳು:

'ಆ ಮಕ್ಕಳ ತಾಯಿ ನೋಡ್ಲಿಕ್ಕೆ ತುಂಬಾ ಚಂದಯಿದ್ದಾರೆ. ಬೆಳ್ಳಗೆ ದಪ್ಪಕ್ಕೆ. ಕುತ್ತಿಗೇಲೊಂದು ಮಾವಿನ್ಕಾಯಿ ಸರ. ಹತ್ತು ಪವನಿರ್ಬೋದು. ಹಣೆಯಲ್ಲಿ ಕೆಂಪು ಕುಂಕುಮದ ಬೊಟ್ಟು. ನನ್ನ ಮುಖವನ್ನೇ ನೋಡ್ತಿದ್ರು'.

'ಮುನ್ಸೀಫರೋ ? ಅವ್ರೂ ನೋಡಿದ್ರಾ ?' ನಾನು ಕೇಳಿದೆ.

'ಸಪೂರಕ್ಕೊಬ್ಬ ಮನ್ಶ ಮುಂದಿನ ಸೀಟ್ನಲ್ಲಿ ಕೂತ್ಕೊಂಡಿದ್ರು. ಅದೇ ಇರ್ಬೇಕು ಮುನ್ಸೀಪ್ಪು. ನೋಡಿದ್ರೆ ಅರ್ಧ ಜೀವ ಇದ್ದಾಗಿತ್ತು.'

ಅರ್ಧ ಗಂಟೆಯೊಳಗೆ ಕಜ್ಜಾಯ ಪಾತ್ರ ಹಿಂದಿರುಗಿಬಂತು.

'ಅವರೆಲ್ಲ ಹೋದ್ರು' ಮೀನಾಕ್ಷಿಯಕ್ಕ ಹೇಳಿದರು.

'ಇನ್ನು ಬರ್ಲಿಕ್ಕಿಲ್ವ ?' ಕೆಲಸದವಳು ಕೇಳಿದಳು.

'ಇನ್ನು ಬರ್ಲಿಕ್ಕಿಲ್ಲ. ಅಪ್ರಿಗೆ ರಜೆಯಿಲ್ಲಂತೆ.'

'ಅಯ್ಯೋ ! ನಂಗಿನ್ನವ್ರನ್ನು ಕಾಣ್ಲಿಕ್ಕೆ ಆಗ್ಲಿಕ್ಕಿಲ್ಲಲ್ಲಾ' ನಾನು ಗದ್ಗದಿಸುತ್ತ ಹೇಳಿದೆ.

'ನಿಂಗೆ ಹುಚ್ಚು' ಅಜ್ಜಿ ನಗುತ್ತ ಹೇಳಿದರು.

ಅಂದು ಪುನ್ನಯೂರ್‌ಕುಳದ ಸಾಂಸ್ಕೃತಿಕ ಸಾಮ್ರಾಜ್ಯದ ಚಕ್ರವರ್ತಿನಿ ಕಂಡಿತ ವಾಗಿಯೂ ಪಳಿಕೊಟ್ಟೆಯ ಕಾರ್ತ್ಯಾಯಿನಿ ಟೀಚರಾಗಿದ್ದರು. ಎಂ.ಟಿ.

ವಾಸುದೇವನ್ ನಾಯರ್ ಎಂಬುದಾಗಿ ಆಮೇಲೆ ಪ್ರಸಿದ್ಧರಾದ ವಾಸು ತನ್ನಮ್ಮನ ಮೊಲೆ ಕುಡಿಯುತ್ತಿದ್ದ ಕಾಲ.

ಚಕ್ರವರ್ತಿನಿಯಾಗಿದ್ದ ಟೀಚರ್ ಮೂರನೆಯ ಕ್ಲಾಸಿಗೆ ಕಲಿಸುತ್ತಿದ್ದರು.

ಆದರೆ, ಎಲ್ಲಾ ಕ್ಲಾಸಿನ ಹುಡುಗಿಯರೂ ಕೈತಟ್ಟಿ ಆಟದಲ್ಲೂ ಕೋಲಾಟದಲ್ಲೂ ಅವರ ಶಿಷ್ಯೆಯರಾಗಿದ್ದರು. ರಾಮವರ್ಮ ರಾಜಾ ಎಲಿಮೆಂಟರಿ ಶಾಲೆಯ ಉತ್ತರದ ಅಂಗಳದಲ್ಲಿ ಮಕ್ಕಳನ್ನು ಸುತ್ತಲೂ ನಿಲ್ಲಿಸಿ ಟೀಚರ್ ಗಟ್ಟಿಯಾಗಿ ಹಾಡಿದರು:

'ಬಾಲಕೃಷ್ಣನ್ ಚೆಯ್ದ ಲೀಲೆಯ ಪಾರಡಿ ಸಖೀ
ಪಾರಡೀ ಸಖೀ ಅಂದ ಕೂರಡಿ ಸಖೀ'

ಹುಡುಗಿಯರು ಮಧುರ ಕಂಠದಲ್ಲಿ ಜೊತೆಗೂಡಿ ಹಾಡಿದರು. ಎರಡನೆಯ ಸಾಲಿನ ಅರ್ಥ ನಿಗೂಢವಾಗಿತ್ತು.

ಹಾಡು ಕೇಳಿ ಶಾಲೆಯೂ ಪರಿಸರವೂ ನಿಬ್ಬೆರಗಾಯಿತು. ಲೆಕ್ಕ ಕಲಿಸಿಕೊಡುತ್ತಿದ್ದ ಹೆಡ್‌ಮಾಸ್ಟರ್ ಚಾಮಿ ಅಯ್ಯರೂ ಇಂಗ್ಲೀಷ್ ಕಲಿಸುತ್ತಿದ್ದ ಎಲಚ್ಚಾರ್ ಟೀಚರೂ ಭೂಶಾಸ್ತ್ರ ಕಲಿಸುತ್ತಿದ್ದ ತಾಚ್ಚು ಮಾಸ್ಟರೂ ಚರಿತ್ರೆ ಕಲಿಸುತ್ತಿದ್ದ ಸುಕುಮಾರನ್ ಮಾಸ್ಟರೂ ಮಲಯಾಳ ಕಲಿಸುತ್ತಿದ್ದ ನಂಬಿಡಿ ಮಾಸ್ಟರೂ ನೇಯ್ಗೆ ಕಲಿಸುತ್ತಿದ್ದ ಪೀಟರ್ ಮಾಸ್ಟರೂ ಒಮ್ಮೆಲೆ ತಟಸ್ಥರಾದರು. 'ಪಾರಡೀ ಸಖೀ ಅಂದ ಕೂರಡಿ ಸಖೀ' ಎಂಬ ಸಾಲು ಅವರನ್ನೂ ಚಿಂತೆಯ ಗೊಂದಲಕ್ಕೆ ಅದ್ದಿತು. ಕಾರ್ತ್ಯಾಯಿನಿ ಟೀಚರ ಸುತ್ತ ಯಾವತ್ತೂ ಹೊಗಳುಭಟ್ಟರಿದ್ದರು. ಬಾಕಿಯಿದ್ದವರ ಅನೈತಿಕ ಜೀವನ ರೀತಿಗಳ ಬಗ್ಗೆ ಚರ್ಚೆ ಮಾಡುವುದಕ್ಕೆ ಉತ್ಸಾಹ ತೋರುವ ಹೆಂಗಳೆಯರೂ. ಧರ್ಮ ದ್ವೇಷದ ಒಂದು ಸಂಕ್ರಮಣ ಕಾಲವಾಗಿತ್ತದು. ಟೀಚರ್ ಎಲ್ಲಾ ನೀತಿ ಮೇಳಗಳ ಶಾಶ್ವತ ಸದಸ್ಯೆಯಾಗಿದ್ದರು. ಟೀಚರ್ ಬೊಟ್ಟ ಸೀರೆಗಳನ್ನು ಉಡುತ್ತಿದ್ದರು. ಎಣ್ಣೆ ಹಾಕಿದ ಗುಂಗುರು ಕೂದಲನ್ನು ಒಂದು ಹಗ್ಗದಿಂದ ಹೇಗೋ ಎಂಬಂತೆ ಕಟ್ಟಿ, ಕಣ್ಣಿಗೆ ಕಾಡಿಗೆ ಹಚ್ಚಿ ರೋಸ್ ಬಣ್ಣದ ಕುಂಕುಮದ ಬೊಟ್ಟಿಟ್ಟು ವೀಳ್ಯ ಹಾಕಿ ಕೆಂಪಾದ ಹಲ್ಲುಗಳನ್ನು ಎಡೆಗೆಡೆಗೆ ಮನಸ್ಸಿಲ್ಲದ ಮನಸ್ಸಿನಿಂದ ತೋರಗೊಡುತ್ತ ಟೀಚರ್ ಗಜಗಾಂಭೀರ್ಯದಿಂದ ನಡೆಯುತ್ತಿದ್ದರು. ಅಸಾಮಾನ್ಯವಾದ ಗತ್ತು ತಲೆ ತುಂಬ. ವಾರ್ಷಿಕೋತ್ಸವಗಳಿಗೆಲ್ಲ ಟೀಚರ್ ತನ್ನ ಮನೋಧರ್ಮ ಬಳಸಿ ಹೊಸ ಆಯಾಮ ನೀಡುತ್ತಿದ್ದರು. ಹಾಡುಗಳಿಗೆ ನೃತ್ಯವನ್ನಳವಡಿಸುವಾಗ ಅತ್ಯಧಿಕ ಗಮನ ಕೊಡುತ್ತಿದ್ದರು. ಅಂಥ ಕಾರ್ಯಕ್ರಮಗಳು ಚಪ್ಪಾಳೆ ಗಿಟ್ಟಿಸುತ್ತಿದ್ದವು. ಒಂದು ವಾರ್ಷಿಕೋತ್ಸವದ ಪ್ರಾರಂಭದಲ್ಲಿ ಟೀಚರ್ ಕಲಿಸಿಕೊಟ್ಟ ಹಾಡು ಹಾಡುತ್ತ ಕೆಂಪು ಬಟ್ಟೆ ಧರಿಸಿದವಳೊಬ್ಬಳು ಮುಖಕ್ಕೆ ಪೌಡರ್ ಬಳಿದುಕೊಂಡು ವೇದಿಕೆಯೇರಿದಳು.

'ವಂದನೀಯರಾದಧ್ಯಕ್ಷರಿಗೂ
ಇಂದಿಲ್ಲಿ ನೆರೆದೆಲ್ಲರಿಗೂ'

ನಮಸ್ಕಾರ ಹೇಳುತ್ತ ಆ ಹುಡುಗಿ ನರ್ತಿಸಿದ್ದಳು. ಕರ್ಟನ್‌ನ ಹಿಂದೆ ನಿಂತು ಆತಂಕದೊಂದಿಗೆ ತಲೆ ತೂರುತ್ತ ಟೀಚರ್ ಆ ನರ್ತನದ ಮೇಲ್ನೋಟ ನೋಡುತ್ತಿದ್ದರು.

ಯಾವತ್ತಾದರೊಮ್ಮೆ ಮುಖಕ್ಕೆ ಪೌಡರ್ ಬಳಿದು ಆ ರೀತಿಯ ಸಭಾವಂದನೆ

ಮಾಡಬೇಕೆಂಬುದಾಗಿ ನಾನೂ ಬಯಸಿದ್ದೆ. ಟೀಚರ ಕೃಪೆಯಿದ್ದರೆ ನಾನೂ ಓರ್ವ ಕಲಾವಿದೆಯಾಗಿ ಮಾರ್ಪಾಟುಗೊಳ್ಳುತ್ತಿದ್ದೆ ಎಂಬ ಭರವಸೆ ನನಗಿತ್ತು. ಸಾಂಸ್ಕೃತಿಕ ಕಾರ್ಯಕ್ರಮಗಳ ಬಗ್ಗೆ ಮಾವನಿಗೆ ವಿವರಿಸಿದ ಬಳಿಕ ಅವರೆಂದರು:

'ಆ ಕವಿತೆಯನ್ನು ಇನ್ನೊಮ್ಮೆ ಹಾಡು ನೋಡೋಣ.'

'ಬಾಲಕೃಷ್ಣನ್ ಚೆಯ್ದು ಲೀಲೆಯೆ ಪಾರಡೀ ಸಖೀ
ಪಾರಡಿ ಸಖೀ ಅಂದ ಕೂರಡಿ ಸಖೀ'

'ಛೆ, ಗಲೀಜು, ಗಲೀಜು. ಹೀಗಿರುವ ಅಸಂಬದ್ಧ ಹಾಡುಗಳನ್ನು ಮಕ್ಕಿಂದ ಹಾಡಿಸ್ಬಾರ್ದೂಂತ ಚಾಮಿ ಅಯ್ಯರತ್ರ ಹೇಳು.'

'ಅಯ್ಯೊ ಟೀಚರು ನಂಗೆ ಬಡ್ದಾರು.'

'ಆ ಏಳಿಕೊಟ್ಟೆಯ ಕಾರ್ತ್ಯಾಯಿನಿಯಾ? ಅಮ್ಮಿಯನ್ನು ಹೊಡೀತಾಳಾ? ನಾನದನ್ನೊಂದು ನೋಡಿಬಿಡ್ತೇನೆ.'

ಆ ಬಳಿಕ ಕಾರ್ತ್ಯಾಯಿನಿ ಟೀಚರ್ ಪರಿವಾರ ಸಮೇತ ಗೇಟಿನ ಆಚೆಯಿರುವ ಮಾರ್ಗದಲ್ಲಿ ಹೋಗುವಾಗಲೆಲ್ಲ ನಾನು ಹೆದರಿ ತೆಂಕ ಚಾವಡಿಯಲ್ಲಿ ಅಡಗುತ್ತಿದ್ದೆ. ಮಾವ ಅವರನ್ನು ಒಳಗೆ ಕರೆದು ಹಾಡಿನ ಬಗ್ಗೆ ಮಾತನಾಡಿದರೆ ನಾನವರ ಶತ್ರುವಾಗಿ ಮಾರ್ಪಟ್ಟೇನೆಂದು ಹೆದರಿದ್ದೆ. ಆದರೆ, ಒಮ್ಮೆಯೂ ಮಾವ ಅವರನ್ನು ಒಳಗೆ ಕರೆಯಲಿಲ್ಲ. ವಾರ್ಷಿಕೋತ್ಸವದಲ್ಲಿ ಅಂಥ ತಮಿಳು ಮಿಶ್ರಿತ ಮಲಯಾಳ ಕವಿತೆಗಳನ್ನು ಹಾಡುವುದು ಸರಿಯಲ್ಲವೆಂದು ಮಾವ ಹೆಡ್‌ಮಾಸ್ಟರಿಗೆ ಹೇಳಿದರು.

'ತಮಿಳಾಗಿದ್ದರೆ ಪೂರ್ತಿ ತಮಿಳು, ಮಲಯಾಳವಾಗಿದ್ದರೆ ಶುದ್ಧ ಮಲಯಾಳ. ಒಟ್ಟು ಸೇರಿಸಿ ಕಲಸುಮೇಲೋಗರ ಮಾಡಕೂಡದು.'

ಅಲ್ಲಿಂದ ಮೊದಲ್ಗೊಂಡು ವಲ್ಲತ್ತೋಳ್‌ರ, ಆಶಾನ್‌ರ, ಚೆಂಗಂಬುಳೆಯವರ ಹಾಡುಗಳನ್ನು ಪುನ್ನಯೂರ್‌ಕುಳದ ಮಕ್ಕಳು ಹಾಡತೊಡಗಿದರು. ಒಂದು ಸಾಂಸ್ಕೃತಿಕ ಪರಿವರ್ತನೆ ಅಂದು ಆ ಗ್ರಾಮದಲ್ಲಿ ಪ್ರಾರಂಭಗೊಂಡಿತು. ಆ ಸಂದರ್ಭದಲ್ಲೆ ಓಂ ಪರಬ್ರಹ್ಮೋದಯ ನಾಟಕ ಸಮಿತಿಯ 'ಯಾಚಕಿ' ಎಂಬ ನಾಟಕ ಪುನ್ನಯೂರ್‌ಕುಳದಲ್ಲಿ ಪ್ರದರ್ಶಿಸಲ್ಪಟ್ಟದ್ದು, ಶಾಲೆಯ ಉತ್ತರ ದಿಕ್ಕಿನಲ್ಲಿ ಖಾಲಿ ಬಿದ್ದಿದ್ದ ಅಂಬಾಳತ್ತಿನವರ ಒಂದು ಹಿತ್ತಿಲಿನಲ್ಲಿ. ಒಂದು ತಾತ್ಕಾಲಿಕ ಸ್ಟೇಜು ಸಿದ್ಧಗೊಂಡಿತು. ನಾಟಕ ಪ್ರದರ್ಶನದ ಮೊದಲ ದಿವಸ ಆ ಹಿತ್ತಿಲಿನಲ್ಲಿ ವ್ಯಾಪಾರಿಗಳ ಬೆಂಚುಗಳೂ ಪ್ರತ್ಯಕ್ಷವಾದವು. ನೆಲಕಡಲೆ, ಮೈಸೂರು ಬೋಂಡ, ಹಲ್ವ, ಬಾಳೆ ಹಣ್ಣು, ಬಣ್ಣ ಮಿಶ್ರಿತ ಶರಬತ್ತು ಮೊದಲಾದವುಗಳು ಕಾಣಸಿಕೊಂಡವು. ಪ್ರಥಮ ದರ್ಜೆಗೆ ಅಂದಿನ ದರ ಒಂದು ರೂಪ್ಯಾ. ಅಂಥ ಒಂದು ಸೀಟಿನಲ್ಲಿ ನಾನು, ಅಣ್ಣ ಅಮ್ಮಂದಿರ ಮಧ್ಯದ ಸೀಟಿನಲ್ಲಿ ತಲ್ಲಣಗೊಳ್ಳುವ ಹೃದಯದೊಂದಿಗೆ ಕುಳಿತೆ, ಕರ್ಟನ್ ಮೇಲೇಳುವುದನ್ನು ಕಾದು.

ಮೊದಲಿಗೆ, ಒಂದು ಹಾಡು. 'ಓಂ ಪರಬ್ರಹ್ಮೋದಯ ನಾಟಕ ಸಮಿತಿ.' ಹಾ, ಎಷ್ಟೊಂದು ಮನೋಹರವಾದ ಹೆಸರು. ಆ ಹೆಸರೇ ಒಂದು ಹಾಡಾಗಿತ್ತು. ದೇವರ ಸ್ತುತಿಯ ಬಳಿಕ ಪರದೆ ಮೇಲೇರಿತು.

ಮುಖಕ್ಕೆ ಬಿಳಿಯ ಬಣ್ಣವನ್ನು ಹಚ್ಚಿ, ಕೆನ್ನೆಗೆ ಕೆಂಪು ಬಳಿದು, ಸೊಂಟಕ್ಕೆ ಹಳೆ

ಬಟ್ಟೆಗಳನ್ನು ಸುತ್ತಿಕೊಂಡು ಗಡ್ಡಧಾರಿಯಾದ ಭಿಕ್ಷುಕನೊಬ್ಬ ಪ್ರತ್ಯಕ್ಷನಾದ. ಜೊತೆಗೆ ಓರ್ವ ಹುಡುಗಿಯೂ. ಆತ ನಮ್ಮನ್ನು ನೋಡುತ್ತ ದಯನೀಯ ಸ್ವರದಲ್ಲಿ ಹಾಡಿದ.

'ಭಿಕ್ಷುಕರಲ್ಲೇ ಭಿಕ್ಷುಕರಾದ ಭೀಕ್ಷುಕರು ನಾವು
ಓ, ಭಿಕ್ಷುಕರಲ್ಲೇ ಭಿಕ್ಷುಕರಾದ ಭಿಕ್ಷುಕರು ನಾವು'

ನಾನು ಬಿಕ್ಕಿ ಬಿಕ್ಕಿ ಅಳತೊಡಗಿದೆ.

ನಾಟಕವಲ್ವಾ ? ಅದಾಗ್ಲೇ ಅಳೋದಕ್ಕೂ ಶುರುಮಾಡಿದ್ರೆ!

'ಎಂಥ ಕಮಲಾ ಇಂದು ?' ಅಜ್ಜಿ ಗೊಣಗಿದರು.

'ಅಮ್ಮಿಯನ್ನು ನಾಟಕಕ್ಕೆ ಕರ್ಕೊಂಡು ಬರ್ಬಾರ್ದಾಗಿತ್ತು' ಅಣ್ಣ ಹೇಳಿದ. ನಾನು ಫ್ರಾಕಿನ ತುದಿಯಿಂದ ಕಣ್ಣೊರಸಿದೆ. ಪ್ರೋತ್ಸಾಹ ಸಿಕ್ಕಿದ ಹಾಗನಿಸಿ ಭಿಕ್ಷುಕ ತನ್ನ ಬದುಕಿನ ಕಥೆಯನ್ನು ಹೇಳತೊಡಗಿದ. ತನ್ನ ಮಗಳಿಗೆ ತಾನಲ್ಲದೆ ಈ ಲೋಕದಲ್ಲಿ ಮತ್ಯಾರೂ ಆಶ್ರಯದಾತರಿಲ್ಲ ಎಂದು ಆತ ಹೇಳಿದ. ಹುಡುಗಿ ರೆಪ್ಪೆ ಮುಚ್ಚದೆ ನಮ್ಮನ್ನೇ ನೋಡಿದಳು. ಅವಳ ಅಂಗಿಯ ಅಂಚು ಹರಿಹಂಚಾಗಿದ್ದುದು ಕಂಡು ಬಂತು. ಆದರೆ ಅವಳ ತುಟಿಗೆ ಕೆಂಪು ಲಿಪ್‌ಸ್ಟಿಕ್ ಬಳಿಯಲಾಗಿತ್ತು. ಮುಖದಲ್ಲಿ ಪೌಡರೂ.

ಒಂದು ಹುಡುಗ ಎಳ್ಳುಂಡೆ ಮಾರಲಿಕ್ಕೆಂದು ನಮ್ಮ ಬಳಿಗೆ ಬಂದ. ನನಗದನ್ನು ತಿನ್ನುವ ಆಸೆಯಾಯಿತು.

'ಛೆ, ಇದೆಲ್ಲ ತಕ್ಕೊಂಡು ತಿನ್ಲಿಕ್ಕೆ ನಿನಗೆ ತೋರ್ತದಲ್ಲ? ಆಶ್ಚರ್ಯವೆ' ಅಜ್ಜಿ ಅಸಮಾಧಾನದೊಂದಿಗೆ ನುಡಿದರು: 'ನಾಳೆ ನಾವು ಎಳ್ಳುಂಡೆ ಮಾಡುವ, ಆಯ್ತಲ್ಲ ?'

ನಾನು ತಲೆ ಅಲುಗಿಸಿದೆ. ಅಜ್ಜಿಗೆ ನಾಟಕ ನೋಡುವುದಕ್ಕಿಂದಲೂ ತನ್ನ ಸುತ್ತ ಕುಳಿತ ಪ್ರೇಕ್ಷಕರಲ್ಲಿ ಪರಿಚಿತರಿದ್ದರೆ ನೋಡಿ, ನಗುವುದರಲ್ಲಿ ಹೆಚ್ಚು ಆಸಕ್ತಿ ಎಲಿಯಜಾಟ್ಟಿನ ತಂಬುರಾಟ್ಟಿಯವರೊಂದಿಗೂ ಪಾಲಿಶ್ಶೇರಿ ಅಜ್ಜಿಯೊಂದಿಗೂ ಕೋಲಿಯತ್ತಿನ ಲಕ್ಷ್ಮಿಕುಟ್ಟಿಯಮ್ಮೆಯೊಂದಿಗೂ ಅಜ್ಜಿ ತನ್ನ ಸಂತೋಷವನ್ನು ಮುಗುಳ್ನಗೆಯಿಂದ ವ್ಯಕ್ತ ಪಡಿಸಿದರು.

'ಸರಿಯಾಗಿ ಒಂದು ಮದ್ವೆಗೆ ಹೋದ ಹಾಗೆ. ಅಲ್ವೆ ಕಮ್ಲಾ. ಎಲ್ರನ್ನೂ ಕಾಣ್ಲಿಕ್ಕಾಯ್ತು.'

ನಿಜವೆಂದರೆ ನನ್ನಣ್ಣ ಮಾತ್ರವೆ ನಾಟಕ ನೋಡಿ ಕುಳಿತುಕೊಂಡದ್ದು. ಮುಕ್ಕಾಲು ಭಾಗ ಪ್ರೇಕ್ಷಕರೂ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ನಡು ನಡುವೆ ಅಪ್ಪುಣ್ಣೀ, ಸುಶೀಲೇ, ಮಣೀ ಮುಂತಾಗಿ ಕರೆಯುತ್ತ ಕೆಲವು ಹೆಂಗಸರು ಎದ್ದು ನಡೆದಾಡುತ್ತಿದ್ದರು. ಕಾತ್ಯಾಯಿನಿ ಟೀಚರೂ ಒಂದು ರೂಪ್ಯಾ ಟಿಕೇಟಿನ ಸಾಲಿನಲ್ಲೇ ಕುಳಿತಿದ್ದರು. ಬರಿಯ ಹ್ಯೊಯ್ಗೆಯಲ್ಲಿ ಕುಳಿತಿದ್ದವರು ನೆಲದ ಟಿಕೇಟಿನವರು. ಅವರಲ್ಲಿ ಕೆಲವರು ಮಣ್ಣಿಗೆ ಆತು ಮಲಗಿ ನಿದ್ರಿಸುತ್ತಿದ್ದರು. ಸ್ಟೇಜಿನಲ್ಲಿ ಹಾಡುಗಾರಿಕೆ ಪ್ರಾರಂಭವಾದಾಗ ಮಾತ್ರ ಮಲಗಿದ್ದವರು ದಬಕ್ಕನೆ ಎಚ್ಚತ್ತು ತಪ್ಪಿ ತಡವಿ ಎದ್ದು ಕುಳಿತುಕೊಳ್ಳುತ್ತಿದ್ದರು. ತಲೆ ತಿರುಗಿಸುವಾಗಲೆಲ್ಲ ಅವರ ಕಣ್ಣುಗಳಲ್ಲಿ ಪೆಟ್ರೋಮ್ಯಾಕ್ಸಿನ ಪ್ರತಿಫಲನ ಕಾಣಬಹುದಾಗಿತ್ತು. ಪೆಟ್ರೋಮ್ಯಾಕ್ಸಿನಿಂದ

ಹಾವಿನದ್ದೋ ಎಂಬಂತೆ ಬುಸುಗುಡುವಿಕೆ ಕೇಳಿ ಬರುತ್ತಿತ್ತು. ಎಡೆಗೆಡೆಗೆ ಬಿಳಿಯ ಷರ್ಟು ಧರಿಸಿದ್ದ ವ್ಯಕ್ತಿ ಒಂದು ಸ್ಟೂಲಿಗೆ ಹತ್ತಿ ಆ ಲೈಟಿಗೆ ಗಾಳಿ ಹಾಕುತ್ತಿದ್ದ. 'ಕೆಲವೊಮ್ಮೆ ಈ ಪೆಟ್ರೋಮ್ಯಾಕ್ಸ್ ಸಿಡಿದು ರಟ್ಟಬಹುದು. ಬಾಂಬ್ ಸಿಡಿದ ಹಾಗೆ ಸಿಡಿತ. ಥಾಮಸ್ ಮಾಷ್ಟ್ರು ಎಂಬುದಾಗಿ ಕರೆಯಲ್ಪಡುವ ಓರ್ವ ಮೀಸೆಯಾತ ಶುದ್ಧವಾದ ಮುಗುಳ್ನಗೆಯನ್ನು ಸಾರ್ವಜನಿಕರ ಕಡೆಗೆ ಬೀರುತ್ತ ಹೇಳಿದರು: 'ಅಂಕಮಾಲಿನಲ್ಲಿ ಹಾಗೊಂದು ಘಟನೆ ಸಂಭವಿಸಿತು. ನಲುವತ್ತೊಂದು ಜನ ಸತ್ರು' ಥಾಮಸ್ ಮಾಷ್ಟ್ರು ವಿವರಿಸಿದರು. ಮುಗುಳ್ನಗೆ ಮತ್ತೆ ಹೊಮ್ಮಿತು. ನನ್ನ ಹಿಂದೆ ಕುಳಿತಿದ್ದ ಓರ್ವ ಹೆಂಗಸು ಎದ್ದರು.

'ನಾ ಹೋಗ್ತೇನೆ. ನಂಗೆ ನಾಟಕಾನೂ ಬೇಡ ಏನೂ ಬೇಡ. ಇದೇನಾದ್ರೂ ಸಿಡಿದ್ರೆ ಕೂತ ಜನ್ರೆಲ್ಲ ಸಾಯ್ಲಿಕ್ಕಿಲ್ವ ?'

'ಕೂತ್ಕೊಳ್ಳಿ ಅಮ್ಮಿಣಿಯಕ್ಕ. ಹುಟ್ಟಿದ್ರೆ ಸಾಯ್ಲೇ ಬೇಕಲ್ವ ? ಹೀಗೆ ಹೆದ್ರಿದ್ರೆ ? ನಾಟಕ ನೋಡ್ಲಿಕ್ಕೆ ಒಂದ್ರೂಪ್ಯಾ ಕೊಡ್ಲಿಲ್ವಾ ?' ಹಿನ್ನೆಲೆಯಲ್ಲಿ ನಾಟಕ ಕಂಪೆನಿಯ ಪ್ರತಿನಿಧಿಗಳು ನಿಂತಿದ್ದರು. ಅವರು ಎಡೆಗಡೆಗೆ 'ಶ್ ಶ್' ಎಂಬುದಾಗಿ ಶಬ್ದ ಹೊರಡಿಸುತ್ತಿದ್ದರು. ದುಡ್ಡು ಕೊಡದೆ ನಾಟಕ ನೋಡ್ಲಿಕ್ಕೆ ಹಿತ್ತಿಲಿನಲ್ಲೂ ಮಾವಿನ ಕೊಂಬೆಯಲ್ಲೂ ನಿಂತವರನ್ನು ಗದರಿಸಿ ಓಡಿಸುವುದೂ ಅವರ ಜವಾಬ್ದಾರಿಯಾಗಿತ್ತು. ಆದ್ದರಿಂದ ನಡುನಡುವೆ ಅವರು ಕತ್ತಲೆಯಲ್ಲಿ ತಪ್ಪಿ ತಡವಿ ನಡೆದಾಡಿದರು. ಒಮ್ಮೆ ಏಟಿನ ಶಬ್ದ ಕೇಳಿಸಿತು. 'ಹಿಡ್ದು ಬಾವಿಗೆ ತಳ್ತೇನೆ' ಒಬ್ಬಾತ ಏರುಸ್ವರದಲ್ಲಿ ಹೇಳುತ್ತಿದ್ದ.

ಆ ನಿಮಿಷದಲ್ಲೇ ಪ್ರೇಕ್ಷಕರ ನಡುವಿನಿಂದ ಒಂದು ಮರ್ಮರ ಧ್ವನಿ ಕೇಳಿ ಬಂದುದು: 'ಸಿ.ಆರ್. ಬರುತ್ತಿದ್ದಾರೆ. ಸಿ.ಆರ್. ಬರುತ್ತಿದ್ದಾರೆ.' ನಾನು ತಿರುಗಿ ನೋಡಿದೆ. ಕಲ್ಲೂರ್ ಕಾಟ್ಟಿನ ಕೊಚ್ಚುಣ್ಣಿ ನಾಯರ್ ತಮ್ಮ ಕುಟುಂಬದವರ ಹಾಗೂ ಲಾಟೀನು ಹಿಡಿದ ಪರಿಚಾರಕರೊಂದಿಗೆ ಬಂದರು. ಗೆರೆ ಗೆರೆಯ ಷರ್ಟು, ಡಬ್ಬಲ್ ಮುಂಡು, ನೀಳ ಶಾಲು, ಸ್ಥೂಲ ಶರೀರ, ಕಣ್ಣ ಮೂಲೆಯಲ್ಲಿ ಮುಗುಳ್ನಗೆ.

'ಪ್ರಾರಂಬಾದ್ದಷ್ಟೆ. ತಮಗಾಗಿ ಮತ್ತೆ ಪ್ರಾರಂಬ ಮಾಡ್ಲಿಕ್ಕೆ ಹೇಳ್ಬೇಕಾ ?'

'ಏಯ್, ಬೇಡ.'

ಹೊಸ ಕುರ್ಚಿಗಳು ಪರಡಿಕೊಂಡವು. ಅವರ ಸೋದರಿಯರೂ ಹಿರಿಯ ಸೋದರಿಯ ಮಕ್ಕಳಲ್ಲೊಬ್ಬಳಾದ ಭಾನುವೂ ಬಂದಿದ್ದರು. ಭಾನು ನನ್ನ ಗೆಳತಿಯಾಗಿದ್ದಳು. 'ಎಲ್ರಿದ್ದಾರೆ' ಅಜ್ಜಿ ಹೇಳಿದರು. 'ಕಲ್ಲೂರ್ ಕಾಟ್ಟನಿಂದ ಯಾರೂ ಬರ್ಲಿಲ್ಲ ಯಾಕೇಂತ ನಾನು ಯೋಚಿಸ್ತಿದ್ದೆ. ಈಗ ಕಲ್ಲೂರ್‌ಕಾಟ್ಟಿನವರೂ ಬಂದರು. ಕುಟ್ಟುಪ್ಪು ಮೆನೋನೂ ಲಕ್ಷ್ಮಿಕುಟ್ಟಿಯಮ್ಮಯೂ ಮಕ್ಳೂ ಇದ್ದಾರೆ, ಪಾಲಶ್ಶೇರಿಯವ್ರೂ ಇದ್ದಾರೆ. ಮಣಿಯನ್ ಮೆನೋನ್ರಿದ್ದಾರೆ. ಕಾಳತ್ತಿಂಗಳಿನವರಿದ್ದಾರೆ, ಎಲ್ರಿದ್ದಾರೆ, ಡಾಕ್ಟರ್ ಕುಮಾರನೂ'.

ಅಜ್ಜಿ ಸಂಭ್ರಮಗೊಂಡವರಂತೆ ಕಂಡು ಬಂದರು. ನಾಟಕವನ್ನವರು ಗಮನಿಸುತ್ತಿರಲಿಲ್ಲ. ಆದ್ದರಿಂದ ಅವರಿಗೆ ಅದರ ನಟನಟಿಯರೊಂದಿಗೆ ದುಃಖಿಸಬೇಕಾದ ಅಗತ್ಯ ಕೂಡ ಬರಲಿಲ್ಲ.

ನಾಲಪ್ಪಾಟ್ಟಿಗೆ ಹಿಂದಿರುಗಿ ಬಂದಾಗ ತಾನೂ ನಾಟಕ ನೋಡಿದ್ದೇನೆಂದು ಅಡುಗೆಯ ಶಂಕರನ್ ಹೇಳಿದ.

'ನಾನು ಶಾಲೆ ಗೋಡೆ ಮೇಲೆ ಹತ್ತಿ ಕೂತೆ. ಚೆನ್ನಾಗಿ ನೋಡ್ಲಿಕ್ಕೆ ಸಿಕ್ತು.'

'ಆ ಹಾಡು ನಿಮಿಗಿಷ್ಟವಾಯ್ತಾ? ಭಿಕ್ಷುಕರಲ್ಲೇ ಭಿಕ್ಷುಕರಾದ ಭಿಕ್ಷುಕರು ನಾವು'

'ಹಾಡೆಲ್ಲ ನಂಗೆ ನೆಂಪಿಲ್ಲ ಮಗೂ. ಆ ಹುಡ್ಗಿ ನೋಡ್ಲಿಕ್ಕೆ ಚಂದ ಇದ್ಲು.'

ನಾಲಪ್ಪಾಟ್ಟು ಹಿತ್ತಿಲಿನ ಬಡಗು ಗಡಿಯಲ್ಲಿ ಒಂದು ಪಾಲೆ ಬೆಳೆದು ನಿಂತಿತ್ತು. ಅದರ ಕೆಳಗೆ ನಿಂತರೆ ವೆಳುತ್ತೇಡದ ಲಕ್ಷ್ಮಿಕುಟ್ಟಿಯ ಸುಣ್ಣ ಬಳಿಯದ ಮನೆಯೂ ಬೂದಿ ಮಿಶ್ರಿತ ನೀರಲ್ಲಿ ಬಟ್ಟೆ ಒಗೆಯುವಾಗ ಹೊಮ್ಮುವ ಹೊಗೆಯೂ ಕಾಣುತ್ತಿತ್ತು. ಇನ್ನಷ್ಟು ಎಚ್ಚರಿಕೆಯಿಂದ ನೋಡಿದರೆ ಜಗಲಿಯಲ್ಲಿ ಕುಳಿತು ಕಲ್ಲಾಟವಾಡುವ ಬಾಲಾಳನ್ನು ಕಾಣಬಹುದಾಗಿತ್ತು. ಬಾಲಾ, ಲಕ್ಷ್ಮಿಕುಟ್ಟಿಯ ಮಗಳು. ಬಟ್ಟೆ ಒಗೆಯಲು ತನ್ನಮ್ಮನಿಗೆ ಸಹಾಯ ಮಾಡುವ ಆಸಕ್ತಿ ತೋರಿಸಿದವಳಲ್ಲ. ಅವಳಿಗೆ ಹಾಡಲು ಕಲಿಯುವ ಆಸೆಯಿತ್ತು. ಕಣ್ಣು ಕಾಣದ ಕುಟ್ಟಪ್ಪನ್ ಭಾಗವತರ್ ನಾಲಪ್ಪಾಟ್ಟಿಗೆ ಬಂದು ಹಾಡುವಾಗ ಬಾಲಾ ಓಡಿ ಬರುತ್ತಿದ್ದಳು. ಗುರುವಾಯೂರಿನ ಮೆಟ್ಟಲಿನಲ್ಲಿ ಒಮ್ಮೆ ಅವಳು ಒಂದು ಪದ್ಯ ಪುಸ್ತಕ ಕೊಂಡುಕೊಂಡಳು. ಅವಳಿಗೆ ಖರ್ಜೂರ, ಕುಪ್ಪಿ ಬಳೆ, ಲಾಡಿಗಳನ್ನು ಕೊಂಡುಕೊಡುವುದಕ್ಕೆ ಲಕ್ಷ್ಮಿಕುಟ್ಟಿ ತಯಾರಿದ್ದಳು. ಹಾಗಿದ್ದೂ ಪದ್ಯ ಪುಸ್ತಕ ಮಾತ್ರ ತೆಗೆದುಕೊಂಡು ಅವಳು ಮನೆಗೆ ಹಿಂದಿರುಗಿದಳು.

ಲಕ್ಷ್ಮಿಕುಟ್ಟಿ ಪ್ರತಿ ತಿಂಗಳು ಒಂದನೇ ತಾರೀಕಿನಂದು ಗುರುವಾಯೂರಿಗೆ ಹೋಗುತ್ತಿದ್ದಳು. ವಿಶೇಷ ದಿವಸಗಳಲ್ಲೂ ಆಕೆ ದೇವರ ದರ್ಶನ ಮಾಡುತ್ತಿದ್ದಳು. ಆಕೆಯೂ ನನ್ನ ಅಜ್ಜಿಯ ಹಾಗೆ ಓರ್ವ ಕೃಷ್ಣ ಭಕ್ತೆಯಾಗಿದ್ದಳು. ನನ್ನ ಅಜ್ಜಿ ವಿಶೇಷ ದಿವಸಗಳಲ್ಲಿ ಒಮ್ಮೆಯೂ ಗುರುವಾಯೂರಿಗೆ ಹೋಗುತ್ತಿರಲಿಲ್ಲ. ನೂಕು ನುಗ್ಗಲು ತಡೆಯೋಕ್ಕಾಗಲ್ಲ ಎಂದು ಅವರು ಹೇಳುತ್ತಿದ್ದರು. 'ಏಕಾಶಿಗೆ ಒಳ್ಳೆ ಜಂಗುಳಿಯಿತ್ತಾ ಲಕ್ಷ್ಮಿಕುಟ್ಟೀ' ಅವರು ಕೇಳುತ್ತಿದ್ದರು.

'ಜಂಗುಳಿ ಅಂದ್ರೇನು? ಹೀಗುಂಟೆ ಒಂದು ಜಂಗುಳಿ! ಸೂಜಿ ಹಾಕ್ಲಿಕ್ಕೆ ಜಾಗ ಇರ್ಲಿಲ್ಲ, ಹುಡ್ಗೀನ್ನು ಎತ್ತಿ ಹೆಗ್ಲಲ್ಲಿ ಹಾಕ್ದೆ. ಇಲ್ದಿದ್ರೆ ಅದನ್ನು ಮೆಟ್ಟಿ ಹೊಸ್ಕಿ ಬಿಡ್ತಿದ್ರು.....' ಲಕ್ಷ್ಮಿಕುಟ್ಟಿ ಹೇಳಿದಳು. ನೀಲಿ, ಗಂಜಿ ಹಾಕಿ ಒಗ್ದ ಬಟ್ಟೆಯ ಬಿಳುಪೇ ಅವಳ ಮುಗುಳ್ನಗೆಗೂ ಇತ್ತು.

ಲಕ್ಷ್ಮಿಕುಟ್ಟಿ ಗುರುವಾಯೂರಿಗೆ ಹೋಗುವಾಗ ಜೊತೆಗಾತಿಯಾಗಿ ನಾಲಪ್ಪಾಟ್ಟಿನ ಯಾರಾದರೂ ಒಬ್ಬಳು ಕೆಲಸದವಳನ್ನು ಕರೆದುಕೊಂಡು ಹೋಗುತ್ತಿದ್ದಳು. ಹೆಚ್ಚಾಗಿ ದೇವಕಿಯೇ ಹೋಗುತ್ತಿದ್ದಳು. ಹಿಂದಿರುಗಿ ಬಂದ ಮೇಲೆ ಆ ದಿನದ ಎಲ್ಲ ಕಾರ್ಯಕ್ರಮಗಳನ್ನು ನನಗೆ ವಿವರಿಸಿ ಹೇಳುತ್ತಿದ್ದಳು. ನಾಲಪ್ಪಾಟ್ಟಿನಿಂದ ಗುರುವಾಯೂರಿಗೆ ಆರು ಮೈಲು ದೂರ. ಅರ್ಧದಷ್ಟು ನಡೆದರೆ ಕಲ್ಲಾಯ್ಮನೆಯವರ ಕೊಳ ಕಾಣಸಿಗುತ್ತದೆ. ಅದರಲ್ಲಿಳಿದು ಕೈಕಾಲು ಮುಖ ತೊಳೆದು ಮತ್ತೂ ಯಾತ್ರೆ ಮುಂದುವರಿಸುವುದು. ಕೆಲವೊಮ್ಮೆ ಭಾಗ್ಯವಿದ್ದರೆ ಯಾರಾದರೂ ಎಳನೀರೋ, ಮಜ್ಜಿಗೆ ನೀರೋ ಕುಡಿಯಲು ಕೊಡುವುದುಂಟು. ದೇವರ ದರ್ಶನ ಮುಗಿದರೆ

ನೇರವಾಗಿ ದ್ವಾರದ ಹೊರಗೆ 'ಹೋಟೆಲ್ ದ ಕೃಷ್ಣ' ಎಂಬ ಹೊಟೇಲಿಗೆ ಹೋಗಿ ಚಾ, ವಡೆ, ದೋಸೆ, ಬೋಂಡ ಮೊದಲಾದುವುಗಳನ್ನು ಸೇವಿಸುವುದು. ಆಮೇಲೆ ಶೋಪ್ಪಿಂಗ್. ಬಳೆ, ಸೀರೆ, ಚಕ್ಕುಲಿ, ಹೊದಳು, ಖರ್ಜೂರ ಮೊದಲಾದುವೆಲ್ಲ ಕೊಳ್ಳುವುದು. ಇದೆಲ್ಲವನ್ನೂ ಗಾಂಧೀಜಿಯ ಚಿತ್ರವಿರುವ ಸೆಣಬು ಚೀಲದಲ್ಲಿ ಹಾಕಿ ಅದನ್ನು ನೇತಾಡಿಸಿಕೊಂಡು ಮರಳಿ ಬರುವುದು.

'ವೈಲತ್ತೂರು ಕಳೆದ ಮೇಲೆ ನನ್ನ ಅಮ್ಮನೂ ದೇವಕಿಯಕ್ಕನೂ ತೆಂಗಿನಡಿಯಲ್ಲಿ ಕೂತು ಮೂತ್ರ ಮಾಡಿದ್ರು' ಬಾಲಾ ಹೇಳಿದಳು.

ಅಜ್ಜಿ ಗುರುವಾಯೂರಿಗೆ ದೋಣಿಯಲ್ಲಿ ಹೋಗುತ್ತಿದ್ದರು. ಹೊತ್ತು ಬೆಳಗಾಗಬೇಕಿದ್ದರೆ ನಾವು ಒಂದು ಘೋಷ ಯಾತ್ರೆಯ ಹಾಗೆ ದಡಕ್ಕೆ ನಡೆಯುತ್ತಿದ್ದೆವು. ಎದುರು ಸೂಟೆ ಬೀಸುತ್ತ ಮಾಂಬುಳ್ಳಿ ಕೃಷ್ಣನ್. ಸರೀ ಹಿಂದೆ ಕೃಷ್ಣನ್‌ನ ಹೆಂಡತಿ ವಳ್ಳಿ. ಅವರ ಹಿಂದೆ ಸಿಕ್ಕಿದವರ ಹೆಗಲೇರಿ ಯಾತ್ರೆ ಮಾಡುವ ನಾನು. ನನ್ನ ಹಿಂದೆ ಅಜ್ಜಿ. ಅಜ್ಜಿಯ ಹಿಂದೆ ಲಾಟೀನು ನೇತಾಡಿಸುತ್ತಾ ಒಬ್ಬಾಕೆ ಕೆಲಸದವಳು. ದಡದ ಸಮೀಪದಲ್ಲಿ ದರ್ಬೆ ಹುಲ್ಲೂ ಕೇದಗೆಯೂ ಬಿರಿದು ನಿಂತಿತ್ತು. ಅವುಗಳೆಡೆಯಿಂದ ಜೀರುಂಡೆಗಳ ಕ್ರೀ ಕ್ರೀ ಎಂಬ ಯಾಂತ್ರಿಕ ಕೂಗು ಎಡೆಬಿಡದೆ ಹೊಮ್ಮುತ್ತಿತ್ತು. ನಡುವೆ ಒಂದು ಕಪ್ಪೆ ತನ್ನ ಬಿಳಚಿದ ಕಾಲು ಚಾಚುತ್ತ ಮುಂದಕ್ಕೆ ಹಾರಿತು. ದೋಣಿ ಬಿಡುವ ಕೇಳುವಿನ ಒರಟು ತುಟಿಗಳು ಹೊಟ್ಟೆ ಬಿರಿದದ್ದು ಕಂಡು ಬಂತು. 'ಅದ್ಯಾಕೆ ಹಾಗೆ ?' ನಾನು ದೇವಕಿಯನ್ನು ಕೇಳಿದೆ.

'ಕೇಳೂಗೆ ಬಾಯಿ ಹುಣ್ಣು....' ಅವಳು ಹೇಳಿದಳು.

'ನನಗೂ ಬಾಯಿ ಹುಣ್ಣಾದೀತಾ ? ನಾನು ಕೇಳಿದೆ.'

ದೇವಕಿ ಉತ್ತರಿಸಲಿಲ್ಲ. ಕೇಳು ಹುಟ್ಟು ಹಾಕುವಾಗ ನನ್ನನ್ನು ನೋಡಿ ನಗುತ್ತಿದ್ದ. ನಾನು ಮಧ್ಯದ ಹಲಗೆಯಲ್ಲಿ ದೇವಕಿಯ ಹತ್ತಿರ ಕುಳಿತುಕೊಂಡಿದ್ದೆ. ದೋಣಿಯಲ್ಲಿ ಹುಲ್ಲು ಚಾಪೆ ಬಿಡಿಸಿ ಅದಕ್ಕೊಂದು ಪಂಚೆ ಹರಡಿ ಅಜ್ಜಿ ಮಲಗಿದ್ದರು. ಒಮ್ಮೆ ಅಜ್ಜಿ ನೀರಿನ ಕಡೆಗೆ ಬಾಗಿ ವಾಂತಿ ಮಾಡಿದರು. ಮತ್ತೊಮ್ಮೆ ನೀರಿನಿಂದ ಒಂದು ನೈದಿಲೆಯನ್ನು ನನಗಾಗಿ ಕೊಯ್ದು ಕೊಟ್ಟರು. ನೈದಿಲೆ ಹೂವಿನ ದಂಟಿನಿಂದ ಮಾಲೆ ಮಾಡುವುದಕ್ಕೆ ನನಗೆ ಗೊತ್ತು ಎಂಬುದಾಗಿ ದೇವಕಿ ಹೇಳಿದಳು. ಗುರುವಾಯೂರಿಗೆ ತಲುಪಿ ಅಲ್ಲಿದ್ದ ಭಗವತೀ ಕ್ಷೇತ್ರದ ಕೊಳದಲ್ಲಿ ಸ್ನಾನ ಮಾಡಿದ್ದಾಗಿ ನನ್ನ ನೆನಪು. ನಾವು ಸ್ನಾನ ಮಾಡುವುದನ್ನು ನೋಡುತ್ತ ದಢೂತಿಯಾದ ಒಬ್ಬ ಭಜನೆಯವ ಕಂಬಕ್ಕೊರಗಿ ನಿಂತಿದ್ದ. ನಡುನಡುವೆ ಆತ ಕೊಳಲೂದುವವನಂತೆ ಅಭಿನಯಿಸುತ್ತಿದ್ದ.

'ಅದು ನಮ್ಮ ಹಾವು ಗೋಯಿಂದ' ದೇವಕಿ ಹೇಳಿದಳು. 'ಅದು ಬರೇ ಪಾಪ. ಅದ್ರಿಂದ ಯಾರಿಗೂ ಏನೂ ಉಪದ್ರಯಿಲ್ಲ. ಅದ್ರ ಭಾವನೆ ಅದು ಬಾಲಕೃಷ್ಣಾಂತ.'

ನಮಸ್ಕಾರ, ಬಲಿವಾಡುಗಳು ಮುಗಿದ ತಕ್ಷಣ ನಾವು ತಂದೆಯ ಮನೆಗೆ ನಡೆಯುತ್ತಿದ್ದೆವು. 'ಹೋಟೆಲ್ ದ ಕೃಷ್ಣ'ಕ್ಕೆ ಹೋಗೋಣ ಎಂದು ನಾನು ಅಜ್ಜಿಯನ್ನು ಒತ್ತಾಯಿಸುತ್ತಿದ್ದೆ. ಆದರೆ, ಏನೂ ಆಸಕ್ತಿಯಿಲ್ಲದವರಂತೆ ಅವರು ನನ್ನ ಕೈ ಹಿಡಿದು

ಎಳೆದುಕೊಂಡು ಮಮ್ಮಿಯೂರ್ ದೇವಸ್ಥಾನದ ಕಡೆಗಿರುವ ಮಣ್ಣು ಹಾದಿಗೆ ಇಳಿದು ಬಿಡುತ್ತಿದರು.

ತ[illegible]ಯು ಕುಟುಂಬವಾದ ವಾಡೇಕರ ಮನೆಯಲ್ಲಿ ಕಾಡುಮಲ್ಲಿಗೆಯೂ ಸಂಧ್ಯಾ ಪುಷ್ಪವೂ ಶಂಖಪುಷ್ಪವೂ ಬಿರಿದು ನಿಂತಿತ್ತು. ಮೆಟ್ಟಲು ದಾಟಿದ ಕೂಡಲೆ ಕಾಣುವುದು ಒಂದು ಬಾದಾಮಿ ಮರ. ನಾವು ಹೋದರೆ ಕೂಡಲೆ ತಂದೆಯ ಸೋದರಿ ಇಡ್ಲಿ, ಚಹಾ ಕೊಟ್ಟು ಸತ್ಕರಿಸುತ್ತಿದ್ದರು. ಊಟ ಮುಗಿಸಿ ಹೆಂಗಸರು ಒಳಕೋಣೆಗೆ ಸರಿದು ನಾನು ಮುಖದ್ವಾರಕ್ಕೆ ಬರಬೇಕಿದ್ದರೆ ಚೆಂಬನ್ ಎಂಬ ಮುದ್ದಾದ ಹೆಸರಿನ ಓರ್ವ ಮುದುಕ ನನಗೆ ಚಿತ್ರರಚನೆ ಕಲಿಸಿಕೊಡುವುದಕ್ಕೆ ಸಿದ್ಧನಾಗಿರುತ್ತಿದ್ದ. 'ಕರಿಯೂ ಕರವೂ ಬಿಡಿಸ್ಲಿಕ್ಕೆ ಕಲಿತ್ರೆ ಎಲ್ಲಾ ಕಲ್ತಾಗೆ' ಅವರು ಹೇಳಿದರು. ಆನೆಯ, ಅಂಗೈಯ ಚಿತ್ರಗಳು ತುಂಬಿದ ಒಂದು ಪುಸ್ತಕವನ್ನವರು ಒಮ್ಮೆ ನನಗೆ ಕೊಟ್ಟರು. ಬಾಳೆದಂಟು ಕೊಯ್ದು ಚತುರಂಗದ ಕಾಯಿಗಳನ್ನು ಮಾಡುವುದಕ್ಕೂ ಚೆಂಬನ್ ನನಗೆ ಕಲಿಸಿದರು. ನಾನೂ ನನ್ನ ಅಣ್ಣನೂ ಚದುರಂಗ ಆಡತೊಡಗಿದಾಗ ಅಜ್ಜಿ ಹೇಳಿದರು.

'ಮೇಲೆ ಹೋಗಿ ಆಡಿ ಕೊಳ್ಳಿ..... ದೃಷ್ಟಿಯಾದೀತು.'

ನಮಗೆ ಅಸಾಮಾನ್ಯ ಬುದ್ಧಿ ಶಕ್ತಿಯಿದೆಯೆಂದು ಅಜ್ಜಿ ಅಂದು ನಂಬಿದ್ದರು. ನಾವು ನಮ್ಮ ನಮ್ಮೊಳಗೆ ಇಂಗ್ಲೀಷ್ ಮಾತನಾಡುವುದನ್ನು ಗಮನಿಸುತ್ತಾ ಅವರು ಕುಳ್ಳಿರುತ್ತಿದ್ದರು, ನಗುತ್ತಾ. ಆಮೇಲೆ ನಮ್ಮ ಇಂಗ್ಲೀಷ್ ಕೇಳಿ ಮಿಕ್ಕ ಮಕ್ಕಳು ಗೇಲಿ ಮಾಡಿದಾಗ ನಾವದನ್ನು ನಿಲ್ಲಿಸಿ ಬಿಟ್ಟೆವು.

'ಇಗೊ, ನೋಡೋ.... ಇವ್ರು ಇಂಗ್ಲಿಷೇ ಹೊರ್ಕಟೆ ಮಾಡ್ತಾರೆ...' ಆ ಮಕ್ಕಳಿಗೆ ಹೆದರಿ ಆಮೇಲೆ ಇಂಗ್ಲಿಷನ್ನು ಬಿಟ್ಟುಬಿಟ್ಟೆವು. ಎರಡನೆಯ ಲೋಕ ಮಹಾಯುದ್ಧವೂ ಮುಗಿದು ಕಲ್ಕತ್ತೆಗೆ ಮರಳಿ ಹೋಗುವುದಕ್ಕೆ ಯಾವಾಗ ಸಾಧ್ಯವಾದೀತು ಎಂಬುದಾಗಿ ಯಾರಿಗೂ ಹೇಳಲು ಸಾಧ್ಯವಾಗಲಿಲ್ಲ.

ಅಂದೆಲ್ಲ ಪುನ್ನಯೂರ್‌ಕುಳದಲ್ಲಿ ಎಲ್ಲರಿಗೂ ಪರಿಚಿತನಾಗಿದ್ದ ಪೆರುಮಾಳ್ ಚೆಟ್ಟಿ ಎಂಬ ಒಬ್ಬ ವ್ಯಾಪಾರಿಯಿದ್ದ. ಆತ ಸೀರೆಯ ಕಟ್ಟವನ್ನು ತಲೆಯಲ್ಲಿಟ್ಟು ತಿಂಗಳಿಗೊಮ್ಮೆ ನಾಲಪ್ಪಾಟ್ಟಿಗೆ ಬರುತ್ತಿದ್ದ. ಕಡಿಮೆ ಬೆಲೆಯ ಪಂಚೆಗಳನ್ನಾತ ದೊಡ್ಡ ಕ್ರಯಕ್ಕೆ ಮಾರುತ್ತಿದ್ದ. ಪ್ರತಿ ಪಂಚೆಯ ಮಹಿಮೆ ಕೇಳಿ ಹಲವರು ತಮ್ಮ ಕೈಯಲ್ಲಿದ್ದ ದುಡ್ಡನ್ನೆಲ್ಲ ಚೆಟ್ಟಿಗೆ ಕೊಟ್ಟು ಬಿಡುತ್ತಿದ್ದರು. ಪೈಸೆ ಕೊಡದಿದ್ದರೆ ಪೆರುಮಾಳ್ ಚೆಟ್ಟಿಗೆ ಯಾವ ಚಿಂತೆಯೂ ಇರಲಿಲ್ಲ. ಯಾವತ್ತಾದರೂ ಬಾಕಿ ತೀರಿಸುತ್ತಾರೆಂಬ ನಂಬಿಕೆ ಆತನಿಗಿತ್ತು.

'ಅಮ್ಮನಿಗೆ ಕೆಂಪು ಅಂಚಿನ ಮುಂಡು ಹಿಡಿಸ್ತದೆ' ಎಂದು ಆತ ಹೇಳಿದ. ಆತನಿಗೆ ಉದ್ದನೆಯ ಹುರಿಮೀಸೆಯಿತ್ತು. ಕಡೆಯುವ ಕಲ್ಲಿನ ಗುಂಡಿನಷ್ಟು ದೊಡ್ಡ ಹಲ್ಲುಗಳೂ. 'ಪೆರುಮಾಳ್ ಚೆಟ್ಟಿ ರಾಕ್ಷಸನೊ' ನಾನು ಅನೇಕ ಸಲ ಅಜ್ಜಿಯನ್ನು ಕೇಳಿದ್ದೆ.

'ಆತ ಬರೀ ಪಾಪದ ಚೆಟ್ಟಿ' ಅಜ್ಜಿ ಹೇಳಿದ್ದರು.

'ಚೆಟ್ಟಿ ಐಶ್ವರ್ಯವಂತರ ಮನೆಯಾದ ಅಂಬಾಳತ್ತಿಗೆ ವರ್ಷಕ್ಕೆರಡು ಸಲ ಮಾತ್ರವೇ ಹೋಗುತ್ತಿದ್ದುದು. ಅಲ್ಲಿಯ ಕೆಲಸದವರಿಗೆ ಓಣಂಗೂ ವಿಶುವಿಗೂ ಮುಂಡುಗಳನ್ನು ಕೊಳ್ಳುವುದು ಚೆಟ್ಟಿಯು ಕಟ್ಟದಿಂದ. ಯಜಮಾನರೂ ಯಜಮಾನಿಯರೂ ಯಾವತ್ತೂ ಚೆಟ್ಟಿಯು ಮುಂಡುಗಳನ್ನುಡುತ್ತಿರಲಿಲ್ಲ. ಚೆನ್ನಮಂಗಲಂ ಮುಂಡುಗಳನ್ನು ಮಾರುವ ವೇಲಾಯುಧ ಮೆನೋನ್‌ರನ್ನು ಕರೆಯಿಸಿ ಅವರು ಬಟ್ಟೆಬರೆಗಳನ್ನು ಆಯುತ್ತಿದ್ದರು. ವೇಲಾಯುಧ ಮೆನೋನ್ ಯಾವತ್ತೂ ಮುಂಡಿನ ಕಟ್ಟವನ್ನು ತಲೆಯಲ್ಲಿ ಹೊತ್ತು ನಡೆಯುತ್ತಿರಲಿಲ್ಲ. ಅದನ್ನು ಹೊರಲಿಕ್ಕೆ ಅವರಲ್ಲಿ ಕೆಲಸದವರಿದ್ದರು. ಅವರಿಗೆ ಊಟದ ಮನೆಯಲ್ಲೇ ಎಲೆ ಹಾಕಿ ಬಡಿಸುವುದು ಅಂಬಾಳತ್ತಿನಲ್ಲಿ ವಾಡಿಕೆ. ಪೆರುಮಾಳ್ ಚೆಟ್ಟಿ ಊಟದ ಸಮಯದಲ್ಲಿ ಬಂದರೆ, ಆತನಿಗೆ ಬಾವಿಯು ಎದುರಿರುವ ಮುಖದ್ವಾರದಲ್ಲಿ ಊಟ ಬಡಿಸಿಕೊಡುತ್ತಿದ್ದರು. ಆದರೆ, ಊಟದ ಬಗ್ಗೆ ಆಮೇಲೆ ಹೊಗಳುವುದರಲ್ಲಿ ಚೆಟ್ಟಿಯನ್ನು ಸೋಲಿಸುವುದಕ್ಕೆ ಯಾರಿಂದಲೂ ಆಗುತ್ತಿರಲಿಲ್ಲ. ಪ್ರತಿಯೊಂದು ಕುಟುಂಬದ ಬಗ್ಗೆಯೂ ಜನಾಭಿಪ್ರಾಯ ಕ್ರೋಢೀಕರಿಸುವುದಕ್ಕೆ ಈ ರೀತಿಯ ಅತಿಥಿಗಳು ಸಹಾಯಕ್ಕೆ ಬರುತ್ತಾರೆ. ಆದ್ದರಿಂದಲೇ ಇರಬೇಕು, ಅಂದೆಲ್ಲ ಯಾರೇ ಬಂದರೂ ಊಟ ಕೊಡದೆ ಹಿಂದಕ್ಕೆ ಕಳುಹಿಸುವುದಕ್ಕೆ ಮನೆಯವರು ಒಪ್ಪದೇ ಇದ್ದುದು.'

ನಾಲಪ್ಪಾಟ್ಟಿಗೆ ವಾರದಲ್ಲಿ ಮೂವತ್ತರಷ್ಟು ಮಂದಿ ಊಟಕ್ಕೆ ಬರುತ್ತಿದ್ದರು. ಅದರಲ್ಲಿ ಮುಖ್ಯವಾಗಿ ಹುಚ್ಚ ತಾಮಿ, ಹೊಟ್ಟೆ ಬಾಕ ರಾಮನಾಯರ್, ಕುರುಡ ಭಾಗವತರು, ಮೂಕಿ ಹುಡುಗಿ, ಧರ್ಮಾನಂದನೆಂಬ ಕಳ್ಳಸನ್ಯಾಸಿ ಮೊದಲಾದವರಿದ್ದರು. ತಾಮಿ ಕಪ್ಪು ಮುಂಡು ಸುತ್ತಿ ಕಾಣಿಸಿಕೊಳ್ಳುವನು. ಉದ್ದನೆಯ ತಲೆ ಕೂದಲೆಡೆಯಿಂದ ಎಡಗಡೆಗೆ ಬಾಚಣಿಗೆ ಓಡಿಸುವುದನ್ನು ನೋಡಬಹುದಿತ್ತು. 'ತಾಮಿ ಇಂಗ್ಲಿಷ್ ಮಾತಾಡು' ಎಂಬುದಾಗಿ ಯಾರಾದರೂ ಹೇಳಿದರೆ ಕೂಡಲೇ ಆತ ಇಂಗ್ಲಿಷಿಗೆ ಹೋಲಿಕೆಯುಳ್ಳ ಒಂದು ಭಾಷೆಯಲ್ಲಿ ಭಾಷಣ ಮಾಡತೊಡಗುವನು. ಭಾಷಣದ ಕೊನೆಯಲ್ಲಿ ಆತ ಕೋವಿ ತೆಗೆದು ಗುಂಡು ಹಾರಿಸುವಂತೆ ಅಭಿನಯಿಸುವನು. ಬೇರೆ ಯಾರೂ ನೋಡುವುದಿಲ್ಲವೆಂದಾದರೆ ತಾಮಿ ತನ್ನ ಶರೀರದ ಎಲ್ಲಾ ಅವಯವಗಳನ್ನು ಕೆಲಸದ ಹೆಂಗಸರಿಗೆ ಬಹಿರಂಗಗೊಳಿಸುತ್ತಿದ್ದನೆಂದು ನಾನು ಕೇಳಿದ್ದೆ. 'ಮುಂಡೆತ್ತಿ ಕುಂಡೆ ತೋರಿಸ್ತಾನೆ ನಾಯಿ ಮಗ.' ನನ್ನ ಗೆಳತಿಯರಲ್ಲೊಬ್ಬಳು ಹೇಳಿದಳು.

'ತಾಮಿ ಯಾಕೆ ಕುಂಡೆ ತೋರಿಸೋದು' ನಾನೊಮ್ಮೆ ಅವನನ್ನು ಕೇಳಿದೆ. ಅವ ನನ್ನನ್ನು ನೋಡಿ ಮುಗುಳ್ನಕ್ಕ.

'ಸಿಂಗ ನೋಡ್ಬೇಕಾ ಮಗೂ' ಅವ ಕೇಳಿದ.

'ಏನು ?'

'ನನ್ನ ಕುಂಡೆ.'

'ನಾನು ತಲೆ ಅಲುಗಿಸಿದೆ.'

ನಾನು ಅಜ್ಜಿಯೊಂದಿಗೆ ತಾಮಿ ನನ್ನಲ್ಲಿ ಕೇಳಿದ ಪ್ರಶ್ನೆಯನ್ನು ಹೇಳಿದಾಗ ಅವರಿಗೆ ಸಿಟ್ಟು ಬಂತು.

'ಕಳ್ಳ ಇನ್ನಿಲ್ಲಿಗೆ ಬಂದರೆ ಓಡಿಸ್ಬೇಕು. ಅವನಿಗೆ ಹುಚ್ಚಲ್ಲ.... ಅಧಿಕ ಪ್ರಸಂಗ.'

ಹೊಟ್ಟೆಬಾಕ ರಾಮನ್ ನಾಯರ್ ಎಲ್ಲರಿಗೂ ಇಷ್ಟ. ಆತ ಬಿಳಚಿ ಸಪೂರಕ್ಕಿದ್ದ ಓರ್ವ ಮಧ್ಯ ವಯಸ್ಕ. ನೀಲಿ ಹಾಕಿ ಒಗೆದ ಮುಂಡನ್ನು ಮಾತ್ರ ಆತ ಧರಿಸುತ್ತಿದ್ದುದು. ಸಾಧಾರಣ ಹನ್ನೆರಡು ಗಂಟೆಯಾಗಬೇಕಿದ್ದರೆ ಆತ ಉತ್ತರ ದಿಕ್ಕಿನ ಮಾವಿನ ಮರದಡಿಯಲ್ಲಿ ಜಾಗ ಹಿಡಿದಿರುತ್ತಿದ್ದ. ಮಣ್ಣಿನಲ್ಲಿ ಕುಡಿಯೆಲೆ ಹಾಸಿ ಊಟಕ್ಕೆ ಕಾಯುತ್ತ ಮುಗುಳ್ನಗೆಯೊಂದಿಗೆ ರಾಮನ್ ನಾಯರ್ ಎಷ್ಟು ಹೊತ್ತು ಬೇಕಿದ್ದರೂ ನೆರಳಿನಲ್ಲಿ ವಿಶ್ರಮಿಸುತ್ತಿದ್ದ. ಎರಡು ಸೌಟು ಅನ್ನ ಒಂದೇ ಹೊಡೆತಕ್ಕೆ ಬರಿಯ ಸಾಂಬಾರು ಮಾತ್ರ ಸೇರಿಸಿ ಗುಳುಂ ಮಾಡುವುದಕ್ಕೆ ರಾಮನ್ ನಾಯರಿಗೆ ಯಾವ ಅಡ್ಡಿಯೂ ಇರಲಿಲ್ಲ. ಆತ ವಿದ್ಯಾವಂತನೆಂದೂ ಮನೆತನದಲ್ಲಿ ಜನಿಸಿದವನೆಂದೂ ಎಲ್ಲರೂ ಹೇಳುತ್ತಿದ್ದರು. ಅಪಸ್ಮಾರ ಹಿಡಿದ ಸಂಬಂಧಿಕಳೊಬ್ಬಳನ್ನು ರಾಮನ್ ನಾಯರಿಗೆ ಕೊಟ್ಟು ಮದುವೆ ಮಾಡಿಸಬೇಕೆಂದು ಕೂಡ ಹಲವರು ಆಡಿಕೊಳ್ಳುತ್ತಿದ್ದುದನ್ನು ನಾನು ಕೇಳಿದ್ದೆ.

'ಅವನಿಂದ ಯಾವ ಉಪದ್ರ ಕೂಡ ಇರ್ಲಿಕ್ಕಿಲ್ಲ. ಹೊಟ್ಟೆ ತುಂಬ ಊಟ ಕೊಟ್ರೆ ಅವ ಸಂತೋಷದಿಂದ ಇದ್ದುಬಿಡ್ತಾನೆ' ಒಬ್ಬಾಕೆ ಹೆಂಗಸು ಹೇಳಿದಳು.

'ಆಯ್, ಆಯ್, ಬರಿಯ ಬೇಡುವವನಿಗೆ ಹುಡುಗಿ ಕೊಟ್ಟು ಮದುವೆ ಮಾಡೋದಾ ? ಅದಾಗ್ಲಿಕ್ಕೇ ಇಲ್ಲ' ಮತ್ತೊಬ್ಬ ಹೇಳಿದ.

ಇದನ್ನೆಲ್ಲ ಕೇಳಿದ ನಾನು ಒಂದು ದಿನ ರಾಮನ್ ನಾಯರ್‌ನನ್ನು ಕೇಳಿದೆ.

'ಯಾವಾಗ ಮದುವೆ ?'

'ಯಾರ ಮದುವೆ ?'

'ನಿಮ್ಮದು. ಮದುವೆ ಮಾಡಿಕೊಳ್ತೀರಿಂತ ಕೇಳಿದೆ.'

ರಾಮನ್ ನಾಯರ್ ಊಟ ಪೂರ್ತಿಗೊಳಿಸದೆ ಎದ್ದು ಹೋದ. ತಿರುಗಿ ನೋಡದೆ ಗದ್ದೆಯ ಹುಣಿಯಲ್ಲಿ ವೇಗವಾಗಿ ನಡೆದು ಆತ ಮರೆಯಾದ.

ಮೂಕಿ ಹುಡುಗಿ ನಮ್ಮೊಂದಿಗೆಲ್ಲ ಆಡುವುದಕ್ಕೆ ಬರುತ್ತಿದ್ದಳು. ಅವಳಿಗೆ ಬೇರೊಂದು ಹೆಸರಿದ್ದುದಾಗಿ ನಮಗೆ ಗೊತ್ತಿಲ್ಲ. ಅವಳು ಯಾವತ್ತೂ 'ಬಾ ಬ್ಬಾ ಬ್ಬಾ' ಎಂದು ಹೇಳುತ್ತ ತನ್ನ ಅಂಗಿಯನ್ನೂ ಮುಂಡನ್ನೂ ಎಳೆಯುತ್ತಾ ಕಣ್ಣು ಉರುಳಿಸುತ್ತಿದ್ದಳು. ಅವಳಿಗೆ ಹೊಸ ಬಟ್ಟೆ ಬೇಕು ಎಂಬುದನ್ನು ಹೇಳಲು ಪ್ರಯತ್ನಿಸುತ್ತಿದ್ದಾಳೆ ಎಂದು ಅವಳ ಅಮ್ಮ ಹೇಳುತ್ತಿದ್ದಳು. ಅವಳಿಗೆ ಹೊಸ ಬಟ್ಟೆ ಕೊಟ್ಟರೆ ಅದನ್ನು ಆ ಕೂಡಲೆ ಸಂತೆಗೆ ಕೊಂಡು ಹೋಗಿ ಮಾರುವುದಕ್ಕೆ ಅವಳ ಅಮ್ಮ ಸಿದ್ಧಳಾಗಿರುತ್ತಿದ್ದಳು. ಒಂದೇ ಒಂದು ಅಂಗಿಯೂ ಮೂಕಿ ಹುಡುಗಿಗೆ ಸಿಗುತ್ತಿರಲಿಲ್ಲ. ಆದರೂ ಅವಳು ಯಾವತ್ತೂ ನಗುನಗುತ್ತಾ ಇದ್ದಳು. ಅವಳು ಓಡಿ ಆಡುವುದಕ್ಕೂ ಕುಂಟೋಬಿಲ್ಲೆ ಆಡುವುದಕ್ಕೂ ಜಾಣೆಯಾಗಿದ್ದಳು. ಅವಳನ್ನು ನಾನು ಮುಟ್ಟುವುದು ಅಜ್ಜಿಗೆ ಇಷ್ಟವಾಗುತ್ತಿರಲಿಲ್ಲ.

'ನಿನ್ನ ಮುಖದಲ್ಲೆಲ್ಲ ಆ ಮೂಕಿ ಹುಡುಗಿಯ ವಾಸ್ನೆ.' ಒಮ್ಮೆ ಅಜ್ಜಿ ಹೇಳಿದರು.

'ಅದೆಂಥ ವಾಸನೆ ?'

'ಮೀನಿನ ದುರ್ನಾತ. ಅವುಗಳು ಅದನ್ನೇ ಅಲ್ವೇ ತಿನ್ನೋದು.'

ಅಜ್ಜಿ ನನ್ನ ಮೈಗೆ ಲಿಂಡ ಸೋಪ್ನೋ ಟರ್ಕಿಷ್ ಬಾತ್‌ಸೋಪ್ನೋ ಹಾಕಿ ತಿಕ್ಕುತ್ತಿದ್ದರು. ಅವೆರಡೂ ಬೆಲೆ ಕಡಿಮೆಯ ಸಾಬೂನುಗಳಾಗಿದ್ದುವು. ಎಡೆಗೆ ಅಮ್ಮ ಕಲ್ಕತ್ತಾದಿಂದ ತಂದ ವಿನೋಲಿಯ ವೈಟ್ ರೋಸ್ ಸೋಪನ್ನೂ ನಾನು ಉಪಯೋಗಿಸುತ್ತಿದ್ದೆ. ಒಂದು ಸೋಪನ್ನು ಎರಡು ಭಾಗ ಮಾಡಿಯೇ ಅಜ್ಜಿ ಸೋಪಿನ ಪಟ್ಟಿಗೆಯಲ್ಲಿ ಇಡುತ್ತಿದ್ದುದು. ಅದೊಂದು ರೀತಿಯ ಜಿಪುಣತನವಾಗಿತ್ತು. ನನ್ನ ಮೈಯನ್ನೂ ತಲೆಯನ್ನೂ ಒರೆಸಿಯಾದ ಮೇಲೆ ಆ ಒದ್ದೆಯಾದ ಟವೆಲನ್ನು ನೀರಿನಲ್ಲಿ ಅದ್ದಿ ಹಿಂಡಿ ಅಜ್ಜಿ ಉಪಯೋಗಿಸುತ್ತಿದ್ದರು.

ಧರ್ಮಾನಂದನ್ ಎಂಬ ಸನ್ಯಾಸಿ ಶ್ಲೋಕಗಳನ್ನು ಹೇಳುತ್ತಾ ಬೇಲಿ ಹಾಯ್ದುಕೊಂಡು ಅಂಗಳಕ್ಕೆ ಬರುತ್ತಿದ್ದ. ಗೇಟಿನ ಮೂಲಕ ಬರುವಷ್ಟು ಧೈರ್ಯ ಆತನಿಗಿರಲಿಲ್ಲ. ಮಾವನಿಗೆ ಸನ್ಯಾಸಿಗಳ ಬಗ್ಗೆ ತಿರಸ್ಕಾರವಿತ್ತು. ಧರ್ಮಾನಂದನ್ ಆಶುಕವಿತೆಗಳನ್ನು ರಚಿಸುತ್ತಿದ್ದ. ಒಮ್ಮೆ ಪುನ್ನಯೂರ್‌ಕುಳದ ಹತ್ತಿರ ವಾಸಿಸುತ್ತಿದ್ದ ವಿದೇಶೀಯನೊಬ್ಬನ ಹೆಂಡತಿಯನ್ನು ರೇಗಿಸುವುದಕ್ಕೆ ಹೋದಾಗ ಆಕೆ ಕೋಪಗೊಂಡು ಆತನ ಕೆನ್ನೆಗೆ ಒಂದೇಟು ಕೊಟ್ಟಿದ್ದರು. ಆಗ ಧರ್ಮಾನಂದನ್ ಗಟ್ಟಿಯಾಗಿ ಹೇಳಿದ:

'ಸಾಧು ಧರ್ಮಾನಂದನ್ ತನ್ನ ಕೆನ್ನೆಯಲ್ಲಿ
ಸಾಧಿಸಿ ಬಿಟ್ಟನಲ್ಲಾ ನಿನ್ನ ಕಾಮಧರ್ಮ.'

ಆ ಸಾಲುಗಳನ್ನು ಬಾಯಿಪಾಠ ಮಾಡಿ ನಾನು ಹೇಳಿದಾಗ ಅಜ್ಜಿ ಗದರಿಸಿದರು.

'ಆತ ಇಂಥ ಅಧಿಕ ಪ್ರಸಂಗೀಂತ ಗೊತ್ತಿರಲಿಲ್ಲ. ಇನ್ನಿಲ್ಲಿಗೆ ಬರ್ಲಿಕ್ಕೆ ಬಿಡ್ಬಾರ್ದು' ಅಜ್ಜಿ ಕೆಲಸದವರಿಗೆ ಹೇಳಿದರು.

'ಬೆಕ್ಕು ಸನ್ಯಾಸಿಗಳನ್ನು ಮನೆಯೊಳಕ್ಕೆ ಹತ್ತಿಸಬಾರ್ದು' ಅಡುಗೆಯಾತ ಸಾಂಬಾರು ಮಾಡುತ್ತಿದ್ದಲ್ಲಿಂದ ಹೇಳಿದ.

ನಮ್ಮ ಕುಟುಂಬದವರೊಂದಿಗೆ ದೂರದ ಸಂಬಂಧವಿದ್ದ ಓರ್ವ ಯುವತಿ ಒಬ್ಬ ಅಕ್ಕಸಾಲಿಗನನ್ನು ಪ್ರೀತಿಸಿ ಆತನೊಂದಿಗೆ ಕದ್ದೋಡಿದ್ದಳು. ಒಂದು ಅಸಾಮಾನ್ಯವಾದ ಕದ್ದೋಟವಾಗಿತ್ತದು. ತನ್ನ ತಾಯಿಯನ್ನೂ ಆಕೆ ಜೊತೆಗೆ ಕೊಂಡು ಹೋಗಿದ್ದಳು. ಆಮೇಲೆ ಕಷ್ಟ ಪರಂಪರೆ ಹೆಚ್ಚಿದಾಗ ಅಮ್ಮನನ್ನು ಮನೆಯಿಂದ ಹೊರಕ್ಕಟ್ಟಿದ್ದಳು. ಅಮ್ಮ ಆ ಹೊತ್ತಿಗೆ ಕುರುಡಿಯಾಗಿ ಬಿಟ್ಟಿದ್ದಳು. ಆಕೆ ಬಸ್ ಸ್ಟ್ಯಾಂಡಿಗೆ ಬಂದು ಭಿಕ್ಷೆ ಬೇಡುವುದಕ್ಕೆ ಕಲಿತಿದ್ದಳು. ಅಲ್ಲಿಂದ ಅಮ್ಮ ಹಾಗೂ ಚಿಕ್ಕಮ್ಮ ಅವರನ್ನು ಕಂಡು ಹಿಡಿದು ಕರೆತಂದರು.

'ಇನ್ನು ಉಣ್ಣಿಮಾಯಮ್ಮ ಎಲ್ಲಿಗೂ ಹೋಗ್ಬೇಡಿ. ನಾಲಪ್ಪಾಟ್ಟಿನಲ್ಲೇ ಇರಿ ಆಯ್ತಾ?' ಪಶ್ಚಿಮದ ಕೋಣೆಯಲ್ಲಿ ಉಣ್ಣಿಮಾಯಮ್ಮಯನ್ನು ಪ್ರತಿಷ್ಠಾಪಿಸಿ ಅಮ್ಮ ಕಲ್ಕತ್ತೆಗೆ ಹೋದರು. ಉಣ್ಣಿಮಾಯಮ್ಮ ಮುಪ್ಪಿನಿಂದ, ಉಪವಾಸದಿಂದ

ಒಣಗಿಹೋಗಿದ್ದರು. ಅವರ ಕಣ್ಣುಗಳಲ್ಲಿ ಬಿಳಿಯ ಗೋಲಿಗಳ ಹಾಗಿದ್ದ ಕಣ್ಣುಗೊಂಬೆಗಳು ಕಾಣಿಸುತ್ತಿದ್ದವು. ಅವರು ಗೋಡೆಗಳನ್ನು ತಡವಿಕೊಂಡು ಬಡಗು ಮೂಲೆಗೆ ಬಂದು ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಮೂರು ಹೊತ್ತು ಊಟ ಬಡಿಸಿಕೊಡುವ ಕೆಲಸದವರೂ ಅವರೊಂದಿಗೆ ಮಾತನಾಡುವ ಆಸಕ್ತಿ ತೋರುತ್ತಿರಲಿಲ್ಲ. ಆದ್ದರಿಂದಲೇ ಇರಬೇಕು, ತನಗೆ ತಾನೇ ಮಾತನಾಡಲಿಕ್ಕೆ ತೊಡಗಿದ್ದು. ಮೊದಮೊದಲು ಬರಿಯ ಗೊಣಗಾಟವಾಗಿತ್ತದು, ಅವರ ಮನಸ್ಸಿನೊಳಗೆ. ಮತ್ತದು ಗಟ್ಟಿಯಾದ ಬೈಗುಳದ ಮಳೆಯಾಗಿ ಪರಿಣಮಿಸಿತು.

'ಆಕೋ ಶುರು ಮಾಡಿದ್ಲು, ಆ ಮುದ್ಕಿ ಮತ್ತೂ ಅಲ್ಲಿಂದ, ಗಂಟ್ಲು ಬಿರಿಯೋದಕ್ಕೆ. ಬಾಕಿದ್ದೋರಿಗೊಮ್ಮೆ ಕಣ್ಣು ಮುಚ್ಚಿ ಮಲಗ್ಲಿಕ್ಕೂ ಕೂಡ್ದಾಗಾಯ್ತಲ್ಲ ದೇವ್ರೆ.' ಕೆಲಸದವಳು ಬಡಗು ಮೂಲೆಯಲ್ಲಿ ನಿಂತು ಎಡೆಗೆಡೆಗೆ ಗೊಣಗುತ್ತಿದ್ದಳು.

'ಭಿಕ್ಷೆ ಬೇಡ್ತಿದ್ಲು! ಬಾಲಾಮಣ್ಯಮ್ಮೆಯೂ ಅಮ್ಮಿಣ್ಯಮ್ಮೆಯೂ ಸೇರಿ ಎತ್ತಿಕೊಂಡು ತಂದದ್ದು.' ಅಡುಗೆಯವ ಎಲ್ಲರೂ ಕೇಳಲಿ ಎಂಬ ಮಟ್ಟಿನಲ್ಲಿ ಚಾವಡಿಯಲ್ಲಿ ನಿಂತು ಕೂಗಿ ಹೇಳಿದ.

'ಇಲ್ಲಿಯ ಯಾರೋ ಒಬ್ಬ ಮಾವ ಹಿಂದ್ಯಾವತ್ತೋ ಈ ಮುದ್ಕೀ ಮನೇಂದ ಮದ್ವೆ ಮಾಡಿದ್ರಂತೆ. ಸಂಬಂಧಲ್ವೆ ?'

'ಸಂಬಂಧ! ನಂಗೀ ಮುದ್ಕಿಯ ಮಾತು ಕೇಳಿದ್ರೆ ಹೆಬ್ಬೆರಳು ದಡ್ಡುಗಟ್ತದೆ... ನನ್ನನ್ನು ಬೇಡದ್ದೇನಾದ್ರೂ ಹೇಳಿದ್ರೆ ಸರೀ ಕೊಟ್ಟೇನು. ನಂಗ್ಯಾರ್ದೂ ಹೆದ್ರಿಕಿಲ್ಲ.'

ಉಣ್ಣಿಮಾಯಮ್ಮ ಒಮ್ಮೊಮ್ಮೆ ನನ್ನ ಕಾಲಿನ ಶಬ್ದ ಕೇಳಿದ ಕೂಡಲೆ 'ಮಗೂ ಈ ಕಡೆ ಬರ್ತೀಯಾ ?' 'ನನ್ನ ಮಡ್ಲಲ್ಲಿ ಕೂರ್ತೀಯಾ ? ಮಗೂಗೆ ಮೂಕಿ ಮಡಂದಿಯ ಕತೆ ಕೇಳ್ಬೇಕಾ ?' ಎಂದು ಕೇಳುತ್ತಿದ್ದರು. ಅವರ ಹತ್ತಿರ ಕೂತರೆ ಕೂಡಲೆ ಉದ್ದನೆಯ ಉಗುರುಗಳುಳ್ಳ ಆ ಕೈಬೆರಳುಗಳು ನನ್ನ ಶರೀರವನ್ನಿಡೀ ತಡಕಾಡುವುದು. ಹಲ ದಿಕ್ಕಿನಲ್ಲಿ ಗೀರು ಬಿದ್ದಾಗ ನಾನು ಎದ್ದು ಬಿಡುತ್ತಿದ್ದೆ.

'ಮಗೂಗೆ ಮೂಕಿಮಡಂದಿಯ ಕತೆ ಕೇಳ್ಬೇಡ್ವೆ ?' ಉಣ್ಣಿಮಾಯಮ್ಮ ಕೇಳುವಳು.

'ಬಡಗು ಮೂಲೇಲಿ ನಿಂತು ಕೇಳ್ತೇನೆ' ನಾನು ಹೇಳುತ್ತಿದ್ದೆ.

ಮೂಕಿಮಡಂದಿಯಿಂದ ಮಾತು ಹೊರಡಿಸಿದ ರಾಜಕುಮಾರನ ಕತೆಯನ್ನು ಉಣ್ಣಿಮಾಯಮ್ಮ ವಿವರಿಸುವುದನ್ನು ನಾನೆಷ್ಟೋ ಸಲ ಬೇಸರವಿಲ್ಲದೆ ಕೇಳಿ ಆನಂದಿಸಿದ್ದೆ.

ಬೆಳ್ಳಂಬೆಳಗುವ ಶರೀರ. ಎಡಕ್ಕೆ ಪೇರಿಸಿಟ್ಟ ಕೂದಲ ಗಂಟು. ತೊಂಡೆ ಹಣ್ಣಿನಂಥ ತುಟಿ. ನೋಡೋದಕ್ಕೆ ಕಾಮದೇವನೆ. ನೋಡ್ಲಿಕ್ಕೆ ಮಗೂನ ದೊಡ್ಡ ಮಾವನಾಗ ಇರ್ಬೋದು.'

ಮೂಕಿಮಡಂದಿಯ ಗಂಡನಿಗೆ ಮಾವನ ಆಕಾರ ಎಂಬುದಾಗಿ ನಾನು ಅತ್ತೆಗೆ ಹೇಳಿದೆ.

'ಯಾರಿದು ಹೇಳಿದ್ದು' ಅವರು ನಗುತ್ತ ಕೇಳಿದರು.

'ಉಣ್ಣಿಮಾಯಮ್ಮ'

ಮರುದಿವಸ ಅತ್ತೆ ಆ ಮುದುಕಿಗೆ ಒಂದು ಕಟ್ಟು ವೀಳ್ಯದೆಲೆ, ಸ್ವಲ್ಪ ಹೊಗೆಸೊಪ್ಪು

ಉಡುಗೊರೆ ಕೊಟ್ಟರು. ಅಂದಿನಿಂದ ಉಣ್ಣಿಮಾಯಮ್ಮ ಅತ್ತೆಯ ಸೌಂದರ್ಯವನ್ನೂ ಹೊಗಳುತ್ತಿದ್ದರು.

'ಉಣ್ಣಿಮಾಯಮ್ಮಗೆ ಕಣ್ಣು ಕಾಣೋದಿಲ್ವಲ್ಲಾ? ಮತ್ತೆ ಹೇಗೆ ಅವರ ಬಗ್ಗೆಲ್ಲ ಹೀಗೆ ವಿವರಿಸೋದು?' ನಾನು ಕೇಳಿದೆ.

'ನಾನು ಹುಟ್ಟು ಕುರುಡಿಯಲ್ಲ ಮಗೂ. ನಾನು ಇಲ್ಲಿರೋರ್ನೆಲ್ಲ ನೋಡಿದ್ದೇನೆ. ಈ ಅತ್ತೆಗಿಂತ ಮೊದಲಿದ್ದ ಅತ್ತೇನ್ನೂ ನಾನ್ನೋಡಿದ್ದೇನೆ. ಅಂಬಾಳತ್ತಿನ ಚಿನ್ನಮ್ಮ ನೋಡೋದಿಕ್ಕೆ ನಾಲ್ಕು ಕಣ್ಣು ಬೇಕು. ಕೂದಲು ಬಿಡಿಸಿದ್ರೆ ಹಿಂಗಾಲು ಮುಟ್ಟೀತು ಮಗೂ. ಸಾಕ್ಷಾತ್ ಲಕ್ಷ್ಮೀದೇವಿ! ಹತ್ತು ತಿಂಗಳು ಒಟ್ಟಿಗಿರ್ಲಿಕ್ಕೆ ಯೋಗ ಇರ್ಲಿಲ್ಲ. ರಕ್ತ ಹೋಗೋದು. ಒಂದ್ಬೈವತ್ತು ಮುಂಡು ಪೇರ್ಸಿಟ್ರೂ ರಕ್ತ ಹರೀತಿತ್ತು. ಕೋಣೇಲಿಡೀ ರಕ್ತ.'

'ಏನಾಗಿತ್ತು?'

'ಅದೆಲ್ಲ ಮಗೂನತ್ರ ಹೇಳೋದು ಹೇಗೆ? ಎಂಟು ತಿಂಗಳ ಗರ್ಭಿಣಿಯಾಗಿದ್ಳು. ಒಮ್ಮೆ ನೋಡಿದ್ರೆ ಮರೀಲಿಕ್ಕಿಲ್ಲಾಯ್ತಾ.'

ಮೊದಲಿದ್ದ ಅತ್ತೆಯ ದುರಂತವನ್ನು ಕುರಿತು ನಾನು ಅಜ್ಜಿಯನ್ನು ವಿಚಾರಿಸಿದಾಗ ಅವರಿಗೆ ಸಿಟ್ಟು ಬಂತು.

'ಇದ್ನೆಲ್ಲ ಹೇಳಿದ್ಯಾರು?'

'ಉಣ್ಣಿಮಾಯಮ್ಮ.'

'ಮಕ್ಳನ್ನು ಹೆದ್ರಿಸೋದೂಂತ? ಇಂದೆಂಥ ಅಧಿಕ ಪ್ರಸಂಗ!' ಉಣ್ಣಿಮಾಯಮ್ಮೆಯ ಹತ್ತಿರ ಹೆಚ್ಚು ಹೊತ್ತು ಕುಳಿತುಕೊಳ್ಳುವುದು ತನಗಿಷ್ಟವಾಗುವುದಿಲ್ಲ ಎಂದು ಅಜ್ಜಿ ಹೇಳಿದರು. ಕತೆ ಕೇಳಬೇಕಿದ್ದರೆ ಮುತ್ತಜ್ಜಿಯ ಹತ್ತಿರ ಹೋಗಿ ಕೂತರೆ ಸಾಕಲ್ಲ. ವಿಕ್ರಮಾದಿತ್ಯನದ್ದೂ ಬೇತಾಳದ್ದೂ ಕತೆಗಳು ಮುತ್ತಜ್ಜಿಗೆ ಗೊತ್ತಿತ್ತು.

ನಾಲಪ್ಪಾಟ್ಟಿನ ಎಲ್ಲ ಹೆಂಗಸರೂ ಏಕಾದಶಿ ವ್ರತ ಹಿಡಿಯುತ್ತಿದ್ದರು. ಅಲ್ಲಿದ್ದಾಗಲೆಲ್ಲ ನಾನೂ ಅವರೊಂದಿಗೆ ಗೋದಿ ಅನ್ನ, ಸಾಮಕ್ಕಿ ಗಂಜಿ, ಪಚ್ಚೆ ಹೆಸರು ಬೇಯಿಸಿದ್ದು ತಿನ್ನುತ್ತಿದ್ದೆ. ಉಣ್ಣಿಮಾಯಮ್ಮೆಯೂ ಏಕಾದಶಿ ವ್ರತ ಹಿಡಿಯುತ್ತಿದ್ದರು.

'ಏಕಾದಶಿ ಹಿಡ್ದು ದ್ವಾದಶಿ ಮಿಂದು ತೀರ್ಥ ತಕ್ಕೊಂಡ್ರೆ ಎಲ್ಲ ಪಾಪವೂ ಪರಿಹಾರಾಗ್ತದೆ. ಅದು ಗೊತ್ತುಂಟೊ ಮಗೂ?' ಉಣ್ಣಿಮಾಯಮ್ಮ ಕೇಳಿದರು.

'ನಂಗೆ ಗೊತ್ತಿರ್ಲಿಲ್ಲ' ನಾನು ಹೇಳಿದೆ.

'ಶ್ರೀ ಪರಮೇಶ್ವರನೂ ಪಾರ್ವತಿಯೂ ಸೇರಿ ಪ್ರತ್ಯಕ್ಷರಾಗ್ತಾರೆ. ಮನಸ್ಸಿಟ್ಟು ಪ್ರಾರ್ಥಿಸ್ಬೇಕು' ಉಣ್ಣಿಮಾಯಮ್ಮ ಹೇಳಿದರು.

'ನೀವು ಪರಮೇಶ್ವರನನ್ನೂ ಪಾರ್ವತೀನ್ನೂ ಕಂಡಿದ್ದೀರಾ?'

'ನಾನೆಷ್ಟು ಸಲ ಕಂಡಿದ್ದೇನೆ..... ಮಗೂ. ನಾನೊಬ್ಬ ಭಕ್ತೆ ಮಗೂ. ಒಂದೇ ಒಂದು ಏಕಾದಶಿ ಹಿಡೀದೆ ಇರ್ಲಿಲ್ಲ. ಹೆತ್ತ ಹೊಲೆಯಲ್ಲೂ ನಾನು ಹಿಡ್ದಿದ್ದೇನೆ ಮಗೂ. ದ್ವಾದಶಿಗೆ ಸ್ವಲ್ಪ ತುಳ್ಸಿ ಹಾಕಿದ ನೀರು ಕುಡೀತಿದ್ದೆ. ಇಲ್ಲಿಯೋರ ಹಾಗೆ

ಗೋದಿ, ಸಾಮೆ ತಿಂದು ನಾನು ಏಕಾದಶಿ ಹಿಡೀತಿರ್ಲಿಲ್ಲ ಮಗೂ. ನಂಗೆ ಶುದ್ಧೋಪವಾಸ. ಜಲಪಾನ ಕೂಡ ಇಲ್ಲ. ಅದಕ್ಕಲ್ವೆ ನನ್ನ ಮೈ ಹೀಗೆ ಬತ್ತಿದ್ದು.'

'ನಿನ್ನೆ ಏಕಾದಶಿಗೆ ಉಣ್ಣಿಮಾಯಮ್ಮ ಯಾಕೆ ಗೋದಿ ಅನ್ನ ಉಂಡದ್ದು ?'

'ಉಣ್ಣಬಾರ್ದಾಗಿತ್ತು. ಇಲ್ಲಿದ್ದೋರಿಗೆ ಬೇಸರಾಗ್ತದೇಂತ ಉಂಡೆ. ನಂಗೆ ಶುದ್ಧೋಪವಾಸವೇ ಇಷ್ಟ. ವ್ರತಾಂದ್ರೆ ಅದ್ಕೆ ಕೆಲ ನೀತಿ ನಿಯಮ ಇದೆ ಆಯ್ತಾ. ಏಕಾದಶಿ ಹಿಡಿಯೋದು ಅಷ್ಟು ಸುಲಭೇನೂ ಅಲ್ಲ.'

ಎಲ್ಲಾ ಸೋಮವಾರವೂ ಉಪವಾಸ ಮಾಡಿ ದೇವಸ್ಥಾನಕ್ಕೆ ಹೋಗಿ ಶಿವನನ್ನು ಪ್ರಾರ್ಥಿಸಿದರೆ ನಂಗೆ ಒಳ್ಳೆಯ ಗಂಡ ಸಿಗುತ್ತಾನೆಂದು ಉಣ್ಣಿಮಾಯಮ್ಮ ಹೇಳಿದರು.

'ಒಳ್ಳೆಯ ಗಂಡ ಅಂದ್ರೆ ಯಾರು ?' ನಾನು ಅಜ್ಜಿಯನ್ನು ಕೇಳಿದೆ.

'ನೀನೆಂತಕೆ ಹೀಗೆಲ್ಲ ಕೇಳೋದು ?'

'ಉಣ್ಣಿಮಾಯಮ್ಮ ಹೇಳಿದರು, ನಾನು ಸೋಮವಾರ ಉಪವಾಸ ಮಾಡಿದರೆ ನಂಗೆ ಒಳ್ಳೆಯ ಗಂಡ ಸಿಕ್ತಾನೇಂತ.'

'ನೀನೀಗ ಅದೆಲ್ಲ ಆಲೋಚಿಸ್ಬೇಡ. ಮಕ್ಳಾಗಿರೋವಾಗ ಮದುವೇ ಬಗ್ಗೆಲ್ಲ ಆಲೋಚಿಸ್ಲಿಕ್ಕಿಲ್ಲ. ಉಪವಾಸ ಮಾಡಿದ್ರೂ ಮಾಡದಿದ್ರೂ ಸಮಯ ಬಂದಾಗ ನಿಂಗೆ ಒಳ್ಳೇ ಗಂಡ ಸಿಕ್ಕೇ ಸಿಕ್ತಾನೆ.'

ಒಂದು ರಾತ್ರಿ ಅಜ್ಜಿ ನನ್ನನ್ನು ನಿದ್ರೆಯಿಂದ ಎಬ್ಬಿಸಿದರು. ಕೋಣೆಯಲ್ಲಿ ಹೊಗೆ ತುಂಬಿತ್ತು. ಬಡಗು ಕಿಟಕಿಯ ಮೂಲಕ ಅಡುಗೆ ಮನೆಯ ಮೇಲ್ಭಾಗ ಹೊತ್ತುವುದನ್ನು ಕಂಡೆ. ನಾವು 'ಬೆಂಕಿ, ಬೆಂಕಿ' ಎಂದು ಕೂಗಿಕೊಳ್ಳುತ್ತಾ ಕೆಳಗಡೆಗೆ ಓಡಿದೆವು. ಎಲ್ಲರೂ ಸೇರಿ ಕ್ಷಿಪ್ರವಾಗಿ ಅಂಗಳಕ್ಕೆ ಬಂದು ನಿಂತೆವು. ನೆರೆಕರೆಯವರೂ ಕೆಲಸದವರೂ ಹ್ಯೊಯ್ಗೆ, ನೀರು, ತುಂಡರಿಸಿದ ಬಾಳೆಗಳಿಂದ ಬೆಂಕಿ ನಂದಿಸುವುದಕ್ಕೆ ಪ್ರಯತ್ನಿಸುತ್ತಿದ್ದರು. ಸಾವಿರ ದಳಗಳಿರುವ ಒಂದದ್ಭುತ ಪುಷ್ಪದಂತೆ ಅಗ್ನಿ ಪ್ರಜ್ವಲಿಸಿತು. ಬೆಂಕಿ ನಂದಿಸಿದ ಬಳಿಕ ನಾವು ಮತ್ತೆ ಒಳಗೆ ಬಂದಾಗ ಪಶ್ಚಿಮದ ಕೋಣೆಯಿಂದ ಉಣ್ಣಿಮಾಯಮ್ಮ ನಮ್ಮನ್ನು ಬೈಯ್ಯತೊಡಗಿದ್ದರು.

'ನನ್ನ ಬಗ್ಗೆ ಯಾರಿಗೂ ನೆಂಪಿರಲಿಕ್ಕಿಲ್ಲ ಅಲ್ವೆ ? ನನ್ನನು ಸಾಯ್ಲಿಕ್ಕೆ ಬಿಟ್ಟು ಎಲ್ರೂ ಸೇರಿ ಓಡಿ ತಪ್ಪಿಸಿಕೊಂಡ್ರಿ. ನಾನು ಗತಿಗೆಟ್ಟವಳಾಗಿ ಬಿಟ್ನಲ್ಲಾ ? ಅಲ್ದಿದ್ರೂ ನೀವ್ಯಾರೂ ನನ್ನ ಕುಟುಂಬದವರಲ್ವಲ್ಲ. ಇನ್ನು ನಾನಿಲ್ಲಿ ನಿಲ್ಲಿಕ್ಕಿಲ್ಲಾಯ್ತಾ. ನನ್ಮೇಲೆ ಪ್ರೀತಿಯಿಲ್ದೋರೊಟ್ಟಿಗೆ ನಾನ್ನಿಲ್ಲಿಕ್ಕಿಲ್ಲ. ನನ್ನನು ಕುನ್ನಂಕುಳಕ್ಕೆ ಕೊಂಡು ಹೋಗಿ ಬಿಟ್ಟು ಬಿಡಿ. ಇನ್ನು ನಾನಿಲ್ಲಿ ನಿಲ್ಲಿಕ್ಕಿಲ್ಲಾ.'

ಬೆಳಗಾದ ಮೇಲೆ ಕುನ್ನಂಕುಳದ ಬಂಧುಗಳ ಮನೆಗೆ ಕೊಂಡೊಯ್ದು ಬಿಡುತ್ತೇವೆಂದು ಅಜ್ಜಿ ಮುದುಕಿಯಲ್ಲಿ ಹೇಳಿದರು. ಬೆಳಿಗ್ಗೆ ಚಹಾ, ಇಡ್ಲಿಯೆಲ್ಲ ಸೇವಿಸಿ ಆದ ಮೇಲೆ ಅಜ್ಜಿ ಹೇಳಿದರು:

'ತಯಾರಾಗಿ. ಕುನ್ನಂಕುಳದಲ್ಲಿ ಮಕ್ಕತ್ರ ಕೊಂಡೋಗಿ ಬಿಡ್ತೇವೆ.' ಉಣ್ಣಿಮಾಯಮ್ಮ ಒಮ್ಮೆಲೆ ಒಂದು ಮೂಲೆಯಲ್ಲಿ ತನ್ನ ಶರೀರವನ್ನು ಹುದುಗಿಸಿ ಏದುಸಿರಿನೊಂದಿಗೆ ಅಳತೊಡಗಿದರು.

'ನಂಗ್ಯಾರೂ ಇಲ್ದೇ ಹೋಯ್ತಲ್ಲಾ ನನ್ನ ಗುರುವಾಯೂರಪ್ಪಾ, ನಂಗ್ಯಾರೂ ಇಲ್ವಲ್ಲಾ. ನನ್ನ ಎತ್ತಿ ಹೊರಗೆ ದಬ್ಬಿದ್ರೂ ಕೇಳ್ಳೋಕ್ಯಾರೂ ಇಲ್ವಲ್ಲಾ.'

'ನಾವ್ಯಾರೂ ನಿಮ್ಮತ್ರ ಹೋಗ್ಲಿಕ್ಕೆ ಹೇಳ್ಳಿಲ್ವಲ್ಲಾ?' ಅಜ್ಜಿ ನಗುತ್ತ ಹೇಳಿದರು.

ಅಂದು ಉಣ್ಣಿಮಾಯಮ್ಮ ಆವೇಶಭರಿತಳಂತೆ ಪದಾರ್ಥಕ್ಕೆ ಸೌತೆ, ಕುಂಬಳಕಾಯಿ ಕೊಯ್ಯುವ ಕೆಲಸದವರೊಂದಿಗೆ ಹೇಳಿದರು:

'ನನ್ನ ಸಾವು ಈ ನಾಲಪ್ಪಾಟ್ಟಿನಲ್ಲೇ ಆಗಲಿ. ನಾನು ಮತ್ತೆ ಎಲ್ಲಿಗೆ ಹೋಗಲಿ? ನಂಗಿಲ್ಲಿರೋರಲ್ದೆ ಸ್ವಂತದೋರೂಂತ ಯಾರಿಲ್ವಲ್ಲಾ. ನಂಗೆ ಇಲ್ಲಿದ್ದೋರನ್ನು ನೋಡ್ತಾ ಕಣ್ಣು ಮುಚ್ಬೇಕೂಂತ ಆಸೆ.'

ಆ ನಡುವೆಯೇ ಎಲಿಯಜಾಟ್ಟ್ ಶಾಲೆಯಲ್ಲಿ ಕಲಿಸುವುದಕ್ಕೆಂದು ಕಾಟ್ಟಾಂಬಾಲ್ ಎಂಬ ಗ್ರಾಮದಿಂದ ದೋಣಿ ಹತ್ತಿ ಓರ್ವ ಹೊಸ ಟೀಚರ್ ಬಂದು ತಲುಪಿದ್ದು. ಕಪ್ಪಾಗಿ ಸಪೂರದ ಆ ಹೆಂಗಸು ಮುಂಡು, ಮೇಲಂಗಿ, ಧರಿಸಿದ್ದರು. ಅಂಚಿಲ್ಲದ ಶಾಲಿನಿಂದ ಎದೆ ಮುಚ್ಚಿ, ಕೂದಲನ್ನು ಗಟ್ಟಿ ಕಟ್ಟಿ, ಕಂಕುಳಿನಲ್ಲಿ ಕೊಡೆಯೂ ಕೈಯಲ್ಲಿ ಅನ್ನದ ಪಾತ್ರೆಯೂ ಹಿಡಿದು ಎಲಚ್ಚಾರ್ ಟೀಚರ್ ಮೊದಲ ಸಲ ಬಂದು ತಲುಪಿದಾಗಲೆ ಆ ಕಪ್ಪಗಿನ ದ್ರಾಕ್ಷೆಯ ಕಣ್ಣುಗಳಲ್ಲಿ ಪ್ರತಿಫಲನಗೊಂಡ ಆಜ್ಞಾ ಶಕ್ತಿಯ ಮುಂದೆ ಶಿರಗಳು ಬಾಗಿದ್ದುವು. ಹೆಡ್‌ಮಾಸ್ತರೂ ಸ್ವರ ತಗ್ಗಿಸಿ ಶಿಷ್ಟಾಚಾರದ ಮಾತುಗಳನ್ನಾಡಿದರು. ಟೀಚರ್ ಮಾತನಾಡುವಾಗ ಅವರ ಗಂಜಿ ಪಸೆ ಹಾಕಿದಂತಿದ್ದ ಸ್ವರ ಹಲಸು ಕೊಯ್ದ ಕತ್ತಿಯ ಮಯಣದಲ್ಲಿ ಅಂಟಿ ನಿಂತಂತೆ ಅಂತರಿಕ್ಷದಲ್ಲಿ ಅಂಟಿ ನಿಂತುದಾಗಿ ನಮಗೆ ಭಾಸವಾಯಿತು. ಟೀಚರ್ ದೊಡ್ಡ ಮಕ್ಕಳಿಗೆ ಮಾತ್ರ ಇಂಗ್ಲೀಷ್ ಕಲಿಸುತ್ತಿದ್ದರು. ನಮ್ಮ ತರಗತಿಯ ಹತ್ತಿರದ್ದು ಏಳನೆಯ ತರಗತಿ. ಆ ಶಾಲೆಯ ದೊಡ್ಡ ಕ್ಲಾಸೆಂದರೆ ಅದೇ. ಅದರಲ್ಲಿ ಕಲಿಯುತ್ತಿದ್ದವರಲ್ಲಿ ಮುಖ್ಯರು ನಾಯಕನಾದ ಗೋವಿಂದ ಕುರುಪ್ಪ್, ಸುಂದರಿಯಾದ ಹೇಮಲತ ಮೊದಲಾದವರು. ಕಾಗದ ಸುರುಟಿ ಬಿಸಾಡದೆ, ಗೂಬೆಯ ಶಬ್ದ ಹೊರಡಿಸದೆ ಕುರುಪ್ಪ್, ಎಲಚ್ಚಾರ್ ಟೀಚರ ಭಾಷಣ ಆಲಿಸಿದ. ಇಂಗ್ಲಿಷೂ, ಮಲಯಾಳವೂ ಗಂಡ ಹೆಂಡತಿಯರಂತೆ ಒಂದೇ ಬುದ್ಧಿಯಿಂದ ಜೊತೆಯಾಗಿ ಬದುಕಬೇಕೆಂದೂ ಬ್ರಿಟಿಷರು ಇಂಡಿಯವನ್ನು ಬಿಟ್ಟು ಹೋಗಬೇಕೆಂಬ ಹಟ 'ಗಾಂಧಿಯ ಬಯಕೆ' ಮಾತ್ರವೆಂದೂ ಅದು ನಡೆಯುವ ಸಾಧ್ಯತೆಯಿಲ್ಲವೆಂದೂ ಟೀಚರ್ ಏಳನೆ ಕ್ಲಾಸಿನ ಮಕ್ಕಳಿಗೆ ಹೇಳಿದರು. ನಂಬಿಡಿ ಮಾಸ್ತರ್ ನಮಗೆ ಕೇಳಲಿಕ್ಕೋಸ್ಕರವಾಗಿ 'ಓಮನ ತಿಂಗಳ್ ಕಿಡಾವೊ' ಎಂಬ ಜೋಗುಳ ಹಾಡನ್ನು ಕುಂಜುಣ್ಣಿ ನಂಬೀಶನ್‌ರ ಮಗಳು ಊರ್ಮಿಳೆಯಿಂದ ಹಾಡಿಸುತ್ತಿದ್ದರು. ಮಲಯಾಳದ ಪಿರೇಡಿನಲ್ಲಿ ಆ ಜೋಗುಳದ ಪುನರಾವರ್ತನೆ ಆಗುತ್ತಿರುವುದು ಸಾಮಾನ್ಯವಾಗಿತ್ತು. ಜೋಗುಳ ಕೇಳುವಾಗಲೆಲ್ಲ ನಾನೂ ಬಾಕಿ ಮಕ್ಕಳೂ ನಿದ್ದೆ ಮಾಡುವುದೋ ನಿದ್ದೆ ತೂಗುವುದೋ ಮಾಡುತ್ತಿದ್ದೆವು. ಎಲಚ್ಚಾರ್ ಟೀಚರ ಮಾತುಗಳು ನನ್ನನ್ನು ಎಚ್ಚರಿಸುತ್ತಿದ್ದುದು ಮಾತ್ರವಲ್ಲ, ನನ್ನನ್ನು ಅಸ್ವಸ್ಥಳನ್ನಾಗಿಯೂ ಮಾಡುತ್ತಿದ್ದುವು. ಗಾಂಧೀಜಿಯ ಪ್ರಯತ್ನಗಳೆಲ್ಲ

ನಿಷ್ಫಲವಾದಲ್ಲಿ ಅಮ್ಮನೂ ಅಜ್ಜಿಯೂ ಚಿಕ್ಕಮ್ಮನೂ ತಮ್ಮ ತ್ಯಾಗಗಳ ಬಗ್ಗೆ ಪಶ್ಚಾತ್ತಾಪ ಪಡಬೇಕಾಗಿ ಬಂದೀತೋ ಎಂಬುದಾಗಿ ನಾನು ಹೆದರಿದೆ.

ಎಲಚ್ಚಾರ್ ಟೀಚರ್ ಬಿಳಿಯ ಬಟ್ಟೆಗಳನ್ನು ಮಾತ್ರ ಧರಿಸುತ್ತಿದ್ದರು. ಆದರೆ ಅವು ಮಕ್‌ಮಲ್ ವಸ್ತ್ರಗಳಾಗಿದ್ದುವು. ಖಾದಿಯ ಬಗ್ಗೆ ಅವರು ತುಸು ತಾತ್ಸಾರದಿಂದಲೇ ಮಾತಾಡುತ್ತಿದ್ದರು.

'ಮನೇಲಿ ಕೆಲಸದೋರಿರೋವ್ರಿಗೆ ಮಾತ್ರ ಖಾದಿ ಉಡ್ಲಿಕ್ಕೆ ಸಾಧ್ಯ. ದಿವ್ಸಾಗ್ಲೂ ಕಾದಿ ಅದ್ದಿ ಹಿಂಡಿ ಒಣಗಲು ಹಾಕ್ಲಿಕ್ಕೆ ನನಗೆಲ್ಲಿದೆ ಸಮಯ? ಸಮಯ ಸಿಕ್ಕಿದ್ರೂ ಅದಕ್ಕೆ ಅವಕಾಶವಿಲ್ಲ. ಖಾದಿಯೆಲ್ಲ ಹಣವಂತ್ರಿಗೇ ಆದೀತು' ಟೀಚರ್ ಹೇಳಿದರು.

ಕೇಳಿ ನಿಂತ ಕಾರ್ತ್ಯಾಯಿನಿ ಟೀಚರ್ ನಕ್ಕರು. ಅವರಿಗೂ ಖಾದಿಯ ಬಗ್ಗೆ ಯಾವ ಆಸಕ್ತಿಯೂ ಇರಲಿಲ್ಲ. ಹೆಡ್‌ಮಾಸ್ಟರ್ ಮಾತ್ರ ಖಾದಿಧಾರಿಯಾಗಿಯೇ ಇದ್ದರು. ಅವರು ಸಂದರ್ಭ ಸಿಕ್ಕಿದಾಗ ಚರಕ ತಿರುಗಿಸಿ ನೂಲು ನೂಲುತ್ತಿದ್ದರೆಂದು ನೆರೆಕರೆಯವರು ಹೇಳುತ್ತಿದ್ದರು.

ಟೀಚರ್‌ರ ಕಲಿಸುವಿಕೆಗೂ ಕೆಲವು ಪ್ರತ್ಯೇಕತೆಗಳಿದ್ದುವು.

'ನಾವ್ಯಾರೂ ಇಂಗ್ಲಿಷರಲ್ಲ. ಆದ್ದರಿಂದ ಎಲ್ಲ ಮಾತುಗಳನ್ನೂ ಇಂಗ್ಲಿಷಿಗೆ ಪರಿವರ್ತಿಸಿ ಮಾತನಾಡೋದು ನಮಗೆ ಸಾಧ್ಯವಿಲ್ಲ. ಕೆಲವೊಮ್ಮೆ ನಡುವೆ, ಕೊನೆಗೆ ಒಂದೊಂದು ಮಲಯಾಳ ಶಬ್ದವನ್ನೂ ಹೇಳಬೇಕಾಗಿ ಬರಬಹುದು. ಅದರಿಂದ ಯಾವ ತೊಂದರೆಯೂ ಇಲ್ಲ. ಓಟ್ಟಂತುಳ್ಳಲ್ ಟೇಕ್ಸ್ ಪ್ಲೇಸ್ ಇನ್ ದಿ ಟೆಂಪಲ್ ಎಂಬುದಾಗಿ ಹೇಳಿದರೆ ಏನೂ ಅಡ್ಡಿಯಿಲ್ಲ. ಅಲ್ಲದೆ ಓಟ್ಟಂತುಳ್ಳಲ್ ಎಂಬುದಾಗಿ ಹೇಳೋದಕ್ಕೆ ಬದಲಾಗಿ ರನ್ನಿಂಗ್ ಜಂಪಿಂಗ್ ಎಂಬುದಾಗಿ ಹೇಳಿದರೆ ಸರಿಯಾಗದು.'

'ಐ ವಾಸ್ ವಾಕಿಂಗ್ ಇನ್ ದಿ ಗುಂಡಿಬಿದ್ದ ಓಣಿ ವೆನ್ ದ ಎಲಿಫೆಂಟ್ ರಶ್‌ಡ್ ಎಟ್ ಮಿ' ಒಬ್ಬ ವಿದ್ಯಾರ್ಥಿ ಗಟ್ಟಿಯಾಗಿ ಹೇಳಿದ. ಮಕ್ಕಳೊಟ್ಟಿಗೆ ಟೀಚರೂ ನಕ್ಕರು. ಹಲ್ಲುಗಳನ್ನು ಪ್ರಕಟಪಡಿಸಲು ಮನಸ್ಸಿಲ್ಲದ ಒಂದು ಮಂದಹಾಸ. ಹಾಗೆ ಮುಗುಳ್ನಕ್ಕಾಗ ಟೀಚರ ಚಿಕ್ಕ ಮುಖ ಇನ್ನಷ್ಟು ಚಿಕ್ಕದಾದ ಹಾಗೆ ನನಗೆ ತೋರಿತು.

ಇಂಗ್ಲಿಷ್ ಮಾತ್ರವಲ್ಲದೆ ಅಲ್ಪ ಸ್ವಲ್ಪ ಹೊಲಿಗೆಯನ್ನೂ ಟೀಚರ್ ಕಲಿಸಿದರು. ಕರವಸ್ತ್ರದ ಬದಿಗಳನ್ನು ಹೊಲಿಯುವುದಕ್ಕೂ ಅದರ ಮೂಲೆಯಲ್ಲಿ ಗುಲಾಬಿ ಹೂಗಳನ್ನೂ ಗಿಳಿಗಳನ್ನೂ ಬಣ್ಣದ ನೂಲುಗಳಲ್ಲಿ ರಚಿಸುವುದಕ್ಕೂ ಅವರಿಗೆ ಗೊತ್ತಿತ್ತು. ಆ ವರ್ಷ ಪುನ್ನಯೂರ್‌ಕುಳದ ಯುವತಿಯರೆಲ್ಲ ರೇಷ್ಮೆಯ ಕರವಸ್ತ್ರಗಳನ್ನು ರವಿಕೆಯ ಒಳಗೂ ಸೊಂಟದಲ್ಲೂ ಸಿಕ್ಕಿಸತೊಡಗಿದರು. ಕೆಲವರು ಅದಕ್ಕೆ ಸೆಂಟು ಸಿಂಪಡಿಸಿ ಎಡದ ಕೈಯಲ್ಲಿ ಅಮರಿಸಿ ಹಿಡಿದುಕೊಂಡು ನಡೆದಾಡಿದರು. ಒಂದು ಮೂಲೆಯಲ್ಲಿ ಮಾತ್ರ ಗಿಳಿಯನ್ನು ಹೊಲಿದ ಒಂದು ರೇಷ್ಮೆ ಕರವಸ್ತ್ರವನ್ನು ನಾನು ಅಜ್ಜಿಗೆ ಉಡುಗೊರೆಯಾಗಿ ನೀಡಿದೆ.

ಗಿಳಿಗೆ ಕೊಕ್ಕಿರಲಿಲ್ಲ. ಕೊಕ್ಕು ಮಾಡುವುದಕ್ಕಿದ್ದ ಕೆಂಪು ನೂಲು ಕೊಂಡುಕೊಡುವುದಾಗಿ ಅಜ್ಜಿ ಹೇಳಿದ್ದರು. ಆದರೆ ಶಂಕರನ್ ಪೂಳಿಕಳ ಅಂಗಡಿಗೆ ಹೋಗುವಾಗಲೆಲ್ಲ ಅಜ್ಜಿ ನೂಲಿನ ಸಂಗತಿ ಹೇಳುವುದಕ್ಕೆ ಮರೆಯುತ್ತಿದ್ದರು. ಕೊನೆಗೆ ನಾನೇ ಆ ಗಿಳಿಗೆ ಕೊಂಬು ಬೇಡವೆಂಬುದಾಗಿ ತೀರ್ಮಾನಿಸಿದೆ.

ಅಜ್ಜಿ ಆ ಕರವಸ್ತ್ರದಲ್ಲಿ ಹಲವು ತಾಮ್ರದ ಮುಕ್ಕಾಲುಗಳನ್ನು ಅಡಕಗೊಳಿಸಿ ಕಟ್ಟಿಟ್ಟರು. ಹಂಟ್ಲಿ ಎಂಡ್ ಪಾಮರ್ ಎಂಬ ಕಂಪೆನಿಯವರ ಒಂದು ಬಿಸ್ಕತ್ತು ಪೆಟ್ಟಿಗೆಯಲ್ಲಿ ಅವರು ಅದನ್ನು ಜೋಪಾನವಾಗಿರಿಸಿದ್ದರು. ಅಜ್ಜಿಗೆ ಪ್ರೀತಿಯುಳ್ಳ ಭಿಕ್ಷುಕರು ಬಂದರೆ ಮಾತ್ರ ಒಬ್ಬೊಬ್ಬರಿಗೆ ಒಂದೊಂದು ಮುಕ್ಕಾಲಿನಂತೆ ತೆಗೆದು ಕೊಡುತ್ತಿದ್ದರು. ಭಿಕ್ಷುಕರಿಗೆ ಸಾಧಾರಣವಾಗಿ ಒಂದು ಸಣ್ಣ ಕುಡ್ತೆ ಅಕ್ಕಿ ಮಾತ್ರ ಅಜ್ಜಿ ಕೊಡುತ್ತಿದ್ದುದು. ಆದರೆ ಮಕ್ಕಳುಳ್ಳ ಅನೇಕ ಅಮ್ಮಂದಿರು ಬರುವಾಗ ಅಜ್ಜಿ ಅಕ್ಕಿ ಮಾತ್ರವಲ್ಲದೆ ತಲೆಗೆ ಹಚ್ಚುವುದಕ್ಕೆ ತೆಂಗಿನೆಣ್ಣೆಯನ್ನು, ಒಂದೋ ಎರಡೋ ನಾಣ್ಯಗಳನ್ನು ಕೊಡುತ್ತಿದ್ದರು. ತಲೆ ಕೂದಲಿನ ಒಳಗೆ ಒಂದು ಒಟ್ಟೆ ಗೆರಟೆ ಇಡುವ ಓರ್ವ ಯುವತಿಯ ಬಗ್ಗೆ ಅಜ್ಜಿಗೆ ಯಾವತ್ತೂ ಅನುಕಂಪವಿತ್ತು. ಅವಳ ಗಂಡ ಅವಳನ್ನು ಬಿಟ್ಟು ಎತ್ತಲೋ ಹೋಗಿ ಬಿಟ್ಟಿದ್ದ. ಅವಳಿಗೆ ಸೊಂಟದಲ್ಲಿ ಒಂದು ಮಗುವೂ ಕೈ ಹಿಡಿದು ನಡೆಯುವ ಇನ್ನೊಂದು ಮಗುವೂ ಇತ್ತು.

'ಕೃಷ್ಣಮ್ಮ ಗಂಡನ ಸುದ್ದಿ ಏನಾದ್ರೂ ಉಂಟೋ ?' ಅಜ್ಜಿ ಕೇಳಿದರು.

'ಇಲ್ಲಮ್ಮಾ ಸನಿ ಹಿಡ್ದವ ಸತ್ತೇ ಓಗಿರ್ಬೋದು' ಅವಳು ಗೊಣಗಿದಳು.

'ಅವ್ಳು ಅವ್ಳ ಗಂಡನಿಗೆ ವಿಷಕೊಟ್ಟು ಕೊಂದಿರ್ಬೋದು' ಎಂದು ಶಂಕರನ್ ನನ್ನತ್ರ ಹೇಳಿದ್ದ.

'ಅವಳೊಬ್ಳು ಭದ್ರಕಾಳಿ. ದೊಡ್ಡಮ್ಮೋರಿಗೆ ಅವಳದ್ದು ಗೊತ್ತಿಲ್ಲ. ನಿಮ್ಮ ಹಿತ್ತಾಳೆ ತಟ್ಟೆ ಬಾವಿ ಬದೀಂದ ಕೊಂಡೋದ್ಯಾರೂಂತ ಗೊತ್ತುಂಟ ಮಗೂ ?'

'ಕಾಗೆ ಕೊಂಡೋದ್ದು.'

'ಒಳ್ಳೆ ಕತೆ, ಕಾಗೆಯಂತೆ ಕಾಗೆ. ಕಾಗೆಗಳಿಗ್ಯಾಕೆ ಹಿತ್ತಾಳೆ ತಟ್ಟೆ. ಇದೇ ಹೆಂಗ್ಸು ಅದನ್ನೆತ್ತಿಕೊಂಡು ಓಡಿದ್ದು. ನಾನ್ನೋಡಿದ್ದೇನೇಂತ. ನಾ ಅಡ್ಗೆ ಮನೇಲ್ಲಿರೋವಾಗ ನೋಡಿದ್ಲೂಂತ. ನಾ ಹೊರ್ಗೆ ಬರ್ಬೇಕಿದ್ರೆ ಅವ್ಳದನ್ನು ತೆಕ್ಕೊಂಡು ಓಡಿಯೇ ಬಿಟ್ಟಿದ್ಲು. ಗಲೀಜು, ದೊಡ್ಡಮ್ಮ ಕೈಯೆತ್ತಿ ಕೊಟ್ರೂ ಅವುಗಳು ದುರ್ಬುದ್ಧಿ ತೋರಿಸ್ತಾವೆ.'

'ನಿಮ್ಗವಳನ್ನು ಹಿಡೀಬಹುದಾಗಿತ್ತಲ್ಲ ? ನನ್ನ ಪಾತ್ರೆ ಎಳ್ದು ತೆಗೀಬಹುದಾಗಿತ್ತಲ್ಲ ?' ನಾನು ಶಂಕರನನ್ನು ಕೇಳಿದೆ.

'ಮಗೂನ ಎಣ್ಣೆ ಪಾತ್ರೆ ಕೊಂಡೋದ್ರೆ ನಂಗೇನು ನಷ್ಟ ?' ಶಂಕರನ್ ಕಿವಿಯ ಹಿಂದೆ ಇರುಕಿಸಿಟ್ಟಿದ್ದ ಬೀಡಿ ತೆಗೆದು ಹೊತ್ತಿಸಿದ. ಆತನ ಬಲದ ಕಾಲು ಒಲೆಯ ದಿಣ್ಣೆಯ ಮೇಲಿತ್ತು. ಹೊತ್ತುವ ಬೀಡಿಯನ್ನು ತುಟಿಯಿಂದ ತೆಗೆದು ನನ್ನದುರಿಗೆ ಆತ ಚಾಚಿದ.

'ಇದು ನೋಡಿದ್ಯಾ. ಇದ್ರ ಮೇಲೆ ನನ್ ಜೀವ ನಿಂತಿರೋದು. ಅದು ಗೊತ್ತುಂಟಾ ? ಚಾದಲ್ಲಿ ಅನ್ನದಲ್ಲಿ ಗಂಜೀಲಿ ಏನಲ್ಲ. ಇದ್ರಲ್ಲಿ. ಒಂದಿಷ್ಟಕ್ಕೆ ಎರಡು ಕಟ್ಟ ಬೀಡಿ ಬೇಕು. ಅಲ್ದಿದ್ರ ನನ್ನ ಜೀವ ಹಾರ್ತದೆ. ನಿಮ್ಗೊತ್ತುಂಟೊ ಮಗೂ ?' ನಾನೇನೂ ಹೇಳಲಿಲ್ಲ.

'ಮಗೂ, ನಂಗೊಂದು ಕೈ ವಸ್ತ್ರ ಹೊಲ್ದು ಕೊಡ್ತಿಯಾ ? ಬದಿಯಲ್ಲಿ ಗಿಳಿ,

ಹೂವನ್ನೆಲ್ಲ ಹೊಲ್ದು? ನಂಗೆ ಬೀಡಿ ಕಟ್ಟಿಕೊಳ್ಳಿಕ್ಕೆ. ಮುಚ್ಚಿ ಕಿಸೇಲಿಟ್ರೆ ದೊಡ್ಡಮ್ಮ ಕಾಣ್ಲಿಕ್ಕಿಲ್ಲಲ್ಲ. ಹೊಲ್ದು ಕೊಡ್ತೀಯಾ ಮಗೂ?'

'ಇಲ್ಲ.'

'ನಿಮ್ಗೆ ನನ್ನ ಕಂಡ್ರೆ ಇಷ್ಟ ಇಲ್ಲ, ಅಲ್ವೆ? ನಿಮ್ಮನ್ನು ಬಿಟ್ರೇನೇ ನಂಗೀ ಮನೇಲಿ ಬಾಕಿದ್ದೋರೆಲ್ಲ. ಅದು ನಿಮ್ಗೊತ್ತುಂಟೊ?'

ನಾನು ನಗಾಡಿದೆ.

'ಈ ಮನೇಲಷ್ಟೇ ಅಲ್ಲ, ಈ ಊರ್ನಲ್ಲೂ ನಂಗಿಷ್ಟು ಇಷ್ಟದೋರು ನೀವಲ್ದೆ ಇನ್ಯಾರೂ ಇಲ್ಲ ಮಗು.'

'ನಾನು ಟೀಚರತ್ರ ಹೇಳ್ತೇನೆ ನಿಮಗೊಂದು ಕೈವಸ್ತ್ರ ಹೊಲ್ದುಕೊಡ್ಲಿಕ್ಕೆ'.

'ಅಯ್ಯೋ, ಟೀಚರತ್ರ ಬೇಡ. ದೊಡ್ಡಮ್ಮೋರಿಗೆ ಗೊತ್ತಾದ್ರೆ ಬೈದು ಕಣ್ಣು ಕಿತ್ತು ಬಿಡ್ತಾರೆ. ನೀವು ಹೊಲ್ದು ಕೊಟ್ರೆ ಸಾಕು.'

'ನನಗೆ ಕೈವಸ್ತ್ರ ಹೊಲೀಲಿಕ್ಕೆ ಸಮಯ ಸಿಗ್ಲಿಕ್ಕಿಲ್ಲ' ನಾನು ಶಂಕರನಿಗೆ ಹೇಳಿದೆ.

'ಎಲಿಯಜಾಟ್ಟ್ ಶಾಲೆಗೆ ಸೇರಿದ ಕೂಡ್ಲೆ ಮಗೂಗೆ ಜಂಭ ಜಾಸ್ತಿ ಆಯ್ತು. ನಿಮ್ಗೆ ಸಮಯ ಇಲ್ಲ ಅಲ್ವೆ? ನೀವೇನು ತುಕಡಿಯ ಬಿಳಿ ಸಾಯೇಬರೊ?'

ಶಂಕರನ್ ನನ್ನನ್ನು ಕಲಕ್ಟರ್ ಸಾಹೇಬನೆಂದು ಕರೆದನೆಂದು ನಾನು ಅಜ್ಜಿಯ ಹತ್ತಿರ ಹೇಳಿದಾಗ ಅವರು ಆತನನ್ನು ಶಿಕ್ಷಿಸುವುದರ ಬದಲಿಗೆ ಜೋರಾಗಿ ನಕ್ಕರು.

'ಶಂಕರ ಒಬ್ಬ ಬೋಳ. ಅವ ಹೇಳೋದನ್ನೆಲ್ಲ ದೊಡ್ಡ ಸಂಗ್ತಿ ಮಾಡ್ಬೇಡ' ಅಜ್ಜಿ ಹೇಳಿದರು.

ಎಲಬ್ಬಾರ್ ಟೀಚರ ಚಟುವಟಿಕೆಗಳನ್ನು ನಾನು ಅಜ್ಜಿಗೆ ವಿವರಿಸಿ ಹೇಳುತ್ತಿದ್ದೆ. ಟೀಚರ್ ಕ್ಲಾಸಿನಲ್ಲಿ ಮಾತನಾಡುತ್ತಿದ್ದ ಇಬ್ಬರು ಮಕ್ಕಳನ್ನು ಬೆಂಚಿನ ಮೇಲೆ ನಿಲ್ಲಿಸಿದ್ದರು. ವಿಮಾನ ನೋಡುವುದಕ್ಕೆ ಹೊರಗೋಡಿದ ಮಕ್ಕಳನ್ನು ಗೆಟೌಟ್ ಎಂಬುದಾಗಿ ಗರ್ಜಿಸುತ್ತ ಕ್ಲಾಸಿನಿಂದ ಹೊರಹಾಕಿದ್ದರು. ಕ್ಲಾಸಿಗೆ ಬೇಯಿಸಿದ ಕೋಳಿ ಮೊಟ್ಟೆ ತೆಗೆದುಕೊಂಡು ಬಂದ ಕುರುಪ್ಪಿನಿಂದ ನೆಲದಲ್ಲಿ ಬಿದ್ದಿದ್ದ ಸಿಪ್ಪೆ ಚೂರುಗಳನ್ನು ಹೆಕ್ಕಿಸಿದ್ದರು. ಎಲಬ್ಬಾರ್ ಟೀಚರ್ ಜನ್ಮತಃ ನಾಯಕಿಯಾಗಿದ್ದರು. ಬೆಳಗ್ಗೆ ಪ್ರಾರ್ಥನೆಗೆ ಹೋಗುವಾಗ ಅವರೇ ಎಲ್ಲರಿಗಿಂತ ಮುಂದೆ ನಡೆಯುತ್ತಿದ್ದರು. ಬಾಕಿಯಿದ್ದವರು ಅವರನ್ನು ಅನುಸರಿಸುತ್ತಿದ್ದರು. ಅವರ ಗಂಜಿ ಹಾಕಿದ ಬಟ್ಟೆ ಗಾಳಿಯ ಹೊಡೆತಕ್ಕೆ ತನ್ನನ್ನು ಸೋಂಕ ಬಾರದೆಂದು ನಂಬಿಡಿ ಮಾಸ್ಟರು ಒಂದು ಮಾರು ದೂರದಲ್ಲಿ ನಡೆಯಲು ಪ್ರಯತ್ನಿಸುತ್ತಿದ್ದರು. ಅವರು 'ಶುದ್ಧಿ'ಯಲ್ಲಿ ನಂಬಿಕೆಯಿಟ್ಟವರು. ಬೆಳಗ್ಗೆ ಎಲಿಯಜಾಟ್ಟಿನ ಕೊಳದಲ್ಲಿ ಸ್ನಾನ ಮಾಡಿ, ದೇಗುಲದರ್ಶನ ಮಾಡಿ, ಹಣೆಯಲ್ಲಿ ಗಂಧವನ್ನೂ ಕುಂಕುಮವನ್ನೂ ಧರಿಸಿ ಬರುತ್ತಿದ್ದರು. ಅವರ ಸ್ವರಕ್ಕೂ ಇತ್ತು ಬಡಕಲುತನ. ನಡೆಯುವಿಕೆಯಲ್ಲಿ ಪ್ರಕಟಗೊಳ್ಳುತ್ತಿದ್ದ ವಿನಯ ಅವರ ಸ್ವರವನ್ನೂ ದುರ್ಬಲಗೊಳಿಸಿತ್ತು.

ಉಚ್ಚಾರಣೆ ಶುದ್ಧಿಯಿಲ್ಲದ ನನ್ನ ಭಾಷೆ ನಂಬಿಡಿಮಾಸ್ಟರಿಗೆ ತಲೆನೋವುಂಟಾಮಾಡಿತು.

'ನೀನು ನಾಲಗೆ ತೊಳೆಯೋದಿಲ್ವೆ? ಅವರು ಕೇಳಿದರು.

ನಾನೇನೂ ಹೇಳಲಿಲ್ಲ. ಕ್ಲಾಸಿನ ಮಕ್ಕಳೆಲ್ಲ ನನ್ನನ್ನು ನೋಡಿ ನಕ್ಕ ಹಾಗೆ ನನಗೆ ಭಾಸವಾಯಿತು.

'ಕಲ್ಕತ್ತೆಯ ಜನಗಳ್ಯಾರೂ ನಾಲಗೆ ತೊಳೆಯೋದಿಲ್ಲಾಂತ ಶಪಥ ಮಾಡಿದ್ದಾರೆಯೆ ?'

ಪಾರಿಜಾತದ ಹೂಗಳು ಮಣ್ಣಿಗೆ ಬೀಳುವಾಗ ಎಂಬಂತೆ ಹೆಚ್ಚುಕಡಿಮೆ ಶಬ್ದವಿಲ್ಲದೆಯೆ ನಂಬಿಡಿ ಮಾಸ್ಟರ್ ಕುಲುಕುತ್ತ ನಕ್ಕರು. ಅವರ ನಗೆಯನ್ನು ನಾವು ಕೇಳಲಿಲ್ಲ. ಆದರೆ ಬಾಯಿಯ ಅಗಲವೂ ಹೆಗಲಿನ ಅಲುಗಾಟವೂ ಕಂಡಾಗ ಮಾಸ್ಟರ್ ನಗುತ್ತಿದ್ದಾರೆಂದು ತಿಳಿದು ಬಂತು.

'ಒಂದು ಹಿಡಿಸೂಡಿ ಕಡ್ಡಿ ತೆಗೆದು ಮಧ್ಯದಲ್ಲಿ ಸೀಳ್ಬೇಕು. ಆಮೇಲೆ ನಾಲಗೆ ಹೊರಹಾಕಿ ಐದಾರು ಸಲ ತೊಳೀಬೇಕು. ಆಗ ನಿಂಗೆ ಉಚ್ಚಾರಣ ಶುದ್ಧಿ ಸಿಕ್ಕೀತು. ಮಲಯಾಳವೂ ಸಂಸ್ಕೃತವೂ ಮ್ಲೇಚ್ಛರ ಭಾಷೆಯಲ್ಲಮ್ಮಾ. ಮೈಲಿಗೆಯಿಲ್ಲದ ಶುದ್ಧ ನಾಲಗೆಗೆ ಮಾತ್ರ ಈ ಭಾಷೆ ಬಳಸ್ಲಿಕ್ಕೆ ಆದೀತು' ಮಾಸ್ಟರ್ ಹೇಳಿದರು.

ಇಂಗ್ಲೀಷ್ ಮಾತಾಡ್ಲಿಕ್ಕೆ ತಿಳಿದದ್ದರಿಂದ ಪುನ್ನಯೂರ್‌ಕುಳದಲ್ಲಿ ಯಾವ ಪ್ರಯೋಜನವೂ ಇಲ್ಲ ಎಂಬುದನ್ನು ನಾನು ಕ್ರಮೇಣ ತಿಳಿದುಕೊಂಡೆ. 'ನನಗೆ ಮಾತಾಡ್ಲಿಕ್ಕೆ ಗೊತ್ತಿಲ್ಲಾಂತ ನಂಬಿಡಿಮಾಸ್ಟ್ರು ಹೇಳಿದ್ರು' ನಾನು ಅಜ್ಜಿಗೆ ತಿಳಿಸಿದೆ.

ಅಜ್ಜಿ ಮೊಸರು ಕಡೆಯುತ್ತಿದ್ದವರು ತಟ್ಟನೆ ನಿಲ್ಲಿಸಿದರು.

'ನಿನ್ಗೆ ಮಾತಾಡ್ಲಿಕ್ಕೆ ಗೊತ್ತುಂಟಲ್ಲ, ತುಂಬ ಚೆನ್ನಾಗಿ ಮಾತಾಡ್ತೀಯ' ಅಜ್ಜಿ ಹೇಳಿದರು.

'ನಂಗೆ ಉಚ್ಚಾರ ಶುದ್ಧಿ ಇಲ್ಲಾಂತ ಹೇಳಿದ್ರು.'

'ಏಳು ವಯಸ್ಸಿನ ಮಗೂಗೆ ಇದಕ್ಕಿಂತ ಉಚ್ಚಾರ ಶುದ್ಧಿ ಹೇಗೆ ಸಿಕ್ಕೀತು ? ನೀನು ಮೊದ್ದುಮೊದ್ದಾಗಿ ಮಾತನಾಡೋದು ನಂಗಿಷ್ಟಾಂತ ಮೇಷ್ಟತ್ರ ಹೇಳು.'

'ಹಿಡಿಕಡ್ಡೀಂದ ನಾಲಿಗೆ ತೊಳೀಲಿಕ್ಕೇಳಿದ್ರು'

'ನಾಲಗೆ ತೊಳೆಯುವ ಸಲಕರಣೇಂದಾನೆ ತೊಳೀತಿದ್ದೇನೇಂತ ಹೇಳ್ಬೋದಿತ್ತಲ್ಲ ? ಈ ಮೇಷ್ಟ್ರಿಗೇನಾಗಿದೆ ? ಮಕ್ಳ ಮನಸ್ಸು ನೋಯಿಸೋದಾ ? ನಿನ್ನ ನೋಡ್ಕೊಳ್ಳೋದು ನಾನು, ಮೇಷ್ಟ್ರಲ್ಲ. ನಾಲಿಗೆ ತೊಳೀಬೇಕಾ, ಸ್ನಾನ ಮಾಡಿಸ್ಬೇಕಾಂತೆಲ್ಲ ನಾನು ನೋಡಿಕೊಳ್ತೇನೆ. ನಂಬಿಡಿ ಮೇಷ್ಟ್ರು ಮಲಯಾಳ ಕಲಿಸ್ಲಿ' ಅಜ್ಜಿ ಮುಖ ಕೆಂಪಾಯಿತು. ಅವರಿಗೆ ಸಿಟ್ಟು ಬಂದಾಗ ಅವರ ಕಿವಿಗಳೂ ಮೂಗಿನ ಹೊಳ್ಳೆಗಳೂ ಕೆನ್ನೆಗಳೂ ಅದುರುತ್ತಿದ್ದುವು. 'ಅವ ಮುದುಕ. ಮತ್ತೆ ಮಕ್ಕಿಗೆ ಉಪದ್ರ ಮಾಡ್ಲಿಕ್ಕೆ ಒಳ್ಳೆ ಸಮರ್ಥ ಕೂಡ. ಇಲ್ಲಿಯ ಮಗೂಗೆ ನಾಲಗೆ ತೊಳೀಲಿಕ್ಕೆ ಆಯಿನಿಯು ನಂಬಿಡಿ ಕಲಿಸ್ಬೇಡ' -ಶಂಕರನ್ ಬಾಗಿಲಕಡೆ ನೋಡಿ ಗಟ್ಟಿ ಹೇಳಿದ. ನಂಬಿಡಿ ಮಾಸ್ಟರ್ ಆ ದಾರಿಯಾಗಿ ನಡೆದು ಹೋಗುತ್ತಿದ್ದಾರೋ ಎಂಬ ಸಂದೇಹದಲ್ಲಿ ಅತ್ತ ನೋಡಿದ. ಆದಾರಿಯಲ್ಲಿ ಆಗ ಯಾರೂ ಹೋಗುತ್ತಿರಲಿಲ್ಲ.

'ಮೇಷ್ಟ್ರ ಬಗ್ಗೆ ಯಾರತ್ರ ಹೇಳಿದ್ದು ?' ನಾನು ಶಂಕರನಲ್ಲಿ ಕೇಳಿದೆ.

'ಯಾರತ್ರ ಹೇಳೋದು ? ದೇವ್ರತ್ರ ಹೇಳೋದು. ನಮ್ಮ ಮಗೂಗೆ ಉಪದ್ರ

ಮಾಡಿದ್ರೆ ಮಾಫಲ್ಲ, ಎಡ್‌ಮಾಫಾದ್ರೂ ಅವ್ನನ್ನು ಹಿಡ್ದು ಕಪಾಳಕ್ಕೆ ಒಂದು ಕೊಟ್ಟೇನು. ನಂಗ್ಯಾರ್ದೂ ಎದ್ರಿಕೆಯಿಲ್ಲ' ಶಂಕರನ್ ರೋಷಭರಿತನಾಗಿ ಹೇಳಿದ.

'ನಂಬಿಡಿಮೇಷ್ಟ್ರನ್ನು ಹೊಡಿಬೇಡಿ.'

'ನೀವು ಹೊಡಿಬೇಡೀಂತ ಹೇಳಿದ್ರೆ ನಾನು ಹೊಡೀಲಿಕ್ಕಿಲ್ಲ. ನಿಮ್ಮಿಷ್ಟಾನೇ ನನ್ನಿಷ್ಟ' ಆತ ಹೇಳಿದ.

ಅಜ್ಜಿ ನಗುತ್ತ ಮೊಸರು ಕಡೆಯುವುದನ್ನು ಮತ್ತೆ ಮುಂದುವರಿಸಿದರು.

ನಾನು ಚಿಕ್ಕವಳಿದ್ದಾಗ ಮಕ್ಕಳ ಹಲ್ಲು ಅಲ್ಲಾಡತೊಡಗಿದರೆ ಅದನ್ನು ಕಿತ್ತು ಬಿಸಾಡುವುದು ಹೆತ್ತವರ ಜವಾಬ್ದಾರಿಯಾಗಿತ್ತು. ನಾಲಪ್ಪಾಟ್ಟಿನಲ್ಲಿ ಹಲ್ಲು ಕೀಳುವುದರಲ್ಲಿ ಪರಿಣತರಾಗಿದ್ದವರು ಅಜ್ಜಿ ಹಾಗೂ ಮಾವ. ನನ್ನ ಅಣ್ಣನ ಹಲ್ಲುಗಳನ್ನು ನಿಧಾನವಾಗಿ ಅಲುಗಾಡಿಸಿ ಕಿತ್ತು ಬಿಸಾಡಿದವರು ಅವರಿಬ್ಬರಾಗಿದ್ದರು. ಅಣ್ಣ ಒಮ್ಮೆಯೂ ವಿರೋಧಿಸುವುದಾಗಲೀ ಅಳುವುದಾಗಲೀ ಮಾಡಲಿಲ್ಲ. ನನ್ನ ಎದುರಿನ ಹಲ್ಲುಗಳು ಅಲುಗಾಡತೊಡಗಿದಾಗಲೆ ಅವರೆಲ್ಲಾ ಸೋಲೊಪ್ಪಿ ಕೊಂಡದ್ದು. ನನ್ನ ಬಾಯಿಗೆ ಕೈ ಹಾಕುವುದಕ್ಕೆ ನಾನು ಒಮ್ಮೆಯೂ ಯಾರನ್ನೂ ಬಿಡಲಿಲ್ಲ. ಬೀಳಲಿಕ್ಕಾದ ಹಲ್ಲು ನಿದ್ದೆಯಲ್ಲಿ ನುಂಗಿಹೋಗಬಹುದೆಂದು ಅಜ್ಜಿ ಹೆದರಿದರು. ಹಾಗಿರುವಾಗಲೆ ಮಾವ ಒಂದು ದಿನ ನನ್ನನ್ನು ಮುಖದ್ವಾರದ ಬಳಿಗೆ ಕರೆದದ್ದು. ಅಲ್ಲಿ ದಢೂತಿಯಾದ ಯುರೋಪಿಯನ್ ಮಾದರಿಯ ವಸ್ತ್ರ ಧರಿಸಿದ ಮಧ್ಯ ವಯಸ್ಕನೋರ್ವ ನಿಂತಿದ್ದ.

'ಅಮ್ಮಿ ಡಾಕ್ಟರ್ ಇಟ್ಟೂಪರನ್ನು ನೋಡಿಲ್ಲ, ಅಲ್ವೆ ?' ಮಾವ ಕೇಳಿದರು. ಆತ ಹಿಡಿದುಕೊಂಡಿದ್ದ ಕಪ್ಪಗಿನ, ಉಬ್ಬಿದ ಹೊಟ್ಟೆಯ ಚರ್ಮದ ಚೀಲದಲ್ಲಿ ನನಗಾಗಿ ತಂದೆ ಕಳುಹಿಸಿಕೊಟ್ಟ ಉಡುಗೊರೆಗಳಿರಬೇಕು ಎಂಬುದಾಗಿ ನಾನು ಭಾವಿಸಿದೆ. ಆದ್ದರಿಂದಲೇ ನಾನು ನಗುತ್ತ ಅವರ ಹತ್ತಿರಕ್ಕೆ ಹೋದೆ. ಒಂದು ಕೈಯಲ್ಲಿ ನನ್ನ ಹೆಗಲನ್ನು ಒಳಸಿ ಹಿಡಿದು ಇನ್ನೊಂದು ಕೈಯಲ್ಲಿ ಅವರು ನನ್ನ ಬಾಯಿ ತೆರೆದರು. ಒಂದೇ ಒಂದು ನಿಮಿಷದಲ್ಲಿ ನನ್ನನ್ನು ಸಾಕಷ್ಟು ನೋಯಿಸುತ್ತಾ ಒಂದು ಇಕ್ಕುಳದಲ್ಲಿ ಹಲ್ಲು ಕಿತ್ತರು. ನನ್ನ ಕಣ್ಣುಗಳು ತುಂಬಿ ಹರಿಯಿತು. ಅಳಲೂ ಮರೆತ ನಾನು ತಬ್ಬಿಬ್ಬಾಗಿ ನಿಂತೆ. ಮಾವ ನನಗೆ ಬಾಯಿ ತೊಳೆಯಲು ನೀರು ತಂದು ಕೊಟ್ಟರು. ಅಜ್ಜಿ ನನ್ನನ್ನು ಒಳಕ್ಕೆ ಕೊಂಡು ಹೋದರು. ಅಪರಾಧೀ ಭಾವದಿಂದಿರಬೇಕು, ಅವರೂ ಅಳುತ್ತಿದ್ದರು. ನನ್ನ ಅನುಮತಿ ಕೇಳದೆ ಹಲ್ಲು ಕಿತ್ತದ್ದು ಮನೆಯವರು ನನಗೆ ತೋರಿಸಿದ ವಿಶ್ವಾಸವಂಚನೆಯಾಗಿ ತೋರಿತು.

ಉಪ್ಪು ಮಿಶ್ರಿತ ನೀರಿನಲ್ಲಿ ನಾನು ಬಾಯಿ ತೊಳೆದೆ. ರಕ್ತ ಸೋರುವುದು ನಿಂತಾಗ ಅಜ್ಜಿ ಹೇಳಿದರು: 'ನಿಂಗಿನ್ನು ಚಂದದ ಹಲ್ಲು ಬರ್ತದೆ.'

'ಹಲ್ಲು ಎಲ್ಲೋಯ್ತು ? ಆ ಡಾಕಟ್ರು ಕೊಂಡ್ಹೋದ್ರಾ ?' ಶಂಕರನ್ ಕೇಳಿದ.

'ಆತ ಹಲ್ಲನ್ನು ತಗ್ದು ದೂರ ಬಿಸಾಡಿಬಿಟ್ಟೋದು. ಇನ್ನೀಗ ಮಾಡೋದೇನು ?' ದೇವಕಿ ಅಜ್ಜಿಯಲ್ಲಿ ಕೇಳಿದಳು.

'ಏನೂ ಮಾಡ್ಬೇಡ. ಒಳ್ಳೆ ಹಲ್ಲು ಮೊಳೀತದೆ' ಅಜ್ಜಿ ಹೇಳಿದರು.

'ಸೆಗಣಿಯಲ್ಲಿ ಮುದ್ದೆ ಮಾಡಿ ಮನೆ ಮಾಡಿಗೆ ಬಿಸಾಡದಿದ್ರೆ ಮಗೂಗೆ ಕೋರೆ ಹಲ್ಲು ಬಂದೀತು' ದೇವಕಿ ಹೇಳಿದಳು.

'ಮೂರ್ಖಳಂತೆ ಮಾತಾಡ್ಬೇಡ' ಅಜ್ಜಿ ಹೇಳಿದರು.

'ನಂಗೆ ಕೋರೆ ಹಲ್ಲು ಬೇಡ' ನಾನು ಉಮ್ಮಳಿಸುತ್ತ ಹೇಳಿದೆ.

'ಆ ಹಲ್ಲನ್ನು ನಾ ಅಂಗಳದಲ್ಲಿ ಹುಡುಕ್ಲಾ?' ದೇವಕಿ ಕೇಳಿದ್ಲು.

'ಅದು ಕಾಗೆ ಕೊಂಡ್ಹೋಗಿರ್ಬೋದು' ಶಂಕರನ್ ಹೇಳಿದ. ಆತ ನನ್ನ ದುಃಖವನ್ನು ಸಮಯ ಕಳೀಲಿಕ್ಕಿರೋ ಸಾಧನವಾಗಿ ಕಾಣುತ್ತಿದ್ದಾನೆಂದು ನನಗನ್ನಿಸಿತು.

'ನಂಗೆ ಕೊಕ್ಕರೆ ಹಲ್ಲು ಬಂದ್ರೆ ನಾ ಏನು ಮಾಡ್ಲಿ?' ನಾನು ಅಜ್ಜಿಯನ್ನು ಕೇಳಿದೆ.

'ನಿಂಗೆ ಒಳ್ಳೆ ಅಕ್ಕಿಯಂತಹ ಹಲ್ಲು ಬರ್ತದೆ ಹೆದರ್ಬೇಡ. ಈ ದೇವಕಿ ಹೇಳೋದನ್ನೆಲ್ಲ ನೀ ನಂಬೇಡ' ಅಜ್ಜಿ ನನ್ನನ್ನು ಸಂತೈಸುತ್ತ ಹೇಳಿದರು.

'ನನ್ನ ಊರಲ್ಲಿ ಹೇಳೋದು ಕೇಳಿದ್ದು. ನಮ್ಮಲ್ಲಿಯ ಮಕ್ಕಳ ಹಲ್ಲನ್ನು ಸೆಗಣೇಲಿ ಮುಚ್ಚಿ ಮನೇ ಮೇಲಕ್ಕೆ ಬಿಸಾಡ್ತಿದ್ರು. ಅದಕ್ಕೇ ನಮ್ಮಲ್ಲಿಯ ಮಕ್ಕಳ ಹಲ್ಲಷ್ಟು ಚಂದ.'

'ನಮ್ಮೂರಲ್ಲಿ ಯಾರೂ ಹಲ್ಲನ್ನು ಸೆಗಣಿಯಲ್ಲಿ ಮುಚ್ಚಿ ಬಿಸಾಡೋದಿಲ್ಲ' ಶಂಕರನ್ ಹೇಳಿದ.

'ಅದಕ್ಕೇ ಇರಬೇಕು ನಿಮ್ಮ ಹಲ್ಲು ಕೋರೆ ಹಲ್ಲಾದ್ದು' ದೇವಕಿ ಹೇಳಿದಳು.

ನಾನು ಗಟ್ಟಿ ಅಳತೊಡಗಿದೆ.

'ಕೋರೆ ಹಲ್ಲಿಟ್ಕೊಂಡು ನಾ ಶಾಲೆಗೆ ಹೋಗೋದಿಲ್ಲ' ನಾನು ಹೇಳಿದೆ.

'ನಿಂಗಿಷ್ಟೂ ಬುದ್ಧಿ ಇಲ್ವೆ? ಈ ದೇವಕಿ ಹೇಳೋದನ್ನೆಲ್ಲ ನಂಬಿದ್ರೆ ನಿಂಗೀ ಲೋಕದಲ್ಲಿ ಜೀವಿಸ್ಲಿಕ್ಕೇ ಸಾಧ್ಯವಿಲ್ಲ' ಅಜ್ಜಿ ಹೇಳಿದಳು.

'ನಿಮ್ಮ ಹಲ್ಲು ಚೆನ್ನಾಗಿರ್ಲಿ ಅಂತ ತಿಳ್ಕಂಡೆ. ಬೇಡ್ವಿದ್ರೆ ಬೇಡ. ನಂಗೇನು ನಷ್ಟ' ದೇವಕಿ ಗೊಣಗಿದಳು.

ಈ ವಾದ ಪ್ರತಿವಾದ ಕೇಳಿ ನಿಂತಿದ್ದ ವಳ್ಳಿ, ಒಂದು ಬಿಳಿಯ ವಸ್ತುವನ್ನು ತಂದು ಅಜ್ಜಿಗೆ ಕೊಟ್ಟಳು.

'ಇಗೊಳ್ಳಿ ಚಿಕ್ಕಮ್ಮೋರ ಹಲ್ಲು. ಆ ಹುಲ್ಲಿನರಾಶೀ ಎಡೇಲಿ ಬಿದ್ದಿತ್ತು.'

'ಅದು ಬೆಣ್ಚು ಕಲ್ಲು' ಶಂಕರನ್ ಹೇಳಿದ.

'ಅಲ್ಲಲ್ಲ ನಾಯರ್, ಅದು ಹಲ್ಲೆ. ಅದರ ಕಡೇಲಿ ರಕ್ತ ಕಾಣೋದಿಲ್ವೆ.'

'ರಕ್ತೇನಲ್ಲ ಅದು ಕೆಂಪು ಮಣ್ಣು.'

'ಇಲ್ಲಿ ಕೊಡಿ, ನಾನು ನೋಡ್ತೇನೆ' ದೇವಕಿ ವಳ್ಳಿಯ ಕೈಯಿಂದ ಆ ಅವಶೇಷವನ್ನು ತೆಗೆದು ಅದನ್ನು ತುಂಬ ಹೊತ್ತು ಸೂಕ್ಷ್ಮವಾಗಿ ನೋಡಿದಳು:

'ಇದು ಬೆಣಚುಕಲ್ಲಲ್ಲ, ಹಲ್ಲೆ. ಅದ್ರೆ ಮಗೂನ ಹಲ್ಲೂಂತ ನಂಗೆ ತೋರೋದಿಲ್ಲ. ಯಾವ್ದೋ ನಾಯೀ ಹಲ್ಲಿನ ಹಾಗೆ ನಂಗ ಕಾಣ್ತದೆ.'

'ಅಯ್ಯಯ್ಯೊ ಅದು ತೆಗ್ದು ಬಿಸಾಡು' ಅಜ್ಜಿ ಹೇಳಿದಳು.

'ಅದು ನನ್ನ ಹಲ್ಲು' ನಾನು ಹೇಳಿದ.

ದೇವಕಿ ಅದನ್ನು ಸೆಗಣಿಯಲ್ಲಿ ಉಂಡೆ ಮಾಡಿ ಏನನ್ನೊ ಜಪಿಸಿಕೊಂಡು ಮನೆಯ

ಮಾಡಿಗೆ ತೆಗೆದು ಬಿಸಾಡಿದಳು. ಅದು ಉರುಳಿಬಂದು ದೇವಕಿಯ ಕಾಲಿನ ಕೆಳಗೆ ಬಿತ್ತು. 'ವಾಪಾಸು ಬಂದದ್ದು ನೋಡಿದ್ರಾ ? ಒಳ್ಳೇ ಲಕ್ಷಣ ಅಲ್ಲ ಈ ವಾಪಾಸು ಬರೋದು. ಮಗೂಗೆ ಒಳ್ಳೇ ಹಲ್ಲು ಮೊಳೀಲಿಕ್ಕಿಲ್ಲಾಂತಾನೇ ನನ್ನ ಸಂಶಯ.'

'ಮೂರ್ಖತನದ ಮಾತನ್ನಾಡಿ ಮಗೂನ್ನ ಹೆದ್ರಿಸ್ಬೇಡ' ಅಜ್ಜಿ ಹೇಳಿದರು.

'ಕೋರೆ ಹಲ್ಲು ಬಂದ್ರೆ ನಾನು ಕಲ್ಕತ್ತಾಕ್ಕೆ ಹೋಗ್ಲಿಕ್ಕಿಲ್ಲ' ನಾನು ಹೇಳಿದೆ.

'ಕೋರೆ ಹಲ್ಲು ಬಾರದಿದ್ರೂ ನೀನು ಕಲ್ಕತ್ತಾಕ್ಕೆ ಹೋಗ್ಬೇಡ' ಅಜ್ಜಿ ಹೇಳಿದ್ರು.

'ನಾನು ಚಂದ ಇಲ್ಲಾಂತಲ್ವೆ ಕೆಲವರ ಆಲೋಚನೆ. ಚಂದಿರೋರನ್ನು ಯಾರನ್ನಾದ್ರೂ ನೋಡಿಟ್ಟಿರ್ಬೋದು' ಶಂಕರನ್ ದೇವಕಿಯನ್ನು ನೋಡುತ್ತ ಹೇಳಿದ.

'ನನ್ನತ್ರ ಬಾಯಿಗ್ಬಂದಾಗೆ ಹೇಳಿದ್ರುಂಟುಲ್ಲಾ.... ನಾನದನ್ನು ಕೇಳಿ ಸುಮ್ನಿರ್ಲಿಕ್ಕಿಲ್ಲ' ದೇವಕಿ ಹೇಳಿದಳು.

'ಕೊಬ್ಬು ಬೇಡ ದೇವಕಿಯಮ್ಮ ಜಾಸ್ತಿ ಕೊಬ್ಬು ತೋರಿಸ್ಬೇಡ' ಅಡುಗೆಯವ ತಿರಸ್ಕಾರದಿಂದ ಹೇಳುತ್ತ ಮಾವಿನ ಬುಡದಲ್ಲಿ ಹೂತುಹಾಕಿದ ಸಬ್ಬಲ್‌ನಲ್ಲಿ ತೆಂಗಿನ ಕಾಯಿಯನ್ನು ಒಂದೊಂದಾಗಿ ಸುಲಿಯ ತೊಡಗಿದ. ಕೆಲಸದವಳು ಅಳಲೂ ತೊಡಗಿದಳು.

'ಇವುಗಳಿಗೆ ಯಾವಾಗ್ಲೂ ಜಗಳ ಕಾಯೋದಕ್ಕೇ ಸಮಯ ಇರೋದು' ಅಜ್ಜಿ ಹೇಳಿದಳು.

'ಶಂಕರ ದೇವಕಿಯ ಶತ್ರುವಾ ?'

ಆ ಪ್ರಶ್ನೆಗೆ ಯಾರೂ ಉತ್ತರ ಹೇಳಲಿಲ್ಲ.

'ದೇವಕಿಗೆ ಶಂಕರನತ್ರ ಸಿಟ್ಟೇ ?' ನಾನು ಕೇಳಿದೆ. ದೇವಕಿ ತನ್ನ ಮುಖವನ್ನು ಮುಂಡಿನ ಮೂಲೆಯಿಂದ ಒರಸುತ್ತ ಅತ್ತು ಕೆಂಪಾದ ಕಣ್ಣುಗಳಿಂದ ಶಂಕರನನ್ನು ನೋಡುತ್ತ ಚಾವಡಿಯ ಕಂಬವನ್ನು ಆತು ನಿಂತಳು.

ನನ್ನ ತಂದೆ ಒಮ್ಮೆ ಕಲ್ಕತ್ತಾದಿಂದ ಬಂದಾಗ ನನ್ನ ತಲೆ ಕೂದಲಿನ ವಿಶಿಷ್ಟ ಬೆಳವಣಿಗೆ ಕಂಡು ಸಿಟ್ಟುಗೊಂಡರು. ನೋಟಕ್ಕೆ ನಾನೊಬ್ಬ ಶುದ್ಧ ಕಂಟ್ರಿಯಾಗಿ ಬದಲಾಗಿದ್ದೆ ಎಂದು ಅವರು ಅಭಿಪ್ರಾಯಪಟ್ಟರು.

'ನಾಳೆಯೋ ಆ ಚಾತುವನ್ನು ಕರೆಸಿ ಇವಳ ಕೂದಲು ಕತ್ತರಿಸ್ಬೇಕು.'

ತಂದೆಯ ಮಾತುಗಳನ್ನು ಕೇಳಿದಾಗ ಅಜ್ಜಿಯ ಬಿಳಚಿದ ಮುಖ ಇನ್ನಷ್ಟು ಬಿಳಚಿತು. ತಂದೆಯವರನ್ನು ಯಾವ ವಿಚಾರದಲ್ಲೂ ಎದುರಿಸುವುದಕ್ಕೆ ಅವರಿಗೆ ಧೈರ್ಯವಿರಲಿಲ್ಲ.

'ಇವಳನ್ನು ಈ ರೂಪದೊಂದಿಗೆ ಕಲ್ಕತ್ತೆಯ ಶಾಲೆಗೆ ಸೇರಿಸಲು ಸಾಧ್ಯವಿಲ್ಲ. ಕೂದಲು ಬಾಬ್ ಮಾಡಿ ಅಲ್ಲಿ ಶಾಲೆಗೆ ಸೇರಿಸ್ಬಹುದು' ತಂದೆ ಹೇಳಿದರು.

ಸುಮಾರು ಎರಡು ವರ್ಷದಷ್ಟು ಕಾಲ ಅಜ್ಜಿಯ ಆರೈಕೆಯೊಂದಿಗೆ ಬೆಳೆದವಳು ನಾನು. ಪ್ರತಿ ದಿನ ತನ್ನ ತಲೆಗೆ ತೆಂಗಿನ ಕಾಯಿ ಬೇಯಿಸಿ ತೆಗೆದ ತೆಂಗಿನೆಣ್ಣೆ ಹಚ್ಚಿ

ತಿಕ್ಕಿ ಪಚ್ಚೆ ಹೆಸರಿನ ಹುಡಿಯಿಂದ ಅಂಟು ತೆಗೆದು, ಕೂದಲನ್ನು ಒರಸಿ ಬೈತಲೆ ತೆಗೆದು ಅಜ್ಜಿ ಧನ್ಯತೆಯನ್ನು ಕಂಡಿದ್ದ ಕಾಲವದು.

ಮಾರನೆಯ ದಿವಸ ಬೆಳಿಗ್ಗೆ ಚಾತು ಹಾಜರಾದ. ತಂದೆಯ ಕೂದಲು ಕತ್ತರಿಸುವುದಕ್ಕೆ ಆತನಿಗೆ ಖುಷಿ. ಯಾಕೆಂದರೆ, ತಾನು ಕಲ್ಕತ್ತೆಗೆ ಹೋದ ನಂತರ ಪುನ್ನಯೂರ್‌ಕುಳದಲ್ಲಿ ನಡೆದ ಘಟನೆಗಳ ಬಗ್ಗೆ ತಂದೆ ಅವನೊಂದಿಗೆ ಕೇಳುತ್ತಿದ್ದರು. ಮಾತ್ರವಲ್ಲ ಕೂದಲು ತೆಗೆದುದಕ್ಕೆ ಉಳಿದವರು ಕೊಡುತ್ತಿದ್ದುದಕ್ಕಿಂತ ಹತ್ತು ಪಟ್ಟು ಹಣ ಉಡುಗೊರೆಯಾಗಿ ಕೊಡುತ್ತಿದ್ದರು.

ತಾವ್ರು ಇನ್ನೂ ಕಲ್ಕತ್ತಾಕ್ಕೆ ಹೋಗೋದ್ಯಾಕೆ ? ಅಲ್ಲಿ ಬಾಂಬ್ ಬೀಳ್ತದಂತಲ್ವಾ. ಇಲ್ಲಿ ಎಲ್ರೂ ಹೇಳ್ತಾರೆ ?' ಚಾತು ಹೇಳಿದ.

'ಬಾಂಬ್ ಬೀಳ್ಳಿಲ್ಲ. ಬೀಳೋದಿದ್ರೆ ಬೀಳ್ಲಿ. ಯುದ್ಧಕ್ಕೆ ಹೆದರಿ ಊರಲ್ಲೇ ಅಡಗಿ ಕೂರೋದಕ್ಕೆ ಸಾಧ್ಯವಾ ?' ತಂದೆ ಗಹಗಹಿಸಿ ನಗುತ್ತಾ ಕೇಳಿದರು.

'ಅಸಾಧಾರಣ ಧೈರ್ಯ' ಚಾತು ತಲೆ ಅಲುಗಿಸುತ್ತಾ ಹೇಳಿದ. ತಂದೆಗೆ ಸಂತೋಷವಾಯಿತು. ಒಂದು ಕ್ಷೌರದಂಗಡಿ ತೆರೆಯಲು ಸುಮಾರು ಎಷ್ಟು ಹಣ ಬೇಕಾದೀತೆಂದು ತಂದೆ ಅವನೊಂದಿಗೆ ಕೇಳಿದರು.

ಚಾತು ಕ್ಷೌರದ ಕತ್ತಿ ಕಿವಿಯ ಹಿಂದೆ ನಿಲ್ಲಿಸಿ ಬಿಟ್ಟು ತನ್ನ ತಲೆ ಕೆರೆದ.

'ಸರೀಗೊತ್ತಿಲ್ಲ ಯಜಮಾನ್ರೆ. ನಂಗೆ ಅಂಥ ಲೆಕ್ಕವೊಂದೂ ಗೊತ್ತಾಗೋದಿಲ್ಲ'

'ನೀನು ಆಲೋಚಿಸಿ ಹೇಳಿದ್ರೆ ಸಾಕು. ನಾನು ಮುಂದಿನ ತಿಂಗಳು ನಾಲ್ಕನೇ ತಾರೀಕಿನವರೆಗೆ ಇಲ್ಲೇ ಇದ್ದೇನೆ. ಚೆನ್ನಾಗಿ ಯೋಚಿಸಿ ಹೇಳಿದ್ರೆ ಸಾಕು. ದುಡ್ಡು ನಾನು ಕೊಡ್ತೇನೆ.'

ಚಾತುವಿನ ಮುಗುಳ್ನಗೆ ಭೀತಿ ಹುಟ್ಟಿಸುವಷ್ಟರ ಮಟ್ಟಿಗೆ ಬದಲಾಯಿತು. ಬಾಯಿಯ ಕೆಂಪು ಮಿಶ್ರಣವನ್ನು ಆತ ಒಂದು ತೆಂಗಿನ ಬುಡಕ್ಕೆ ಉಗುಳಿದ. ಸಂತೋಷಾಧಿಕ್ಯದಿಂದಲೇ ಇರಬೇಕು, ಅದಕ್ಕೆ ಸಾಕ್ಷಿಯಾಗಿ ಹುಳಿಯೊಣಗಿಸುವ ಓತ್ತಿಲಿನಲ್ಲಿ ಹಾರಾಡುತ್ತಿದ್ದ ಕಾಗೆಗಳನ್ನು ಆತ ಕೈಬೀಸಿ ಓಡಿಸಿದ 'ಹೊಯ್ ಕಾಗೆ.'

ಕಂಕುಳಲ್ಲೂ ಸೊಂಟದಲ್ಲೂ ಹೊಲಿಗೆ ಬಿಡತೊಡಗಿದ್ದ ಬಟ್ಟೆ ಹಾಕಿದ ಬೊಂಬೆಯ ಜೀವರಹಿತ ಚಲನೆಯಾಗಿತ್ತು ಚಾತುವಿನದು. ಉದ್ವೇಗದ ಕೈಕಾಲುಗಳನ್ನು ಸ್ವಯಂ ನಿಯಂತ್ರಿಸುವುದಕ್ಕೆ ಆತನಿಗೆ ಕಷ್ಟ ಸಾಧ್ಯವಾಗುತ್ತಿದ್ದುದಾಗಿ ನನಗೆ ತೋರಿತು.

ನನ್ನ ಕೂದಲನ್ನು ಬಾಬ್ ಮಾಡಬೇಕೆಂದು ತಂದೆ ಚಾತುವಿಗೆ ಹೇಳಿದರು.

'ಈಗ ಕಲ್ಕತ್ತೆಯಲ್ಲಿ ಹುಡುಗಿಯರಿಗೆ ಅದೊಂದು ಹೊಸ ಪರಿಷ್ಕಾರ' ತಂದೆ ಹೇಳಿದರು.

'ನಿನಗೆ ಬಾಬ್ ಮಾಡಲು ಗೊತ್ತುಂಟೊ ? ಬೆನ್ನು ಮುಟ್ಟಕೂಡದು. ಸಾಧಾರಣ ಎರಡೋ ಮೂರೋ ಇಂಚು ಉದ್ದ ಇಟ್ಟು ಬಾಕಿ ಎಲ್ಲ ಕತ್ತರಿಸಿ ಬಿಡ್ಬೇಕು.'

ನನ್ನನ್ನು ಕುರ್ಚಿಯಲ್ಲಿ ಕುಳ್ಳಿರಿಸಿ ಕುತ್ತಿಗೆಯಿಂದ ಕೆಳಗಡೆಗೆ ಒಂದು ಹಾಸಿಗೆ ಹೊದಿಕೆಯನ್ನು ತಂದೆ ಹೊದೆಸಿದರು. ಚಾತು ಹಳೆಯ ಕಪ್ಪನೆಯ ಕತ್ತರಿಯನ್ನು ಹೊಯ್ಗೆ ಮಣ್ಣಿನಲ್ಲಿ ಐದೋ ಆರೋ ಸಲ ಓಡಾಡಿಸಿದ.

'ಹರಿತ ಮಾಡ್ಲಿಕ್ಕೆ' ಆತ ಹೇಳಿದ.

ಅಜ್ಜಯ ಬಿಳಿಚಿದ ಮುಖ ಕಿಟಕಿಯ ಎಡೆಯಿಂದ ತಟ್ಟನೆ ಮರೆಯಾಯಿತು.

'ಅಂಡತ್ತೋಟದಲ್ಲಿದ್ದಾರಲ್ಲ ಒಬ್ಬ ವಿದೇಶೀ ಸಾಯೇಬ್ರು, ಅವರ ಹೆಂಡ್ತಿ ನಮ್ಮೂರ್ನೋಳು. ಸಾಯೇಬ್ರನ್ನು ಮದ್ವೆಯಾಗಿ ಅದೂ ಕೂದಲು ಕತ್ರಿಸಿ ಮೇಡಮ್ಮಾದ್ಳು. ಅದ್ರ ಕೂದ್ಲೂ ನಾನೇ ಕತ್ರಿಸಿದ್ದು. ಹೆಂಗ್ಸರ ಕೂದ್ಲು ಬಾಬ್ ಮಾಡೋದಕ್ಕೆ ನಂಗೊತ್ತು ಯಜ್‌ಮಾನ್ರೆ.'

ದಪ್ಪಗಿನ ಕೂದಲ ಸುರುಳಿಗಳು ನನ್ನ ಸುತ್ತ ನೆಲ ಕಚ್ಚುತ್ತಿದ್ದವು.

'ನಮ್ಮ ಹೆಂಗಸ್ರ ಕಾಲ್ನಲ್ಲಿ ಸೊಲೂಪ ರೋಮ ಕಾಣ್ತದಲ್ಲ? ಮೇಡಮ್ಮುಗ್ಳ ಕಾಲ್ನಲ್ಲಿ ಕಾಣ್ಲಿಕ್ಕಿಲ್ಲ. ಅವ್ರು ದಿವ್ಸಾಗ್ಲು ಕತ್ತಿಂದ ಕೆರೆಸ್ತಾರೆ. ನಮ್ಮ ಅಪ್ಪುಣ್ಣಿ ಇದ್ದಾನಲ್ಲ ಯಜಮಾನ್ರೆ, ಪೆರಂಡಿರಿಯವ? ಆ ಪಿತ್ತ ಹಿಡ್ದವ. ಅವ ಹೇಳಿದ್ದು, ಅವ ಕಲ್ಲಿಕೋಟೇಲಿ ಒಂದು ಸಾಯೇಬ್ರ ಮನೇಲಿ ಕೆಲ್ಸಕ್ಕಿದ್ದ, ತೋಟದೋರಾಗಿದ್ರು. ಅವ್ನನ್ನು ಸತ್ರೂ ಮೇಡಮ್ಮು ಅಪ್ಪುಣೀಂತ ಕರ್ದಿರ್ಲಿಕ್ಕಿಲ್ಲ. ಕಾಟ್ಟು ನಾಯರ್ ಅಂತಾನೇ ಕರೀತಿದ್ರು. ಅವ ನಾಯರೂಂತ ಮೇಡಮ್ಮು ತಿಳ್ದಿರ್ಬೇಕು. ಅವ್ನ ಬಣ್ಣ ಕಂಡು ಅವ ನಾಯರೂಂತ ತಿಳ್ದಿರ್ಬೇಕು. ಅವ ತಂದೆಯಿಲ್ದೆ ಹುಟ್ಟಿದ್ದಲ್ವೆ? ಅದಕ್ಕೇ ಅವ ಅಷ್ಟು ಬೆಳ್ಳಗಾದ್ದು. ಅದುಂಟಾ ಮೇಡಮ್ಮಿಗೆ ಗೊತ್ತಾಗೋದು? ನನ್ನಮ್ಮ ರಂಡೇಂತ ಯಾರೂ ಹೇಳ್ಕೊಂಡು ನಡೀಲಿಕ್ಕಿಲ್ಲಲ್ಲ. ಅದ್ಕೇ ಅಪ್ಪುಣ್ಣಿ ಮಾತೇ ಆಡಿರ್ಲಿಲ್ಲ. 'ಕಾಟ್ಟುನಾಯರ್, ಕಂ ಕಂ'ತ ಹೇಳ್ತಾರಂತೆ ಹತ್ರ ಬರ್ಲಿಕ್ಕೆ. 'ಕಾಟ್ಟುನಾಯರ್ ಗೋ ಗೋಂ'ತ ಹೇಳ್ತಾರಂತೆ ದೂರ ಹೋಗ್ಲಿಕ್ಕೆ. ಅವ್ನೂ ಕಲ್ತ, ಮೇಡಮ್ಮಿನ ಬಾಸೆ. ಯಾರು? ನಮ್ಮ ಅಪ್ಪುಣ್ಣೀಂತಾ. ಅವಂಗೊಳ್ಳೆ ಬುದ್ಧ್ಯುಂಟು. ಪೆರಂಡಿರಿಯವ ಯಾವ್ದಾದ್ರೂ ಮೇಷ್ಟ್ರ.... ಯಾರಿಗ್ಗೊತ್ತು? ಏನಿದ್ರೂ ಅವ ಹೇಳ್ಳೇ ನಂಗೊತ್ತಾದ್ದು. ಮೇಡಮ್ಮುಗಳು ದಿನಾಲೂ ಕಾಲು ಕೆರೆಸ್ತಾರೇಂತಾ. ಅದಕ್ಕೇಲ್ವೆ ಅವರ ಕಾಲು ಹಾಗೆ ಹೊಳ್ಯೋದು. ಯಜಮಾನ್ರು ಕಲ್ಕತ್ತಾದಲ್ಲಿ ಎಷ್ಟೋ ಜನ್ರನ್ನು ಕಂಡಿರ್ಬೋದಲ್ಲ....'

ತಂದೆ ಬೆತ್ತದ ಕುರ್ಚಿಯಲ್ಲಿ ಕುಳಿತು ಗಟ್ಟಿಯಾಗಿ ನಕ್ಕರು.

ಅಜ್ಜಿಯ ಮುಖ ಮತ್ತೊಮ್ಮೆ ತೆಂಕಕೋಣೆಯ ಕಿಟಕಿಯಲ್ಲಿ ಕಾಣಿಸಿಕೊಂಡಿತು.

ನನ್ನ ಹೊಸರೂಪ ನೋಡಿ ಖುಷಿಯಾಯಿತೆಂದು ತಂದೆ ಹೇಳಿದರು. ಒಳಗೆ ಕೆಲಸದಲ್ಲಿದ್ದ ತಾಯಿಯನ್ನು ತಂದೆ ಹೊರಗಡೆಗೆ ಕರೆಸಿದರು.

'ನೋಡು ಹುಡಿಗೀನ್ನ, ಈಗ ಅಮ್ಮಿಯನ್ನು ಕಂಡ್ರೆ ಹೇಗನ್ನಿಸ್ತದೆ?'

ಅಮ್ಮ ಮಂದಸ್ಮಿತರಾದರಲ್ಲದೆ ಮಾರುತ್ತರ ಕೊಡಲಿಲ್ಲ. ಅಜ್ಜಿಯ ಕಣ್ಣುಗಳು ಕದಡಿತ್ತು. ಅವರು ನನ್ನನ್ನು ಸ್ನಾನ ಮಾಡಿಸಲಿಕ್ಕೆ ಕೊಳಕ್ಕೆ ಕೊಂಡುಹೋದರು. ನಿಶ್ಶಬ್ದರಾಗಿ ನನ್ನ ಸ್ನಾನವನ್ನೂ ಮಾಡಿಸಿದರು.

'ನನ್ನ ಚಂದಲ್ಲ ಹೋಗಿಬಿಡ್ತಾ?' ನಾನು ಕೇಳಿದೆ.

ಅಜ್ಜಿ ಉತ್ತರಿಸಲಿಲ್ಲ.

ನನ್ನ ಏಳನೆಯ ಹುಟ್ಟು ಹಬ್ಬದ ಊಟ ಮುಗಿಸಿ ಎಲ್ಲರೂ ಮಲಗುವುದಕ್ಕಾಗಿ ಮೇಲ್ಗಡೆಗೆ ಹೋದ ಮೇಲೆ ಚೇರಪ್ಪನ್ ಎಂಬುದಾಗಿ ಆ ಬಳಿಕ ತಿಳಿದುಬಂದ ಬಳೆಗಾರನೊಬ್ಬ ಮೊದಲ ಬಾರಿಗೆ ನಾಲಪ್ಪಾಟ್ಟಿನ ಪೂರ್ವಾಂಗಣದಲ್ಲಿ ಪ್ರತ್ಯಕ್ಷನಾದ.

ಗುರುವಾಯೂರೇಕಾದಶಿ ಮುಗಿಸಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುವ ಬಳೆಗಾರರು ತಮ್ಮ ಮರದ ಪೆಟ್ಟಿಗೆಗಳೊಂದಿಗೆ ಆ ದಾರಿಯಾಗಿ ಬರುತ್ತಿದ್ದುದುಂಟು. ಒಳ್ಳೆ ವ್ಯಾಪಾರ ನಡೆದರೂ ಅವರ ಪೆಟ್ಟಿಗೆಗಳಲ್ಲಿ ಕೆಂಪು ಟಿಶ್ಯೂ ಪೇಪರಿನಲ್ಲಿ ಮುಚ್ಚಿದ ಒಪ್ಪದ ಬಳೆಗಳೂ ಚಿಪ್ಪಿ ಬಳೆಗಳೂ ಕುಪ್ಪಿ ಬಳೆಗಳೂ ರೋಸ್ ಬಣ್ಣದ ಸಿಲ್ಕು ಲಾಡಿಗಳೂ ಉಳಿದಿರುತ್ತಿದ್ದುವು. ಆದರೆ ಹೊಸ ಬಳೆಗಾರನ ಕಾರ್ಡ್‌ಬೋರ್ಡ್ ಪೆಟ್ಟಿಗೆಯಲ್ಲಿ ಬಿರುಕು ಬಿಟ್ಟ ಕುಪ್ಪಿ ಬಳೆಗಳೂ ಕೆಲವು ಪ್ಲಾಸ್ಟಿಕ್ಕು ಬಳೆಗಳೂ ಮೇಣ ಅಂಟಿದ ಒಂದು ಪೊಟ್ಟಣವೂ ಇದ್ದುದು ನನ್ನ ಕಣ್ಣಿಗೆ ಬಿತ್ತು.

'ಬೇಲಿ ಮುರ್ದು ಒಳಗೆ ಬರೋದಿಕ್ಕೆ ನೀನ್ಯಾರೊ ?' ಅಡುಗೆಯಾತ ಕಣಜದ ಮೇಲೆ ಎದ್ದು ಕೂತು ಕೇಳಿದ.

'ಬೇಲಿ ಮುರ್ದಿದ್ದದ್ದು ಕಂಡೆ. ಹಾಗೆ ಬಂದೆ.....'

'ಈ ವರ್ಷ ಇಲ್ಲಿ ಬೇಲಿ ಕಟ್ಟಿಸ್ಲಿಲ್ಲಾಂತ ದಾರಿಹೋಕ್ರೆಲ್ಲ ಮುಖದ್ವಾರಕ್ಕೆ ಹತ್ಬೇಕಾ ?'

'ನಾ ಹೋಗ್ತೇನೆ ನಾಯರೇ, ಈ ಮಗೂನ್ನ ಕಂಡೇಂತ ಬಂದದ್ದು, ನನ್ಹೆಸ್ರು ಚೇರಪ್ಪನ್ ಅಂತ. ನಾನು ಚಾಲುಶ್ಶೇರಿಂದ ಬಂದಿರೋನು. ಮಗೂಗೆ ಡಬ್ಬರ್ ಬಳೆ ಬೇಕಿದ್ರೆ ನನ್ನ ಪೆಟ್ಗೇಲುಂಟು'

'ನಿಂಗೇನು ಹುಚ್ಚುಂಟೋ ? ಈ ಮಗೂಗೆ ತೊಡ್ಲಿಕ್ಕೆ ನಿನ್ನ ಡಬ್ಬರ್ ಬಳೆಯಾ ಸಿಕ್ಕಿದ್ದು ? ಇದ್ಯಾರ ಮಗೂಂತ ತಿಳ್ಕಂಡಿದ್ದಿ ? ನೀನು ವೀಯೆನ್ನಾಯರ್ ಎಂಬೋರ ಬಗ್ಗೆ ಕೇಳ್ಳಿಲ್ಲಾಂತ ತೋರ್ತದೆ. ನೀನ್ಯಾವ ಗೊಂಡಾರಣ್ಯದಿಂದ ಗಂಟು ಕಟ್ಟಿ ಹೊರ್ಟವ ? ವೀಯೆನ್ನಾರನ್ನು ಕೇಳಿರದ ಮನುಷ್ಯರಿದ್ದಾರಾ ಈ ಭೂಮಿ ಮೇಲೆ !'

'ನಾನು ಕೇಳ್ಳಿಲ್ಲಾಂತ ನೀವ್ಯಾಕೆ ತೀರ್ಮಾನ ಮಾಡೋದು, ನಾಯರೆ ?'

ಚೇರಪ್ಪನ್ ಮಾಡಿನಡಿಯಲ್ಲಿ ಕುಳಿತು ಒಂದು ಬೀಡಿ ತೆಗೆದು ಹೊತ್ತಿಸಿದ.

'ಬೀಡಿ ಬೇಕಾ ನಾಯ್ರೇ' ಆತ ಕೇಳಿದ.

'ಬೀಡಿಗೀಡಿಯೆಲ್ಲ ನಾನು ಸೇದೋದಿಲ್ಲ. ಸೊಲೂಪ ಹೊಗ್ಸೊಪ್ಪು ತಿನ್ತೇನೆ. ಎರಡು ವರ್ಷಾಯ್ತು ವೀಳ್ಯ ಅಭ್ಯಾಸಕ್ಕೆ ಬಿದ್ದು'

'ಅದು ನಂಗೆ ದೊಂಡೆ ಕಂಡಾಗ್ಲೇ ಗೊತ್ತಾಯ್ತು' ಬಳೆಗಾರ ಹೇಳಿದ.

ಆ ಹೇಳಿಕೆ ಅಡುಗೆಯವನಿಗೆ ಇಷ್ಟವಾಗಲಿಲ್ಲ. ಆತ ತಟ್ಟನೆ ಎದ್ದು ನಿಂತು ಬೊಬ್ಬೆ ಹಾಕಿದ.

'ಏಳೋ ಮೇಲೆ. ಹತ್ತಿ ಕೂತಿದ್ದಾನೆ. ಕಂಡ ಕಾಡುಮೂಲೇಂದ ಬರೋ ಜಂತುಗಳಿಗೆ ಕುಕ್ಕರು ಕೂರೋದಕ್ಕಿರೋ ಜಾಗ ಅಲ್ಲ ನಾಲಪ್ಪಾಟ್ಟಿನ ಮುಖಮನೆ. ನಡೀ ಇಲ್ಲಿಂದ.'

'ಯಾಕೆ? ನಾ ಕೂತ್ರೆ ನಿಮ್ಗೆ ಮೈಲಿಗೆ ಆಗ್ತದಾ? ಕಿರಸ್ತಾನ್ರಿಗೆ ಮೈಲಿಗೆಯಿಲ್ಲ ನಾಯ್ರೇ. ಕಿರಸ್ತಾನ್ರು ಮುಟ್ಟಿದ್ರೆ ಪುಣ್ಯದ ನೀರು ಸಿಂಪಡಿಸಿದ ಹಾಗೆ. ಆ ಕೋರಂಕೊಡದ ದೇವಸ್ಥಾನದಲ್ಲಿ ಪೂಜೆ ಮಾಡುವ ಒಬ್ಬ ಕೆಣಿಯನಿಲ್ವೆ - ಕಪ್ಪಾಗಿ. ಒಬ್ಬ ವಡೂರಿನ ನಂಬೂರಿ? ಆ ನಂಬೂರಿ ನನ್ನತ್ರ ಹೇಳಿದ್ದು, ಕಿರಸ್ತಾನ್ರಿಗೆ ಮೈಲಿಗೆಯಿಲ್ಲಾಂತ.'

'ಮೈಲಿಗೆ ಇಲ್ದಿರ್ಬೋದು. ಆದ್ರೂ ನೀನು ವಾಸ್ನೆ ಬರ್ತೀಯಾ! ಮಗೂನ ಹತ್ರ ಕೂರ್ಬೇಡ. ದೊಡ್ಡಮ್ಮಾವ್ರು ಎದ್ದು ಬಂದ್ರೆ ಬೈದು ಕಣ್ಣು ಕಿತ್ತಾರು.'

ಚೇರಪ್ಪನ್ ಪೆಟ್ಟಿಗೆಯಲ್ಲಿದ್ದ ಪೊಟ್ಟಣ ಬಿಚ್ಚಿ ಒಂದು ಹಿಡಿ ಅನ್ನ ಬೇಗ ಬಾಯಲ್ಲಿ ಹಾಕಿದ.

'ತೆಂಗಿನೆಣ್ಣೆ ಸೇರ್ಸಿದ ಅನ್ನ. ಒಂದು ಬಂಗುಡೇನೂ. ಮೆಣ್ಸು ಹಚ್ಚಿ ಹುರ್ದದ್ದು. ನನ್ನ ಸೋದರಿ ಕೊಟ್ಟದ್ದು.'

'ನೀಯೇನು ಹೇಳ್ತಿರೋದು? ಬಂಗುಡೆಯಾ? ನನ್ನ ಪುಣ್ಯಸ್ಥಾನದ ಭಗೋತಿ, ಇಲ್ಲಿರೋರಿಗೆ ಗೊತ್ತಾದ್ರೆ ನನ್ನೂ ಸೇರ್ಸಿ ಗಡಿ ದಾಟ್ಸಿಯಾರಪ್ಪೋ. ಇನ್ನಿಲ್ಲಿ ಪುಣ್ಯದ ನೀರು ಸಿಂಪಡಿಸ್ಬೇಕಲ್ಲೋ!'

ಅಡುಗೆಯವ ಎರಡು ಕೈಗಳನ್ನು ತಲೆಯ ಮೇಲಿಟ್ಟು ಕಣ್ಣು ತಿರುಗಿಸುತ್ತಾ ಬಳೆಗಾರನ ಸುತ್ತ ಸುತ್ತಿದ. ಆತನ ಧ್ವನಿ ಎತ್ತರಕ್ಕೇರಿತು.

'ಎದ್ದು ಹೋಗ್ತೀಯಾ ಇಲ್ವೊ? ನಂಗೆ ಎರಡ್ರಲ್ಲೊಂದು ಈಗ ಗೊತ್ತಾಗ್ಬೇಕು.'

'ನಾ ಹೋಗ್ತೇನೋ ನಾಯ್ರೇ. ನಾಲ್ಕು ಬಳೆ ಮಾರಿ ನಾ ಹೋಗ್ತೇನೆ. ನಂಗಿವತ್ತು ವ್ಯಾಪಾರ ಆಗ್ಲೇ ಇಲ್ಲ. ಎರ್ಡಾಣೆ ದುಡ್ಡಿಲ್ದೆ ನಾ ಮನೆಗೆ ಹೋಗ್ಲಿಕ್ಕಿಲ್ಲ!'

'ನಿನ್ನ ಬಳೆ ಕೊಳ್ಳಿಕ್ಕಿಲ್ಯಾರಿದ್ದಾರೆ? ಇಲ್ಲಿ ಒಟ್ರಾಸಿ ಇರೋದು ಮೂರು ಮುತ್ತಜ್ಜಿಗಳು. ಮತ್ತೀ ಮಗು. ಈ ಮಗೂನ ಕೈಗೆ ನಿನ್ನ ಮುರುಕು ಬಳೆ ತೊಡ್ಸಿದ್ರೆ ಕೇಳ್ಳಿಕ್ಯಾರೂ ಇಲ್ಲಾಂತ ತಿಳ್ಕೊಂಡಿದ್ದೀಯಾ?'

'ಮಗೂಗೆ ಡಬ್ಬರ್ ಬಳೆ ಬೇಕಾ?' ಚೇರಪ್ಪನ್ ನಗುತ್ತ ಕೇಳಿದ. ನಾನು ತಲೆ ಅಲುಗಿಸಿದೆ. ಅಂಚಿನಲ್ಲಿ ಗೆರೆಯಿದ್ದು ಮೀನುಗಳನ್ನು ನೆನಪಿಗೆ ತರುವ ಬಳೆಗಳನ್ನು ಆತ ನನ್ನೆಡೆಗೆ ಚಾಚಿದ.'

'ಮಗೂಗೆಷ್ಟು ಬಳೆ ಬೇಕು?'

'ನಂಗೆ ಒಂದೊಂದು ಕೈಯಲ್ಲೂ ಹತ್ತತ್ತು ಬಳೆ ಬೇಕು.'

'ಹತ್ತು ಬಳೆ ನನ್ನ ಕೈಯಲ್ಲಿಲ್ವಲ್ಲಾ, ಮಗಳೆ. ಆರಾರು ಬಳೆ ಕೊಡ್ತೇನೆ. ಸಾಲ್ದೆ? ಮೂರಾಣೆ ಕೊಟ್ರೆ ಸಾಕಾಯ್ತಾ?'

'ನಂಗೂ ಬೇಕು. ನಾಲ್ಕು ಡಬ್ಬರ್ ಬಳೆ' ಕೆಲಸದವಳು ಹೇಳಿದಳು.

'ನಿಮ್ಮ ಕೈಗಾಗೋದು ಈಗ ಇಲ್ಲ. ಬರೋ ತಿಂಗಳು ತರ್ತೇನೆ.'

'ಪೇಟೇಹಂದೀ ತರ ತೋರ ಆಗುವಾಗ ಎಚ್ಚರಿಕೆ ಇರ್ಬೇಕಿತ್ತು, ಆ ಸೈಸಿನಲ್ಲಿ ಸಿಗ್ಲಿಕ್ಕಿಲ್ಲಾಂತ. ತಂಗಳನ್ನ ಉಣ್ಬೇಡ.'

'ನನ್ನ ಗುರುವಾಯೂರಪ್ಪಾ, ನನ್ನ ಮತ್ತೂ ಶಪಿಸಿದ್ನೇ. ನಾಳೆ ಎದ್ದು ನಡೀಲಿಕ್ಕಾಗ್ಲಿಕ್ಕಿಲ್ಲಾ.'

'ಈ ನಾಯರ ದೃಷ್ಟಿ ತಾಗ್ಲೋದುಂಟಾ ?' ಚೇರಪ್ಪನ್ ಕೇಳಿದ.
ಅಡುಗೆಯುವ ಗಟ್ಟಿಯಾಗಿ ನಕ್ಕ.
'ನಿನ್ನ ಸೋದ್ರಿಗಿರ್ಬೋದು ದೃಷ್ಟಿ ತಾಗ್ಲೋ ಬುದ್ಧಿ.'
'ನನ್ನ ಸೋದ್ರಿಯನ್ನು ಹೇಳೋದ್ಯಾಕೆ ? ನಿನ್ನ ಸೋದ್ರಿ ಹತ್ರ ನಿಮಗ್ಯಾಕೆ ದ್ವೇಷ ?'
ಅಡುಗೆಯುವ ಮತ್ತೂ ನಕ್ಕ. ಅಡುಗೆ ಮನೆಯ ಬಾಗಿಲ ಮೇಲಿನ ಹಲಗೆಯನ್ನು ತಡವಿ ಕೆಲವು ನಾಣ್ಯಗಳನ್ನು ತೆಗೆದು ಆತ ಚೇರಪ್ಪನ್‌ಗೆ ಕೊಟ್ಟ.
'ತೆಕ್ಕೊಳ್ಳೋ ನಿನ್ನ ಮೂರಾಣೆ. ದೊಡ್ಡಮ್ಮಾವ್ರು ಎದ್ದು ಬರ್ಬೇಕಿದ್ರೆ ಹೊರ್ಟ್ಬೋಗು. ಬೈದು ಕಣ್ಣು ಕಿತ್ತಾರು. ಮುಖಮನೆಯೆಲ್ಲ ವಾಸ್ನೆ. ನಿನ್ನೊಬ್ಬ ಸೋದ್ರಿಯೂ ಅವಳು ಕಾಯ್ಸಿದ ಬಂಗುಡೆಯೂ !'
'ವಾಸ್ನೆ ಬರ್ಲಿಕ್ಕಿಲ್ಲ. ಸುಮ್ನೆ ಅನ್ನೋದು. ನಾ ಹೋಗ್ಲಾ ಮಗೂ.'

ಮುಂದೆ ಎಲ್ಲಾ ಬೇಸಿಗೆಯಲ್ಲೂ ನಾನು ಚೇರಪ್ಪನಿಂದ ಬಳೆ ಕೊಂಡುಕೊಳ್ಳುತ್ತಿದ್ದೆ. 1975ರಲ್ಲಿ ಮಧ್ಯವಯಸ್ಕಳಾದ ಓರ್ವ ಗರತಿಯ ಹಾಗೆ ನಾನು ಊರಿಗೆ ತಲುಪಿದಾಗ ಚೇರಪ್ಪನ್ ಆ ದಾರಿಯಾಗಿ ಬಂದ. ಗುಂಗುರು ತಲೆ ಕೂದಲು ನರೆತು ಹೋಗಿತ್ತು. ಅದೇ ಹಳೆಯ ವೇಷ.
'ಚೇರಪ್ಪನಲ್ವೆ ?'
'ಹೌದು.'
'ರಬ್ಬರ್ ಬಳೆಯುಂಟಾ ?'
'ಅಮ್ಮಾವ್ರ ಕೈಯ ಹಾಳ್ತಕ್ಕಾ ?'
'ಹೌದು.'
'ಇಲ್ವಲ್ಲಾ. ಮಕ್ಕಿಗಿರೋ ಸಣ್ಣ ಬಳೆಗಳೇ ನನ್ನ ಪೆಟ್ಟಿಗೇಲಿರೋದು.'
'ನೋಡುವಾ.'
ನೈಲಾನ್ ಬಳೆಗಳು, ಕೆತ್ತನೆಯುಳ್ಳ ಕುಪ್ಪಿಬಳೆಗಳು. ಮೇಣದಲ್ಲಿ ಅಂಟಿಸಿದ ಒಂದು ಪೊಟ್ಟಣ.
'ಆ ಪೊಟ್ಟದಲ್ಲೇನಂತ ?'
'ಅದ್ರಲ್ಲಿ ಸ್ವಲ್ಪ ಅನ್ನ, ತೆಂಗಿನೆಣ್ಣೆ ಹಾಕಿದ ಅನ್ನ. ಒಂದು ಬಂಗುಡೆ. ಮೆಣಸು ಹಚ್ಚಿ ಹುರ್ದ ಮೀನು.'
'ಸೋದ್ರಿ ಹುರ್ದು ಕೊಟ್ಟದ್ದಾ ?'
'ಸೋದ್ರಿಯೊ ? ನಂಗೆ ಸೋದ್ರಿಯಿಲ್ಲ. ಒಟ್ಟು ನಂಗಿದ್ದ ಒಬ್ಬಳೇ ಬಬ್ಬು ಸೋದ್ರಿ ಸತ್ತು ಹದ್ನೈದು ವರ್ಷಾಯ್ತು. ನನ್ನ ಕೊನೆಯ ಮಗಳು ಹುರಿದು ಕೊಟ್ಟದ್ದು. ನನ್ನ ಮೇರಿ.'
'ಹಿಂದೆ ಇಲ್ಲಿಗೆ ಬರ್ತಿದ್ದದ್ದು ನೆನಪುಂಟೋ ಚೇರಪ್ಪಾ ? ಕಮಲಾಂತ ಹೆಸರಿದ್ದ ಒಂದು ಹುಡುಗಿ ಇಲ್ಲಿತ್ತಲ್ಲ. ಅದು ರಬ್ಬರ್ ಬಳೆ ಕೊಳ್ತಿತ್ತು.'
'ಆ... ಆ ಮಗೂನ್ನ ನೆಂಪಿದೆ. ಅದು ಕಲ್ಕತ್ತಕ್ಕೆ ಹೋಯ್ತಲ್ಲ. ಮತ್ತೆ ಅದನ್ನು

ಕಾಣಲೇ ಇಲ್ಲ. ಅದು ಸತ್ತು ಹೋಯ್ತೂಂತ ಕೇಳಿದೆ. ಒಳ್ಳೇ ಬುದ್ಧಿ ಇದ್ದ ಮಗ್ವಾಗಿತ್ತು.'

'ಯಾರು ಹೇಳಿದ್ದು ಆ ಮಗು ಸತ್ತಿತೂಂತ ?'

'ನಾನು ಕೊಟ್ಟಪ್ಪಡಿಯಿಂದ ಕೇಳಿದ್ದು.... ಆ ಮಗು ಆಸ್ಪತ್ರೆಯಲ್ಲಿ ಸತ್ತಿತಂತೆ. ನನ್ನ ಎದೆ ಬಿರಿದೋಯ್ತು. ಅದೂಂದ್ರೆ ನಂಗೆ ಜೀವ. ಚೇರಪ್ಪ ಚೇರಪ್ಪ ಅಂತ ಕರ್ದು ಹಿಂದೇನೇ ಓಡಿ ಬರ್ತಿತ್ತು. ಯಾವಾಗ್ಲೂ ನಗ್ತಿದ್ದ ಮಗು. ಪಾಪ, ಅದು ಸತ್ಹೋಯ್ತು.'

ನನ್ನ ಅತ್ತೆಯ ತಂಗಿಯ ಹಿರಿಯ ಮಗಳು ಲೀಲಾಳನ್ನು ನಾವು ಅಂದು ಲೀಲಕ್ಕ ಎಂದು ಕರೆಯುತ್ತಿದ್ದೆವು.

ಎತ್ತರದ ಸಪೂರವಾದ ದೇಹ. ಎಳ್ಳೆಣ್ಣೆಯ ಬಣ್ಣ. ದಪ್ಪಕ್ಕಿದ್ದರೂ ಆಕರ್ಷಕವಾದ ತುಟಿಗಳು. ಹೆಗಲು ಕುಲುಕುತ್ತ ಯಾರನ್ನೂ ಲೆಕ್ಕಿಸದ ರೀತಿಯ ನಡೆಯುವಿಕೆ. ಲೀಲಕ್ಕನ ಭಾವ ಭಂಗಿಗಳನ್ನು ಅನುಸರಿಸಲು ನಾವು ಪ್ರಯತ್ನಿಸಿದೆವು. ನಮ್ಮೊಂದಿಗೆ ಆಟವಾಡುವುದಕ್ಕೂ ಅವರು ಮನಸ್ಸು ಕೊಡಲಿಲ್ಲ. 'ಬದಿಗೆ ಸರೀರಿ ಮಕ್ಳೇ' ಎಂದು ಹೇಳುತ್ತಾ ಅವರು ನಮ್ಮನ್ನು ದಾರಿಯಿಂದ ಬದಿಗೆ ತಳ್ಳುತ್ತಿದ್ದರು. ಹದಿನಾರರ ಹರೆಯದವರ ಎಲ್ಲಾ ಅಬ್ಬರಗಳನ್ನೂ ಅವರು ಪ್ರದರ್ಶಿಸುತ್ತಿದ್ದರು.

ಆ ನಡುವೆಯೇ ಲೀಲಕ್ಕನ ಪುಸ್ತಕ ರಾಶಿಯಿಂದ ಒಂದು ಪ್ರೇಮ ಪತ್ರ ನೆಲಕ್ಕೆ ಬಿದ್ದುದು. ಪ್ರಾಣಪ್ರಿಯೆಯಾದ ಲೀಲಾಳನ್ನು ಅಗಲಿ ಒಂದು ದಿನ ಕೂಡಾ ಬದುಕಲು ತನ್ನಿಂದಾಗದೆಂದು ಒಬ್ಬಾತ ಅದರಲ್ಲಿ ಬರೆದಿದ್ದ. ಮಾವಂದಿರೂ ದೊಡ್ಡಮ್ಮಂದಿರೂ ಮಾತುಕತೆ ನಡೆಸಿದ ನಂತರ ಕಥಾನಾಯಕಿಯನ್ನು ಕರೆಯಿಸಿ, ಕಾಗದವನ್ನು ಅವಳೆದುರಿಗೆ ಚಾಚಿದರು. ಲೀಲಕ್ಕ ಪತ್ರವನ್ನು ತೆಗೆದು ಜೋರಾಗಿ ನಕ್ಕಳು. ಹಿಂತಿರುಗಿ ನಡೆಯಬೇಕಿದ್ದರೆ ಮಾವ ಕೇಳಿದರು:

'ಇದ್ಯಾರು ಬರೆದ ಪತ್ರ ?'

'ಅಮ್ಮಾಳು ಬರೆದದ್ದು.... ನನ್ನ ಕ್ಲಾಸಿನಲ್ಲಿ ಕಲಿಯುವ ಅಮ್ಮಾಳು.'

ಪರಿಶುದ್ಧಳಾದ ಲೀಲಕ್ಕನನ್ನು ಹೆಚ್ಚು ತಡವಿಲ್ಲದೆ ಆಂಧ್ರ ಪ್ರದೇಶದಲ್ಲಿ ಕೆಲಸದಲ್ಲಿದ್ದ ಒಬ್ಬ ಯುವಕನಿಗೆ ಮನೆಯವರು ಮದುವೆ ಮಾಡಿಕೊಟ್ಟರು. ಲೀಲಕ್ಕನ ಮದುವೆಯ ದಿನ ಧರಿಸಲೆಂದು ಅತ್ತೆಯ ಇನ್ನೋರ್ವ ತಂಗಿಯಾದ ಶಾರದಕ್ಕ ಕೊಯಂಬತ್ತೂರಿನಿಂದ ನನಗೂ ಮಾಲತಿಕುಟ್ಟಿಗೂ ರೇಷ್ಮೆಯ ರವಕೆಗಳನ್ನು ತಂದು ಕೊಟ್ಟಿದ್ದರು. ನಸುನೀಲಿಯ ರೇಷ್ಮೆ ಬಟ್ಟೆಯಲ್ಲಿ ಬಣ್ಣದ ನೂಲುಗಳಿಂದ ಹೂಗಳನ್ನೂ, ಬಳ್ಳಿಗಳನ್ನೂ ಪೋಣಿಸಿದ್ದರು. ಅದರ ಸೌಂದರ್ಯ ಹಾಗೂ ಹೊಳಪು ಕಂಡು ನಾನು ಸ್ತಬ್ಧಳಾದೆ. ಅಷ್ಟು ಮನೋಹರವಾದ ಒಂದು ಉಡುಗೊರೆ ನನ್ನ ಜೀವನದಲ್ಲಿ ಅದಕ್ಕೆ ಮೊದಲಾಗಲೀ ಅನಂತರವಾಗಲೀ ಲಭಿಸಲಿಲ್ಲ. ನನ್ನ ಆಶೆಯನ್ನು ಈಡೇರಿಸುವುದಕ್ಕೆ ಬೇರೆ ದಾರಿಯಿಲ್ಲದೆ ಅಜ್ಜಿ ಶಾರದಕ್ಕನಿಗೆ ರೇಷ್ಮೆ ಬಟ್ಟೆ ತರಲು ಬರೆದಿದ್ದರು. ನನ್ನ ತಂದೆಗೆ ಅಂತಹ ಬೇಡಿಕೆಗಳನ್ನು

ಮುಂದಿಡುವುದರ ಬಗ್ಗೆ ತಿರಸ್ಕಾರವಿತ್ತು. ತನ್ನ ಮಕ್ಕಳು ಕಡಿಮೆ ಕ್ರಯದ, ಅಬ್ಬರವಿಲ್ಲದ ವಸ್ತುಗಳನ್ನು ಮಾತ್ರವೇ ಉಪಯೋಗಿಸಬಹುದೆಂದು ಅವರು ನಂಬಿದ್ದರು. ನಮಗೆ ಅನುಮತಿಸಿದ ಜೀವನ ರೀತಿಯೇ ಅವರ ಮಕ್ಕಳಾಗಿ ಹುಟ್ಟಿದಕ್ಕಿದ್ದ ಶಿಕ್ಷೆಯೂ ಆಗಿತ್ತು.

ನೀಲ ಬಣ್ಣದ ರವಕೆಯ ಮೋಹಕತೆ ನನ್ನನ್ನು ಆಕರ್ಷಿಸಿತ್ತು. ಆಲದೆಲೆಯ ಮೇಲಿನ ಕೃಷ್ಣನ ಪದಕವುಳ್ಳ ಒಂದು ಸರ ನನ್ನ ಬಳಿ ಇತ್ತು. ಮಾಲತಿಕುಟ್ಟಿ ತನ್ನ ಅತ್ತೆಯ ಕಲ್ಲಿರಿಸಿ ಮಾಡಿದ ನೆಕ್ಲೇಸ್ ಧರಿಸಿದ್ದಳು. ಲೀಲಕ್ಕ ಹಳದಿ ರೇಷ್ಮೆ ಸೀರೆ ಉಟ್ಟು ತಲೆಗೆ ಹೂ ಮುಡಿದು ನವ ವಧುವಾದಳು. ಆ ಮದುವೆಯ ನಂತರ ನಾನು ಕೂದಲನ್ನು ಹೆಣೆದಿಡುವುದಕ್ಕೆ ಪ್ರಯತ್ನಿಸತೊಡಗಿದೆ. ಬಾವಿ ಬದಿಯಲ್ಲಿ ಬೆಳೆದು ನಿಂತಿದ್ದ ಮಲ್ಲಿಗೆ ಮೊಗ್ಗುಗಳ ಮಾಲೆಗಳನ್ನು ಮಾಡಲು ನಾನು ಕಲಿತೆ. ಶಾರದಕ್ಕನ ಬಗ್ಗೆ ನಮಗೆಲ್ಲ ತುಂಬ ಗೌರವವಿತ್ತು. ಅವರು ತನ್ನ ಗಂಡ, ಇಂಜಿನಿಯರಾಗಿದ್ದ ಕಾತ್ತೋಳಿನ ಕುಮಾರ ಮೆನೋನ್ ಹಾಗೂ ಮಕ್ಕಳ ಜೊತೆಗೆ ಕೊಯಂಬತ್ತೂರಿನಲ್ಲಿ ವಾಸಿಸುತ್ತಿದ್ದರು. ವರ್ಷಕ್ಕೆ ಮೂರೋ ನಾಲ್ಕೋ ಬಾರಿ ಅವರು ತಮ್ಮ ಫೋರ್ಡ್ ಕಾರಿನಲ್ಲಿ ಊರಿಗೆ ಬರುತ್ತಿದ್ದರು. ದೇವಸ್ಥಾನಗಳ ಸಂದರ್ಶನ ಅವರಿಗೆ ಬಹು ಪ್ರಿಯವಾದ ಕಾರ್ಯಕ್ರಮವಾಗಿತ್ತು. ಆದ್ದರಿಂದ ಯಾವಾಗ ಬರುವುದಿದ್ದರೂ ಎಲ್ಲರಿಗೂ ಹಂಚುವುದಕ್ಕೆ ಬೇಕಾದಷ್ಟು ಬಗೆ ಬಗೆಯ ಪ್ರಸಾದಗಳನ್ನು ಅವರು ತರುತ್ತಿದ್ದರು. ಗಟ್ಟಿ ಪಾಯಸ, ಪಂಚಾಮೃತ, ಕೆಂಪು ನೂಲುಗಳು, ಗಂಧ, ನೈಯಪ್ಪ, ವಡೆ, ಹಣ್ಣು, ಸಕ್ಕರೆ ಮೊದಲಾದುವುಗಳನ್ನೆಲ್ಲ ಆ ಕಾರಿನೊಳಗೆ ಕಾಣಬಹುದಾಗಿತ್ತು. ಮಕ್ಕಳನ್ನು ನೋಡಿಕೊಳ್ಳುವ ಕಲ್ಯಾಣಿಯಮ್ಮ ಎಂಬ ಮುದುಕಿಯೂ ಅವರೊಂದಿಗೆ ಬರುತ್ತಿದ್ದರು. ಆ ಮುದುಕಿಯ ಸ್ವರ ಕರ್ಕಶವಾಗಿತ್ತು. ಅವರ ಮಾತುಕತೆಯನ್ನು ಗಲಾಟೆ ಎಂಬುದಾಗಿ ತಪ್ಪಾಗಿ ತಿಳಿದು ಹಲವು ಸಲ ನಾನು ಜಾಗ ಬಿಟ್ಟು ನಾಲಪ್ಪಾಟ್ಟಿಗೆ ಓಡಿದ್ದುಂಟು. ಶಾರದಕ್ಕನೊಂದಿಗೆ ಆಗೆಲ್ಲ ಮೂವರು ಮಕ್ಕಳು ಇರುತ್ತಿದ್ದರು. ಕೃಷ್ಣ ಕುಮಾರಿ, ರೋಜಿ ಎಂಬ ರಾಜೇಶ್ವರಿ ಮತ್ತು ವಿಜಯನ್. ರೋಜಿಗೆ ಅಂದು ಎದುರು ಭಾಗದ ಹಲ್ಲು ಹೋಗಿದ್ದ ಸಮಯ. ಅವಳ ಮುಗುಳ್ನಗೆಯ ವೈಚಿತ್ರ್ಯವನ್ನು ಇಂದೂ ನಾನು ಮರೆತಿಲ್ಲ. ಒಮ್ಮೆ ಶಾರದಕ್ಕ ಊರಿಗೆ ಬಂದಿದ್ದಾಗ ರೋಜಿ ಜೊತೆಗಿರಲಿಲ್ಲ. ಆ ಹುಡುಗಿ ತೀರಿ ಹೋದಳೆಂದು ಅಜ್ಜಿ ನಾಲಪ್ಪಾಟ್ಟಿನ ಹೊರಮನೆಯಲ್ಲಿ ಕೆಳಸ್ವರದಲ್ಲಿ ಹೇಳಿದರು.

'ರೋಜಿ ಸ್ವರ್ಗಕ್ಕೆ ಹೋದಳೊ ?' ನಾನು ಅಜ್ಜಿಯನ್ನು ಕೇಳಿದೆ.

ಅಜ್ಜಿ ತಲೆ ಅಲುಗಿಸಿದರು.

ರೋಜಿಗೆ ಸ್ವರ್ಗದ ದಾರಿಯನ್ನು ಯಾರು ತೋರಿಸಿಕೊಟ್ಟರೆಂದು ನಾನು ಕೇಳಿದೆ. ಸ್ವರ್ಗಕ್ಕೆ ರೋಜಿ ನಡೆದುಕೊಂಡೇ ಹೋದಳೋ ಎಂದೂ....

ಅಜ್ಜಿ ಮುಂಡಿನ ತುದಿಯಿಂದ ಕಣ್ಣು ಮೂಗುಗಳನ್ನು ಒರಸಿದರು.

'ಹೋಗಿ ಕಲಿ' ಅವರು ಹೇಳಿದರು. ನಮ್ಮೊಂದಿಗೆ ಆಡಲು ಬರುತ್ತಿದ್ದ ರಾಧೆಯ ತಂಗಿ ರುಕ್ಮಿಣಿಯೂ ಅದೇ ಕಾಲಘಟ್ಟದಲ್ಲಿ ತೀರಿ ಹೋದಳು. ಸಾವಿನ ಬಗ್ಗೆ ಇನ್ನಷ್ಟು ತಿಳಿದುಕೊಳ್ಳಲು ನಾನು ಬಯಸಿದೆ. ನಾಲಪ್ಪಾಟ್ಟಿನ ಹೆಂಗಸರು ಆ ವಿಷಯವನ್ನು

ಚರ್ಚೆಗೆತ್ತಿಕೊಳ್ಳುವುದಕ್ಕೆ ಒಪ್ಪಲಿಲ್ಲ. ಕಣ್ಣಾತ್ತಿ ಉಣ್ಣಿಮಾಯುಮ್ಮ ಎಂಬ ಮುದುಕಿಯೇ ಸಾವಿನ ಬಗ್ಗೆ ಸುಮಾರು ವಿವರಣೆಗಳನ್ನು ನನಗೆ ನೀಡಿದ್ದು. ಸಾಯುವಾಗ ನಾಲಗೆ ಬಾಯಿಯಿಂದ ಹೊರಕ್ಕೆ ಬರುತ್ತದೆ ಎಂದೂ ಕಣ್ಣು ತೆರೆದಿರುತ್ತದೆಂದೂ ಅವರು ಹೇಳಿದ್ದರು. 'ಮತ್ತೊಂದು ಆಗಮನ, ಊರ್ಧ್ವ ಶ್ವಾಸದ್ದು. ಅದು ಕೊನೆಯುಸಿರು. ಚೆಂಡೆಯ ಪೆಟ್ಟಿನಂತೆ ಕಿವಿ ಕಿವುಡಾದೀತು' ಉಣ್ಣಿಮಾಯುಮ್ಮ ಹೇಳಿದರು.

'ನೀವು ಯಾರಾದರೂ ಸಾಯೋದನ್ನು ನೋಡಿದ್ದೀರಾ ?' ನಾನು ಕೇಳಿದೆ.

'ಮತ್ತೇ! ನಾನು ನೋಡಿದ್ದೇನೆ. ಯಾರಾದ್ರೂ ಸಾಯ್ತಿಕ್ಕಾದ್ರೂಂತ ಕೇಳಿದ್ರೆ ನಾ ಅಲ್ಹೋಗ್ತೇನೆ. ನಂಗೆ ಎಲ್ಲಾ ಗೊತ್ತುಂಟು ಮಗೂ. ಕಣ್ಣು ಮುಚ್ಚಿಸ್ಲಿಕ್ಕೂ ಕಾಲು ಜೋಡ್ಸಿ ಕಟ್ಲಿಕ್ಕೂ ಬಾಯಿ ಮುಚ್ಲಿಕ್ಕೂ ಎಲ್ಲ ನಂಗೊತ್ತುಂಟು. ಬಾಕಿದ್ದೋರು ಬೆಪ್ಪಾಗಿ ನಿಲ್ಬೇಕು' ಅವರು ಹೇಳಿದರು.

'ನಾಲಪ್ಪಾಟಿನಲ್ಲಿ ಯಾರಾದ್ರೂ ಸಯ್ತಾರಾ ?' ನಾನು ಕೇಳಿದೆ.

'ಸಾಯ್ಲಿಕ್ಕಾದ್ರೆ ಸಾಯ್ತಾರೆ ಮಗು, ಕಾಲನಿಗೆ ಅಲ್ಲೊಂದು ಪುಸ್ತಕವುಂಟು. ಅದ್ರಲ್ಲಿ ಬರ್ದಿಟ್ಟಿರ್ತಾರೆ, ನಮ್ಮೆಸ್ರೆಲ್ಲಾ. ಸಾಯೋ ಸಮಯ ಯಾವ್ದೂಂತಾನೂ ಬರ್ದಿಟ್ಟಿರ್ತಾರೆ.'

'ನನ್ನ ಹೆಸ್ರಿದ್ದೀತಾ ?'

'ಮತ್ತೇ! ಮಗೂನಾ ಹೆಸ್ರೂ ಇದ್ದೀತು. ಸಂಶಯವೇ ಇಲ್ಲ.'

'ಅಜ್ಜಿ ಹೆಸ್ರೊ ?'

'ಅಜ್ಜಿದ್ದೂ ಇದ್ದೀತು.'

'ಅಜ್ಜೀ ಹೆಸ್ರಿರ್ಲಿಕ್ಕಿಲ್ಲ' ನಾನು ದನಿಯನ್ನು ಎತ್ತರಿಸುತ್ತ ಹೇಳಿದೆ.

ಉಣ್ಣಿಮಾಯುಮ್ಮ ಗಟ್ಟಿಯಾಗಿ ನಕ್ಕರು: 'ಕೊಚ್ಚಮ್ಮನೂ ಮನುಷ್ಯ ಸ್ತ್ರೀಯಲ್ವೇ ? ದೇವತಾ ಸ್ತ್ರೀಯಲ್ವಲ್ಲ ? ಹುಟ್ಟಿದ್ರೆ ಸಾಯ್ದೆ ಇದ್ದೀತಾ ? ಅದಕ್ಯಾಕೆ ನನ್ನತ್ರ ಸಿಟ್ಟು ಮಾಡೋದು ಮಗು ? ಕೋಣವನ್ನೂ ಹಗ್ಗವನ್ನೂ ಹಿಡ್ಕೊಂಡು ಜೀವ ಕೊಂಡೋಗ್ಲಿಕ್ಕೆ ನಾನಲ್ವಲ್ಲಾ ಬರೋದು ?'

ಆ ವರ್ಷ ನಾಲಪ್ಪಾಟ್ಟಿನ ಮನೆಯಲ್ಲಿ ಒಂದು ಮರಣ ಸಂಭವಿಸಿತು. ಪಕ್ಷವಾತ ಹಿಡಿದು ಮೂರು ವರ್ಷ ಅಲುಗಾಟವಿಲ್ಲದೆ ಮಲಗಿದ್ದ ಅಮ್ಮಾಳುವಿನ ಮುತ್ತಜ್ಜಿ. ಸ್ವಲ್ಪ ಹೊತ್ತು ಅವರ ಮೃತ ದೇಹವನ್ನು ಬಡಗು ಭಾವಡಿಯಲ್ಲಿ ಹೊದೆಸಿ ಮಲಗಿಸಿದ್ದರು. ಆ ನಂತರ ಸುಡುವುದಕ್ಕಾಗಿ ತೆಂಕಹಿತ್ತಿಲಿಗೆ ತೆಗೆದುಕೊಂಡು ಹೋದರು. ಯಾರೂ ಅಳಲಿಲ್ಲ.

ಅಮ್ಮಾಳು ಎಂಬ ಮುತ್ತಜ್ಜಿ ಚಿತಾಗ್ನಿಯಿಂದ ಎದ್ದು ಆಕಾಶಕ್ಕೆ ಹಾರಿರಬಹುದೆಂದು ನಾನು ಭಾವಿಸಿದ್ದೆ. ನಾನು ಏನನ್ನೂ ಕಂಡಿರಲಿಲ್ಲ.

ಮಧ್ಯಾಹ್ನದ ಊಟ ಆದ ಕೂಡಲೇ ಹೊಸ ಓಟ್ಟಂತುಳ್ಳಲಿನವನು ಅಂಬಾಳತ್ತಿನ ಮುಖದ್ವಾರದ ಉತ್ತರ ಪಶ್ಚಿಮ ದಿಕ್ಕಿನಲ್ಲಿರುವ ಸಣ್ಣ ಕೋಣೆಗೆ ಸರಿದು ತನ್ನ ಮುಖಕ್ಕೆ ಅರದಾಳ ಹಚ್ಚತೊಡಗಿದ. ಆತನ ಪೂರ್ವತಯಾರಿಯನ್ನು

ನೋಡುವುದಕ್ಕೆ ಮಾಲತಿ ಕುಟ್ಟಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದಳು. ವೇಷಭೂಷಣಗಳನ್ನೂ ಇತರ ಸಾಹಿತ್ಯಗಳನ್ನೂ ಮೇಜಿನ ಮೇಲೆ ಹರಡುತ್ತಾ ಚಂಡೆಯವ ಕೇಳಿದ:

'ಅಪ್ಪುಣ್ಣಿಯಣ್ಣನಿಗೆ ಕುಡಿಯೋದಕ್ಕೆ ಮಜ್ಜಿಗೆ ನೀರು ಬೇಕೆ ?'

'ಬೇಡವಾ. ಈಗ ಹೊಟ್ಟೆ ತುಂಬಾ ಉಂಡದ್ದಲ್ವಾ. ಒಂದು ಗಿಂಡಿ ತಣ್ಣೀರು ಇಲ್ಲಿಟ್ರೆ ಸಾಕು' ಪುನ್ನಯೂರ್‌ಕುಳದಲ್ಲಿ ಯಾವತ್ತೂ ಕುಣಿಯುವುದಕ್ಕೆ ಬರುವ ವ್ಯಕ್ತಿಯ ಹಾಗೆ ಈ ಹೊಸಬ ಇರಲಿಲ್ಲ. ಬೆಳ್ಳಗೆ, ತೋರವಿಲ್ಲದ ಶರೀರ. ಹೆಗಲ ಮೇಲೆ ಬಿದ್ದು ಕೊಂಡಿರುವ ಕೂದಲು. ಸ್ವಲ್ಪ ದಿಕ್ಕು ತಪ್ಪಿದ್ದರೂ ಆಕರ್ಷಕವಾಗಿರುವ ಹಲ್ಲುಗಳು.

'ಇಂದಿನ ಕಥೆ ಏನೂಂತ ಗೊತ್ತುಂಟೋ ?' ಆತ ಕನ್ನಡಿಯಿಂದ ಕಣ್ಣು ತೆಗೆಯದೆ ಕೇಳಿದ.

ನಾವೇನೂ ಮಾತಾಡಲಿಲ್ಲ.

'ನಿಮ್ಮತ್ರವಾ ಕೇಳಿದ್ದು ಮಕ್ಕಳೇ.'

'ನಮಗೊತ್ತಿಲ್ಲ' ಮಾಲತಿ ಕುಟ್ಟಿ ಹೇಳಿದಳು.

'ಕಲ್ಯಾಣ ಸೌಗಂಧಿಕಂ.'

ಆತ ತನ್ನ ಕೂದಲನ್ನು ಬಾಚಿ ಸೇರಿಸಿ ಒಂದು ಬಟ್ಟೆಯಲ್ಲಿ ಕಟ್ಟಿ ನೆತ್ತಿಯ ಮೇಲೆ ನಿಲ್ಲಿಸಿದ. ಆಮೇಲೆ ಕಿರೀಟವನ್ನು ತಲೆಗಿಟ್ಟು ಮತ್ತೂ ಕನ್ನಡಿ ನೋಡಿದ.

'ಕಲ್ಯಾಣ ಸೌಗಂಧಿಕದ ಕಥೆ ಗೊತ್ತಲ್ವಾ ?'

'ಇಲ್ಲ' ನಾನು ಹೇಳಿದೆ.

ಅಯ್ಯೋ! ದೊಡ್ಡ ಕುಟುಂಬದ ಮಕ್ಕಳ್ವೆ ? ಕಲ್ಯಾಣ ಸೌಗಂಧಿಕದ ಕಥೆ ಗೊತ್ತಿಲ್ಲಂತೆ. ಇದು ಯಾರತ್ರವೂ ಹೇಳ್ಬೇಡಿ, ನಾಚಿಕೆಗೇಡು!

'ಮಂಗನ ಕಥೆಯಲ್ವ ?' ಮಾಲತಿಕುಟ್ಟಿ ಕೇಳಿದಳು.

'ಮಂಗಲ್ಲ, ಸಾಕ್ಷಾತ್ ಹನುಮಂತ. ಭೀಮಸೇನ ಪಾಂಚಾಲಿಗಾಗಿ ಕಲ್ಯಾಣ ಸೌಗಂಧಿಕ ಕೊಯ್ದು ತರೋದಕ್ಕೆ ತನ್ನ ಗದೆ ತೆಕ್ಕೊಂಡು ಹೋಗೋ ಕಥೆ. ಪಾಂಚಾಲಿ ಯಾರೂಂತ ಗೊತ್ತಲ್ಲವಾ ?'

'ಗೊತ್ತುಂಟು.'

'ಏಳು ಲೋಕದಲ್ಲೂ ಇರದ ಸುಂದರಿ. ಪಂಚಪಾಂಡವರ ಪತ್ನಿ. ಪಟ್ಟ ಮಹಿಷಿ. ಲೋಕೈಕ ಸುಂದರಿ. ಲೋಕೈಕ ಸುಂದರಿಯಂತಂದ್ರೆ ಹೇಗಿರ್ಬಹುದೂಂತ ಗೊತ್ತುಂಟೋ ಮಕ್ಳೇ ?'

'ಇಲ್ಲ' ನಾನು ಹೇಳಿದೆ. ಮಾಲತಿಕುಟ್ಟಿ ಮುಖ ತಿರುಗಿಸಿದಳು. ಒಂದು ಕಾಲನ್ನು ಆ ಕೋಣೆಯಿಂದ ಹೊರಗಿಟ್ಟಾಗಿತ್ತು.

'ಲೋಕೈಕ ಸುಂದರೀಂತ ಹೇಳಿದರೆ ಅದಕ್ಕೊಂದು ಉದಾಹರಣೆಯಾಗಿ ಯಾರನ್ನಪ್ಪ ನಾನು ತೋರಿಸೋದು ? ಇಲ್ಲೇನು ಅಂತ ಲೋಕ ಸುಂದರಿ ಹುಟ್ಟಿರ್ಲಿಕ್ಕಿಲ್ಲ. ಇದೊಂದು ಗುಡ್ಡಗಾಡು. ಈ ಪುನ್ನಯೂರ್‌ಕುಳ. ಕೆಲವರು ವಲಸೆ ಬಂದ್ರೂಂತಾನೂ ಹೇಳ್ತಾರೆ. ಯಾವುದು ಸರೀಂತ ಯಾರಿಗ್ಗೊತ್ತು ? ಇಲ್ಲಿ ಒಬ್ಬ

ಸುಂದರಿಯನ್ನಾದರೂ ಕಾಣ್ಬಹುದೂಂತ ಅನ್ನಿಸೋದಿಲ್ಲ. ತ್ರಿಚೂರಿಗೆ ಹೋಗ್ಬೇಕು, ಸುಂದರಿಯರನ್ನು ನೋಡ್ಬೇಕ್ಕಿದ್ರೆ. ಅತೀ ಬೆಳಿಗ್ಗೆ ವಡಕ್ಕುನ್ನಾಥ ದೇವಾಲಯದಲ್ಲಿ ನಿಂತ್ರೆ ಸಾಕು. ನನ್ನತ್ರ ಕೃಷ್ಣನ್ ನಂಬೂದಿರಿ ಹೇಳಿದ್ದು. ನೋಡ್ಲಿಕ್ಕೆ ದೇವತಾ ಸ್ತ್ರೀಯರಂತಿರ್ತಾರೆ - ಕೈ ಮುಗೀಲಿಕ್ಕೆ ಬರೋ ಹೆಣ್ಣುಡುಗೇರು. ನಂಬೂದಿರಿ ಹೇಳ್ತಾರೆ, ಏ ಅಪ್ಪುಣ್ಣಿ, ನಿಂಗೊಂದು ಸುಂದರಿಯನ್ನೇ ಮದ್ವೆ ಮಾಡ್ಬೇಕೂಂತ ಹಟ ಇದ್ರೆ ತ್ರಿಚೂರಿಗೆ ಹೋಗ್ಬೇಕು. ಒಂದೋ ವಡಕ್ಕುನ್ನಾಥನ ಕ್ಷೇತ್ರಕ್ಕೆ. ಅಲ್ಲಿದ್ರೆ ಪಾರಕಾವಿನ ಭಗವತೀ ಕ್ಷೇತ್ರಕ್ಕೆ. ಬೆಳಿಗ್ಗೆ ಹುಡುಗೇರ ಸಮೂಹವೇ ಬರ್ತದೆ. ಹೆಣ್ಣಿ ಸೈನ್ಯ. ದೇವತಾ ಸ್ತ್ರೀಗಳ ಹಾಗೆ ತೋರ್ತಾರೆ. ತ್ರಿಚೂರಿಗೋಗ್ಬೇಕು. ಹೋಗದೆ ಆಗ್ಲಿಕ್ಕಿಲ್ಲ.'

'ನಿಮ್ಮ ಮದ್ವೆ ಆಗಿದ್ಯಾ ?' ನಾನು ಕೇಳಿದೆ.

'ಯಾಕೆ, ಮಗೂಗೆ ನನ್ನನ್ನು ಮದ್ವೆ ಆಗ್ಬೇಕೂಂತುಂಟ ?'

ನನ್ನ ಕಿವಿಗಳೂ, ಕುತ್ತಿಗೆಯೂ ಥಟ್ಟನೆ ಬಿಸಿಯಾದಂತೆ ನನಗೆ ಭಾಸವಾಯಿತು. ನಾನು ಮಾಲತಿಕುಟ್ಟಿಯ ಕೈಯನ್ನು ಗಟ್ಟಿಯಾಗಿ ಹಿಡಿದೆ.

'ನಾವು ಹೋಗೋಣ' ಮಾಲತಿಕುಟ್ಟಿ ಹೇಳಿದಳು.

ಕುಣಿತದವ ಗಟ್ಟಿಯಾಗಿ ನಗಾಡಿದ. ಆತನಿಗೆ ಕಿರೀಟ ಕಟ್ಟಿಯಾಗಿತ್ತು. ಕಣ್ಣುಗಳು ಕೆಂಪಗೆ ಬಣ್ಣ ಬದಲಿಸಿತ್ತು. 'ನನ್ನ ಕಂಡ್ರೆ ಹೆದ್ರಿಕೆ ಆಗ್ತದಾ ? ನಾನು ಮಕ್ಕನ್ನು ಹಿಡಿದು ತಿನ್ನೋದಿಲ್ಲ. ನಿನ್ನ ಹೆಸರೆಂತಾ ?'

'ಕಮಲ !'

'ನಾಲಪ್ಪಾಟ್ಟಿನ ಬಾಲಾಮಣಿಯಮ್ಮೆಯ ಮಗಳು. ಅಲ್ವ ?'

'ಹ್ಹೂಂ.'

'ನಿನ್ನ ಬಳೆ ನಂಕೊಡ್ತಿಯಾ ಮಗೂ ? ನಿನ್ನ ನೆಂಪಿಗೇಂತ ಯಾವತ್ತೂ ಕೈಗೆ ಹಾಕೊಳ್ಳೋದಕ್ಕೆ, ಕೊಡ್ತಿಯಾ ?'

'ಬೇಡ. ಏನೂ ಕೊಡ್ಬೇಡ' ಮಾಲತಿಕುಟ್ಟಿ ಹೇಳಿದಳು.

'ಅದು ನಾಲಪ್ಪಾಟ್ಟಿನ ಹುಡುಗಿ. ಕೇಳಿದ್ರೆ ಕೊಡದಿರ್ಲಿಕ್ಕಿಲ್ಲ. ಬಳೆ ಕೊಡ್ತಿಯಾ ಮಗೂ ?'

ನಾನೂ ಬಳೆ ತೆಗೆದು ಆತನಿಗೆ ಕೊಟ್ಟೆ. ಪ್ಲಾಸ್ಟಿಕ್ಕಿನಲ್ಲಿ ತಯಾರಿಸಿದ ಒಂದು ಕಪ್ಪು ಬಳೆಯಾಗಿತ್ತದು. ಅದನ್ನು ತನ್ನ ಎಡಗೈಗೆ ತುರುಕಿಸುವುದಕ್ಕೆ ಕುಣಿತದವ ಬಹಳ ಹೊತ್ತು ಪ್ರಯತ್ನಿಸಿದ. ಕೊನೆಗೂ ಆತ ಗೆದ್ದ.

'ನನ್ನ ಕೈಗೆ ಒಳ್ಳೆದಾಗಿ ಸೇರ್ತದೆ. ಮಗೂಗಿಂತ ಒಳ್ಳೆ ಬಣ್ಣ ನಂಗುಂಟಲ್ಲಾ' ಆತ ಹೇಳಿದ.

'ಹೋಗ್ವಾ' ಮಾಲತಿಕುಟ್ಟಿ ನನ್ನ ಕೈಹಿಡಿದುಕೊಂಡು ಗಟ್ಟಿ ಹೇಳಿದಳು.

'ಬಳೆ ನಂಗೆ ಚನ್ನಾಗಿ ಹೊಂತದೆ, ಅಲ್ವೆ ಮಗು ? ನನ್ನ ಕೈಲೇ ಚೆಂದ ಕಾಣ್ತದೆ. ಒಳ್ಳೆ ಚೆಂದ ಕಾಣ್ತದೆ. ಅಲ್ವೆ ಮಗೂ ?' ಆತ ಕೇಳಿದ.

ನಾವು ಕೂಡಲೇ ಅಲ್ಲಿಂದ ಒಳಕ್ಕೆ ಓಡಿದೆವು.

'ಅವನನ್ನು ನಂಗೆ ನೋಡಿದ್ರೆ ಆಗೂದಿಲ್ಲ. ಅವನ ನೋಟ ನೋಡ್ಲಿಲ್ವ ? ಒಪ್ಪ

ಖೂಳನ ಹಾಗೆ ನಂಗೆ ಕಂಡ' ಮಾಲತಿಕುಟ್ಟಿ ಹೇಳಿದಳು.

'ಖೂಳಾಂದ್ರೆ ಏನರ್ಥ ?'

'ಖೂಳಾಂದ್ರೆ ಖೂಳ.'

ಕಲ್ಯಾಣ ಸೌಗಂಧಿಕಂ ಕುಣಿತ ನಡೆಯೂದ್ರೆಡೆಯಲ್ಲೂ ಆ ಮನುಷ್ಯ ನನ್ನನ್ನೂ ಮಾಲತಿಕುಟ್ಟಿಯನ್ನೂ ಕೊಂಡಾಟ ಮಾಡ್ಲಿಕ್ಕೆ ಪ್ರಯತ್ನಿಸುತ್ತಿದ್ದ.

ನೋಡೆಲೋ ನಮ್ಮ ಮಾರ್ಗದಿ ಮಲಗಿರುವ
ಮಂಗನೇ ನೀನೊಮ್ಮೆ ದಾರಿ ಬಿಡು ನನಗೆ

ಎಂದು ಹೇಳುವಾಗ ಆತ ನಮ್ಮ ಮುಖವನ್ನೇ ನೋಡುತ್ತಿದ್ದ. ಅದನ್ನು ಗಮನಿಸುತ್ತಿದ್ದ ಹುಡುಗರು ಮುಸಿ ಮುಸಿ ನಕ್ಕರು.

'ನನ್ನ ಕಂಡ್ರೆ ಮಂಗನ ಹಾಗೆ ತೋರ್ತದಾ ?'

ಆ ರಾತ್ರಿ ಹಾಸಿಗೆಯಲ್ಲಿ ಮಲಗುತ್ತಾ ನಾನು ಅಜ್ಜಿಯಲ್ಲಿ ಕೇಳಿದೆ.

'ನೀನ್ಯಾಕೆ ಇಂಥ ಕೋಡಂಗಿ ಪ್ರಶ್ನೆಗಳನ್ನು ಕೇಳೋದು ಕಮಲಾ ?'

'ನನ್ನ ಕಂಡ್ರೆ ಏನನ್ನಿಸ್ತದೆ ?'

'ಒಳ್ಳೆ ಮಗೂಂತ ಅನ್ನಿಸ್ತದೆ.'

'ನಾನಾ, ಪಾಂಚಾಲಿಯಾ ? ಯಾರು ಸುಂದರಿ ? ಕಲ್ಯಾಣ ಸೌಗಂಧಿಕ ಬೇಕೂಂತ ಹೇಳ್ಳಿಲ್ವ ? ಆ ಪಾಂಚಾಲಿ. ನಾನಾ, ಅವಳಾ ಸುಂದರಿ ?'

'ಶಿವ ಶಿವಾ, ಇವಳೆಂಥಾ ಪ್ರಶ್ನೆಗಳನ್ನು ಕೇಳ್ತಿದ್ದಾಳೆ ! ನಿಂಗೇನು ಬೇಕೀಗಾ ? ನೀನು ಕಾಣ್ಲಿಕ್ಕೆ ಚಂದ ಇಲ್ಲಾಂತ ಯಾರಾದ್ರೂ ಹೇಳಿದ್ರಾ ? ಏನಾಯ್ತೀಗ ?'

ನಾನು ಅಜ್ಜಿಯ ರವಿಕೆಯಲ್ಲಿ ಮುಖ ಮರೆಸಿ ಬಿಕ್ಕಳಿಸಿ ಅತ್ತೆ. ಅಳುವಿನ ಕಾರಣಗಳು ಅಂದು ನನಗೇ ಸ್ಪಷ್ಟವಿರಲಿಲ್ಲ.

ಮಾರನೆಯ ದಿವಸ ಮಾಲತಿಕುಟ್ಟಿ ನನ್ನ ಬಳೆಯ ಘಟನೆಯನ್ನು ಅಜ್ಜಿಯೊಂದಿಗೆ ಹೇಳಿದಳು. ಅಜ್ಜಿಯ ಮುಖದಲ್ಲಿ ಸಿಡುಕು ಕಾಣಿಸಿತು.

'ಮಕ್ಕಳ ಕೈಯಿಂದ ಬಳೆಯನ್ನು ತೆಗೆಯೋದೆ ! ಇದೆಂಥ ಅವಸ್ಥೆ ?'

'ಕೇಳಿದ್ದಕ್ಕೆ ಕೊಟ್ಟದ್ದು.'

'ಕೇಳ್ಬಹುದಾ ? ಪಿಟ್ಟಾಸಿ. ಅನಾಗರಿಕ. ಹಳೆಯ ಕುಣಿತದೋನೇ ವಾಸಿ. ಇವನನ್ನು ಇನ್ನಿಲ್ಲಿ ಕುಣಿಸೋದು ಬೇಡ.'

ಅಂಬಾಳತ್ತಿನಲ್ಲಿ ಕುಣಿಯುವಾಗ ನಮ್ಮ ಬಳಿ ತೋರಿಸಿದ ದುರ್ಬುದ್ಧಿಯನ್ನೇನೂ ನಾಲಪ್ಪಾಟ್ಟಿನಲ್ಲಿ ಆ ಕುಣಿತದವ ತೋರಿಸಲಿಲ್ಲ. ಮಾವನ ಟೀಕೆಗಳಿಗೆ ಹೆದರಿ ಆತ ಏಕಾಗ್ರತೆಯಿಂದ ಕುಣಿದ. ಶೀತಂಕನ್ ಎಂಬ ಕುಣಿತವಾಗಿತ್ತದು. ಆತ ನಾಲಪ್ಪಾಟ್ಟಿನಲ್ಲಿ ಅಂದು ಸಂಜೆಗೆ ಪ್ರದರ್ಶಿಸಿದ. ಮಾವನ ಒತ್ತಾಯಕ್ಕೆ ಬೇಕಾಗಿ ಕುಣಿತ.

'ನಂಗಷ್ಟು ಚೆನ್ನಾಗಿ ಗೊತ್ತಿಲ್ಲ. ನಾರಾಯಣ ಮೇನೋನ್ರು ಹೇಳೋವಾಗ ಕುಣೀಬೇಕಲ್ಲಾ ?' ವೇಷ ಕಟ್ಟುವಾಗ ಆತ ಹೇಳಿದ. ಶೀತಂಕನ್ ಕುಣಿತಕ್ಕೆ ಲಾಡಿಗಳನ್ನು ಸುತ್ತಿ ಕಟ್ಟಿ ಸೊಂಟವನ್ನು ದಪ್ಪ ಮಾಡಲಿಲ್ಲ. ಬೊಟ್ಟು ಬೊಟ್ಟುವಿರುವ ಒಂದು ಪಂಚೆಯನ್ನು ಸೊಂಟಕ್ಕೆ ಸುತ್ತಿದ. ಕಾಲು ದೀಪದ, ತೂಗು ದೀಪದ ಬೆಳಕಿನಲ್ಲಿ ಆ

ಹೊಸ ವೇಷ ಅತಿ ಮನೋಹರವಾಗಿ ತೋರಿತು. ಕೆಲಸದಾಕೆ ಎಡೆಗೆಡೆಗೆ ನನ್ನನ್ನು ಚಿವುಟುತ್ತ ಹೇಳಿದಳು: ಸಾಕ್ಷಾತ್ ದೇವೇಂದ್ರನ ಹಾಗೆ. ಅಲ್ವೆ ಮಗೂ ?'

ಮಾವ ಆತನಿಗೆ ಏಳು ಬೆಳ್ಳಿಯ ರೂಪ್ಯಾಗಳನ್ನೂ ಅತ್ತೆ ಒಂದು ಮುಂಡನ್ನೂ ಕೊಡಮಾಡಿದರು. ಓಣದ ದಿವಸಗಳಲ್ಲಿ ಮತ್ತೆ ಬರುವಂತೆ ಮಾವ ಆತನಿಗೆ ಹೇಳಿದರು.

'ಪರವರ ಕುಣಿತ ಕುಣೀಬೇಕು.'

'ಅದಕ್ಕೆ ತೆಂಗಿನ ತಿರಿಯ ವೇಷ ಆಗ್ಬೇಕು.... ನಾನೀವರೆಗೆ ಕುಣೀಲಿಲ್ಲ. ತಮಗೆ ಆಗ್ಬೇ ಸಿದ್ಧಾಂತಿದ್ದರೆ ಕುಣಿದೇನು. ಅಷ್ಟೆ.' ಆತನ ಮುದುಕನಾದ ತಂದೆಗೆ ಅಜ್ಜಿ ಒಂದಷ್ಟು ವೀಳ್ಯದೆಲೆಯನ್ನೂ ಹೊಗೆ ಸೊಪ್ಪನ್ನೂ ಒಂದು ಕಾಗದದಲ್ಲಿ ಕಟ್ಟಿಕೊಟ್ಟರು. ಮುದುಕ ಅಜ್ಜಿಗೆ ಬಾಗಿ ವಂದಿಸಿದ.

ಆತ ಮೆಟ್ಟಲು ದಾಟುವಾಗಲಾದರೂ ನನ್ನನ್ನು ನೋಡಬಹುದೆಂದೂ ವಿದಾಯ ಹೇಳಬಹುದೆಂದೂ ನಾನು ಭಾವಿಸಿದ್ದೆ. ನಾನು ಬಳೆ ದಾನ ಮಾಡಿದ್ದಕ್ಕೆ ಪ್ರತಿಫಲವಾಗಿಯಾದರೂ ಒಮ್ಮೆ ನಗುವನೆಂದು.

ಆತನ ತಂದೆಯೂ ಚೆಂಡೆಯವನೂ ಬೇಗ ಬೇಗನೆ ಹೆಜ್ಜೆ ಹಾಕುತ್ತಾ ಉತ್ತರ ದಿಕ್ಕಿಗೆ ನಡೆದರು. ನಡೆಯನ್ನು ನಿಧಾನಗೊಳಿಸುತ್ತಾ ಆತ ಬೇಲಿಯ ಬಳಿ ನಿಂತು ಕೆಲಸದವಳೊಂದಿಗೆ ಏನೋ ಹೇಳಿದ. ಅವಳು ಅದಕ್ಕುತ್ತರವಾಗಿ ಏನೋ ಹೇಳಿದಳು. ಕೊನೆಯಲ್ಲಿ ಆತ ಗದ್ದೆಯ ಬದಿಯಿಂದಲಾಗಿ ನಡೆದು ಮರೆಯಾದ ಮೇಲೆ ಕೆಲಸದವಳು ನನ್ನ ಬಳಿಗೆ ಬಂದಳು. ಅವಳ ಮೇಲ್ತುಟಿಯಲ್ಲಿ ಬೆವರಿನ ಹನಿಗಳು ಅಂಟಿ ನಿಂತಿತ್ತು. ಅವಳ ಶರೀರ ಬೆವರಿನ ವಾಸನೆಯಿಂದ ಕೂಡಿತ್ತು.

'ದೇವೇಂದ್ರನೇನೂ ಅಲ್ಲ. ಒಬ್ಬ ಮಾಮೂಲಿ ಮನುಷ್ಯ' ನಾನು ಹೇಳಿದೆ. ಕೆಲಸದವಳು ಗಟ್ಟಿಯಾಗಿ ನಕ್ಕಳು.

'ಬಾರೀ ದೊಡ್ಡ ಆಸಾಮಿಯಾತ. ನಾನೋರ್ವ ಲೋಕೈಕ ಸುಂದರಿಯಂತೆ! ನನ್ನನ್ನು ಲೇವಡಿ ಮಾಡ್ಲಿಕ್ಕೆ ಹೇಳಿದ್ದಾಯ್ತಾ.'

'ಅದಕ್ಕೆ ನೀಯೇನು ಹೇಳಿದೆ ?'

'ದುಡ್ಡಿಲ್ಲೋರನ್ನು ಸುಮ್ಮಗ್ರೆ ಲೇವಡಿ ಮಾಡ್ಬೇಡೀಂತ ಹೇಳಿದೆ. ನಾ ಬೇರೆಂತ ಹೇಳೋದು. ಅಲ್ವೆ ಮಗೂ ?'

'ಮಾಲತಿಕುಟ್ಟಿ ಹೇಳಿದ್ಲು, ಅವ ಒಬ್ಬ ದುಷ್ಟಾಂತ.'

'ಮಾಲತಿಕುಟ್ಟಿಗೆ ಒಳ್ಳೆ ಬುದ್ಧುಂಟು. ಅದು ನಿಮ್ಮಾಗ್ರ ಬರೀ ಪೊಟ್ಟಿ ಹುಡ್ಗಿಯಲ್ಲ, ಎಲ್ರನ್ನೂ ನಂಬಿಬಿಡ್ಲಿಕ್ಕೆ. ಮಾಲತಿಕುಟ್ಟಿ ಹೇಳಿದ್ದು ಸರಿ. ಅವನೊಬ್ಬ ದುಷ್ಟನೆ. ಆ ಓರೆ ನಿಂತು ನೋಡ್ವ ನೋಟ ನೋಡಿದಾಗ್ಲೆ ನಂಗೆ ಗೊತ್ತಾಗಿತ್ತು. ಅವ ಒಬ್ಬ ದುಷ್ಟಾಂತ....'

ಸ್ವಲ್ಪ ಕಾಲ ಎಲಿಯಬಾಟ್ ಶಾಲೆ ಎಂದೇ ಕರೆಯಲಾಗುತ್ತಿದ್ದ ಒಂದು ಶಾಲೆಯಲ್ಲಿ ನಾನು ಕಲಿತದ್ದಾಗಿ ನೆನಪು. ಕಲ್ಕತ್ತೆ ಬಿಟ್ಟು ತ್ರಿಶೂರಿನ ಕಾನ್ವೆಂಟ್ ಶಾಲೆಗೆ ಸೇರುವುದಕ್ಕೆ

ನನ್ನನ್ನು ತಂದೆ ಪ್ರತಿನಿತ್ಯ ಒತ್ತಾಯಿಸುತ್ತಿದ್ದ ಕಾಲವದು. ತ್ರಿಶೂರಿನ ಅಪರಿಚಿತರ ನಡುವೆ ಆ ಪುಟ್ಟ ಮಗುವನು ಬಿಟ್ಟು ವಿದಾಯ ಹೇಳಿ ಹಿಂದಿರುಗುವುದಕ್ಕೆ 'ವಿ. ಎಂ. ನಾಯರ್'ಗೆ ಹೇಗೆ ಮನಸ್ಸು ಬಂದೀತು ಎಂಬುದಾಗಿ ಹಲವು ಬಾರಿ ತೆಂಕಮೂಲೆಯ ಕಂಬಗಳೊಂದಿಗೆ, ಕುಣಿದು ಕುಣಿದು ವರಾಂದಕ್ಕೆ ಬರುತ್ತಿದ್ದ ದೇಗುಲದ ಪಾರಿವಾಳಗಳೊಂದಿಗೆ - ನನ್ನ ಅಜ್ಜಿ ಕೇಳುತ್ತಿದ್ದ ಕಾಲ. ನನ್ನ ವಿದ್ಯಾಭ್ಯಾಸ ಸಂಬಂಧವಾದ ಈ ವ್ಯವಸ್ಥೆಗಳು ಮುತ್ತಜ್ಜಿಗಾಗಲೀ ದೊಡ್ಡಮ್ಮನಿಗಾಗಲೀ ಚಿಕ್ಕಮ್ಮನಿಗಾಗಲೀ ಏನೇನೂ ಸರಿಬರಲಿಲ್ಲ. 'ಅದು ಮಗುವಲ್ವೆ ? ರಾತ್ರಿ ಏನಾದ್ರೂ ಕಂಡು ಹೆದರಿದ್ರೆ ?' ಮುತ್ತಜ್ಜಿಯೆಂಬ ಮುಗ್ಧ ಅಜ್ಜಿಯನ್ನು ಕೇಳಿದರು. ಅವರಿಗೊಂದು ನಂಬಿಕೆಯಿತ್ತು: ಲೋಕದ ಎಲ್ಲಾ ರೋಗ ರುಜಿನಗಳಿಗೂ ಪೂರ್ವ ಸೂಚನೆಯಾಗಿ ಭೀಕರ ಸ್ವಪ್ನವೊಂದನ್ನು ರೋಗಬಾಧಿತರಾಗುವವರು ಕಾಣುವರೆಂದು.

'ನಿಂಗೆ ಸನ್ನಿ ಹಿಡಿದದ್ದು ನೆನಪಿಲ್ವೆ ಕೊಚ್ಚೂ. ನಿಂಗವತ್ತು ಎರಡೂವರೆ ವರ್ಷ ಪ್ರಾಯ. ಶುಕ್ರವಾರ ರಾತ್ರಿ ಮಲಗಿ ಬೆಳಗಾಗ್ತಿರಬೇಕಾದ್ರೆ ಶುರುವಾದ್ದು ನಿನ್ನ ಬೊಬ್ಬೆ. ಹೇಗೆ ಕೇಳಿದ್ರೂ ಒಬ್ರತ್ರಾನೂ ಹೇಳ್ಳಿಲ್ಲ. ನಾನು ಇಡೀ ಹೆದ್ರಿ ಕಂಗಾಲು. ಬಚ್ಚಲು ಮನೆಯಿಂದ ಏನಾದ್ರೂ ಹರಿದಾಡೋ ಜಂತು ಬಂದು ಮಗೂನ್ನ ಕಚ್ಚಿ ಬಿಟ್ಟಿತೋಂತ ನಾನು ಹೆದರಿದ್ದೆ. ಬಟ್ಟೆ ಬಿಚ್ಚಿ ನೆಲದಲ್ಲಿ ಮಲಗಿಸಿ ನಾವೆಲ್ಲಾ ಸೇರಿ ನೋಡಿದ್ವು. ಒಂದು ಗೀರು ಕೂಡ ಇರಲಿಲ್ಲ. ಬಿಲ್ಲಿನ ಹಾಗೆ ಡೊಂಕಾಗಿ ಬೊಬ್ಬೆ! ಅಂಬಾಳತ್ತಿನಿಂದ ಮಾಧವ ಮೇನೋನ್ ಕೂಡ ಎದ್ದು ಬಂದ್ರು. ಅವತ್ತು ಮಾಧವ ಮೇನೋನ್‌ಗೆ ಚಿಲ್ಲರೆ ಔಷಧಿಗಳೆಲ್ಲ ಗೊತ್ತಿದ್ದ ಸಮಯ. ದೊಡ್ಡಮ್ಮನಿಗೆ ಹೊಟ್ಟೆ ಗಟ್ಟಿಯಾದಾಗ ಮಾಧವ ಮೇನೋನ್ ಇಂಗು ತೇದು ಹೊಟ್ಟೆಗೆ ಹಚ್ಚಲು ಹೇಳಿದ್ದರು. ಎರಡು ಗಂಟೆಗಳಲ್ಲಿ ಸಮಾಧಾನ ಸಿಕ್ತಾಯ್ತಾ ?'

ಮುತ್ತಜ್ಜಿಯ ಉದ್ದುದ್ದ ಬೆಳೆಯುತ್ತಿದ್ದ ಮಾತುಕತೆ ಕೇಳಿ ಕುಳಿತುಕೊಳ್ಳಲು ನಾವು ಮಕ್ಕಳು ಮಾತ್ರ ಉತ್ಸಾಹ ತೋರಿಸುತ್ತಿದ್ದೆವು. ಉಳಿದವರಿಗೆಲ್ಲ ಮನೆಗೆಲಸವೊ, ಪುಸ್ತಕ ಪಾರಾಯಣವೊ, ಅಧ್ಯಯನವೋ ಮಾಡಿ ಮುಗಿಸಬೇಕಿತ್ತಲ್ಲ. ಮುತ್ತಜ್ಜಿಯ ಶುದ್ಧ ಮನಸ್ಸನ್ನು ಎಲ್ಲರೂ ಬುದ್ಧಿಯ ದಾರಿದ್ರ್ಯವೆಂದೇ ಬಗೆದಿದ್ದರು. ತನಗಾಗಿ ಏನನ್ನೂ ಅವರು ಕೇಳಿದ್ದಿಲ್ಲ. ಧನಿಕನೂ ಆಡಂಬರಶಾಲಿಯೂ ಆಗಿದ್ದ ಪುನ್ನತ್ತೂರ್‌ಕೋಟೆಯ ಹಿರಿಯ ತಂಬುರಾನ್‌ರ ಮಗಳಾಗಿ ಜನಿಸಿಯೂ ವಿವಾಹದಂದು ಸರ್ವಾಲಂಕಾರ ಭೂಷಿತೆಯಾಗಿ ಆನೆಯ ಮೇಲೆ ಕುಳಿತು ದೇವಾಲಯ ದರ್ಶನ ಮಾಡಿಯೂ ಮುತ್ತಜ್ಜಿ ಆಡಂಬರ ಜೀವನದಲ್ಲಿ ತಾನು ಕಂಡುಕೊಳ್ಳಬಹುದಾಗಿದ್ದ ಸ್ಥಾನವನ್ನು ಕಂಡುಕೊಳ್ಳಲಿಲ್ಲ. ಸಂಪತ್ತಿನ ಭಾಷೆ ಅವರಿಗೆ ತಿಳಿಯದೆ ಹೋಯಿತು. ಧನದಾಹದ ಕಾಗೆ ಕೂಗುಗಳನ್ನು ಗಮನಿಸಲೂ ಅವರು ಆಸಕ್ತಿ ತೋರಲಿಲ್ಲ. ಹತ್ತೊಂಬತ್ತರ ಹರೆಯದಲ್ಲಿ ತನ್ನ ಏಕಮಾತ್ರ ಪುತ್ರಿ ಕೊಚ್ಚೂವನ್ನು ಎತ್ತಿಕೊಂಡು ಪಲ್ಲಕ್ಕಿಯಲ್ಲಿ ಅನುಚರರ ಗಟ್ಟಿಯಾದ ಹೂಂಕಾರಗಳೊಂದಿಗೆ ನಾಲಪ್ಪಾಟ್ಟಿಗೆ ಬಂದು ತಲುಪಿದ ಅಮ್ಮುಕುಟ್ಟಿಯನ್ನು ಬೇಸರಪಡಿಸುವ ಪ್ರಶ್ನೆಗಳೊಂದನ್ನೂ ಅಲ್ಲಿನವರು ಕೇಳಲಿಲ್ಲ.

'ಇನ್ನು ನಾನು ಅರಮನೆಗೆ ಹೋಗೋದಿಲ್ಲ. ಕೊಚ್ಚು ಇನ್ನಿಲ್ಲೇ ಬೆಳೆಯಲಿ' ಸ್ವಾಭಿಮಾನಿಯಾದ ಓರ್ವ ಹೆಂಗಸಿನ ಪುನರಾಗಮನ. ಪತಿಯನ್ನೂ ಆತನ ಶಯ್ಯಾಗೃಹ ಒದಗಿಸಿಕೊಡುವ ಸುರಕ್ಷಿತತೆಯನ್ನೂ ಧಿಕ್ಕರಿಸುತ್ತ ನಾಲಪ್ಪಾಟ್ಟಿನ ಸಾಂಬಾರೂ ಹುಳಿಯೂ ಸಾಕು ತನಗೆ ಎಂದು ದೃಢವಾಗಿ ಘೋಳುತ್ತ ಸುಂದರಿಯಾದ ಹೆಣ್ಣುಮಗಳು ಹಿಂದಿರುಗಿ ಬಂದಿದ್ದಳು. ವಿವಾಹದಿಂದ ವಿಮೋಚನೆ ಪಡೆಯಲು ಬಯಸಿದಳು - ಪುರುಷನ ಯಜಮಾನಿಕೆಯಿಂದ ವಿಮೋಚನೆ ಪಡೆಯಲು ಕಾತರಿಸಿದಳು. ನಾಲಪ್ಪಾಟ್ಟಿನ ಒಂದೇ ಒಂದು ಹುಬ್ಬು ಕೂಡಾ ಮೇಲೇಳಲಿಲ್ಲ. ಯಾರ ಮುಖವೂ ಕಪ್ಪಿಡಲಿಲ್ಲ. ಆಮೇಲೆ ಎಷ್ಟೋ ಕಾಲ ಕಳೆದು ಪ್ರೇಮದ ಬಗೆಗಿನ ಮೊದಲ ಪಾಠ ಕಲಿಯಬಯಸುವ ಕೌಮಾರ್ಯದಲ್ಲಿ ನಾನು ಮುತ್ತಜ್ಜಿಯೊಂದಿಗೆ ಅವರು ಹೊರಟುಬಂದುದ್ದರ ಬಗ್ಗೆ ಕೇಳಿದೆ. ಅವರು ಹೊಟ್ಟೆ ಬಿರಿದು ನಕ್ಕರು.

'ಕ್ಷಮೆ ಕೊಡೋದಕ್ಕೆ ನನ್ನಿಂದ ಸಾಧ್ಯ ಆಗ್ಲಿಲ್ಲ ಅಷ್ಟೆ' ಅವರು ಹೇಳಿದರು. ವಾರ್ಧಕ್ಯದಲ್ಲೂ ಅವರ ದೇಹಕ್ಕೆ ಮನೋಹರತ್ವವಿತ್ತು. ಸುಕ್ಕುಸುಕ್ಕಾದ ಚಿನ್ನದ ತಗಡಿನಲ್ಲಿ ನಿರ್ಮಿಸಿದ ಒಂದು ಚಿಕ್ಕ ಗೊಂಬೆ. ಕೊನೆಯ ದಿನಗಳಲ್ಲಿ ಅವರ ಬಲಕೆನ್ನೆಯಲ್ಲಿ ಮುಕ್ಕಾಲಿನಷ್ಟು ಅಗಲಕ್ಕೆ ಒಂದು ಮಚ್ಚೆ ಕಾಣಿಸಿಕೊಂಡಿತ್ತು. ಕಣ್ಣುಗಳು ಪುರಲೆಹಕ್ಕಿಗಳ ಹಾಗೆ ಚಂಚಲವೂ ಸುಂದರವೂ ಆಗಿದ್ದುವು. ಕೂದಲಿಗೆ ಎಣ್ಣೆಯ ವಾಸನೆ. ಒಮ್ಮೆಯೂ ಬಣ್ಣಗುಂದದ ಕಾಲಬೆರಳುಗಳು.

'ಸುಂದರಿಯಾಗಿದ್ದಿರೊ ?' ನಾನು ಕೇಳಿದೆ.

'ಕುತ್ತಿಗೆಯಲ್ಲಿ ಕೊಳಲು, ತಾಲಿಗಳನ್ನು ಕೋದಮಾಲೆ ಧರಿಸುತ್ತಿದ್ದೆ. ಎಡಗೈಯಲ್ಲಿ ಜೋಡುಕಡಗವೂ ರಾಮಾಯಣ ಕೆತ್ತಿದ ಬಳೆಯೂ. ಬಲಗೈಯಲ್ಲಿ ರತ್ನಕೂರಿಸಿದ ಮಂಗ್ಳೂರ ಬಳೆಗಳು. ನನ್ನ ಬೆಂಡೋಲೆಯ ಮಧ್ಯದಲ್ಲಿ ಪಚ್ಚೆ ಕಲ್ಲಿತ್ತು. ಆ ಬೆಂಡೋಲೆಯೇ ಬಿದ್ಹೋಯ್ತು. ಗೋವಿಂದಪುರಕ್ಕೆ ಏಕಾದಶಿಗೆ ನಮಸ್ಕರಿಸ್ಲಿಕ್ಕೆ ಹೋಗಿದ್ದಾಗ. ಅವತ್ತು ಮಾರಾತ್ರಿನ ಹುಡುಗೇರ ಅರಸಿನ ದೀಪವಿತ್ತು. ಅದನ್ನು ನೋಡ್ಲಿಕೇಂತ ನಾನು ಹೋದದ್ದು. ಮಡಪ್ಪಲಾಯಿಯ ಶಂಕುಣ್ಣಿಯೋರೂ ನಮ್ಜೊತೆ ಇದ್ರು. ಹಿಂದಿನಿಂದ ಕಲ್ಪಾಂಚೇರಿಯ ಒಬ್ಬ ಹುಡುಗ, ಅದು ಕೇಶವನಾ ನಾರಾಯಣನಾಂತ ಈಗ ನೆನಪಿಲ್ಲ. ಅಂಬಾಳತ್ತಿನಿಂದ ಕಲ್ಯಾಣಿಯಮ್ಮ ಕೈಮುಗೀಲಿಕ್ಕೆ ಬಂದಿದ್ರು. ಹಣೆಗೆ ಪಚ್ಚೆ ಕುತ್ತಿದ್ರು. ಕೆಂಪು ಕಲ್ಲಿನ ಮೂಗುತಿ, ಬಿಳಿ ಕಲ್ಲಿಟ್ಟ ನೆಕ್‌ಲೇಸು, ಇಪ್ಪತ್ನಾಲ್ಕು ಮಂಗ್ಳೂರ ಬಳೆ ಕೈಗೂ ಹಾಕಿ ನಡಕೊಂಡು ಬರೋದನ್ನು ನೋಡಿದೋರೆಲ್ಲ ಬೆರಗಾಗಿಬಿಟ್ರೂಂತ ಹೇಳಿದ್ರ ಸಾಲ್ದೆ ? ಮಾಧವ ಮೇನೋನ್ ಚಿತ್ತೂರಿಗೆ ಹೋಗಿ ಅತಿ ಸುಂದರಿಯಾದ ಹೆಂಡತಿಯನ್ನು ತಂದು ಪುನ್ನಯೂರ್ ಕುಳದಲ್ಲಿ ನಿಲ್ಲಿಸಿದ್ದಾರೇಂತ ಕೇಳದವರಿಲ್ಲ'. ಆದರೆ ಹೆಂಗಸ್ರನ್ನು ಹೊರಗೆ ಕರೆದುಕೊಂಡು ಹೋಗುವುದೇ ಕುಟುಂಬದ ಅಂತಸ್ತಿಗೆ ಕೊರತೆ ಎಂದು ನಂಬಿದ್ದ ಮಾಧವ ಮೇನೋನ್ ತನ್ನ ಹೆಂಡತಿಯ ಯೌವನ ಸಂಪೂರ್ಣವಾಗಿ ಕೊನೆಮುಟ್ಟಿದ ಮೇಲೇನೇ ದೇವಸ್ಥಾನಕ್ಕೆ ಹೋಗಿ ದರ್ಶನ ಪಡೆಯಲು ಅವರಿಗೆ ಅನುಮತಿ ನೀಡಿದ್ದು. ಗಂಡಸಾಗಿದ್ದರೆ ಅವನಿಗೆ ಸಂಪತ್ತು ಬೇಕು. ಹೆಂಗಸಾಗಿದ್ದರೆ ಸೌಂದರ್ಯವೂ. ಆ ಎರಡು ದಾಳಗಳಿಲ್ಲದವರು ಉತ್ತಮ ದಾಂಪತ್ಯ ನಡೆಸುವುದು

ಸಾಧ್ಯವಿಲ್ಲ ಎಂದು ಫ್ಯೂಡಲ್ ರಾಜರುಗಳು ನಂಬಿದ್ದರು.

ತಾನೊಬ್ಬ ತಪ್ಪಿತಸ್ಥನೆಂದು ತಿಳಿದೂ ಮುತ್ತಜ್ಜಿಯು ತಂಬುರಾನ್ ಕ್ಷಮೆಕೇಳಲೆಂದು ನಾಲಪ್ಪಾಟ್ಟಿಗೆ ಬರಲಿಲ್ಲ. ಒಂದು ಪತ್ರ ಕೂಡಾ ಬರೆಯಲಿಲ್ಲ.

ಉಪದೇಶಿಸುವ ಕ್ರಿಯೆ ಆ ದಿನಗಳಲ್ಲಿ ಒಂದು ಪ್ರಧಾನ ಹವ್ಯಾಸವಾಗೇನೂ ಇರಲಿಲ್ಲ. ಉಪದೇಶ ಕೇಳುವ ಆಸಕ್ತಿ ಯಾರಿಗೂ ಇರಲಿಲ್ಲ. ಕ್ರೈಸ್ತರು ಮಾತ್ರ ದುಡ್ಡು ಸುರಿದು ಉಪದೇಶಿಸುವವರನ್ನು ಕರೆಸಿ, ಗೌರವಿಸಿ ತಮ್ಮ ವಿನಯವನ್ನು ವ್ಯಕ್ತಪಡಿಸುತ್ತಿದ್ದರು. ಅಜ್ಜಿಯೇ ತನ್ನ ಸ್ತ್ರೀವಾದಿ ತಾಯಿಯ ಉದರಕ್ಕೆ ಆತು ಮಲಗಿಕೊಂಡು ಪಲ್ಲಕ್ಕಿಯಲ್ಲಿ ನಾಲಪ್ಪಾಟ್ಟಿಗೆ ಬಂದು ತಲುಪಿದವರು. ಚಿರಳಯದ ರಾಜಕುಟುಂಬದ ಮುಖಲಕ್ಷಣವನ್ನು ವಹಿಸಿಕೊಂಡವರು. ಚಂದ್ರನ ಹಾಗೆ ಅಗಲವಾದ ಮುಖವೂ ದುಂಡಗಿನ ಶರೀರವೂ ದೊಡ್ಡದಾದ ಕಣ್ಣುಗಳೂ ಬೆವರಿಗೆ ಅವ್ಯಕ್ತವಾದ ಸುಗಂಧವೂ ಉಳ್ಳ ಬದುಕನ್ನು ಬದುಕುವವರು. ತಂದೆಯ ಉಡುಗೊರೆಯಾಗಿ ಬರಿಯ ಒಂದು ಚಿನ್ನದ ಸಂಕೋಲೆಯನ್ನೂ ಗಾಜು ಹಾಕಿದ ಅವರ ಚಿತ್ರವನ್ನೂ ಪಡೆದುಕೊಂಡ ಮಗಳು. ಅಜ್ಜಿ ಸ್ತ್ರೀವಾದಿಯಾಗಿರಲಿಲ್ಲ. ಆದರೆ, ಅತಿ ಹೆಚ್ಚು ಸ್ತ್ರೀತ್ವ ಉಳ್ಳವರಾಗಿದ್ದರು. ಆದ್ದರಿಂದಲೇ ಇರಬೇಕು, ಗಂಡನ ಸ್ನೇಹ ಪ್ರಕಟಣೆಗಳಲ್ಲೂ ಸೇವೆಯಲ್ಲೂ ಅವರು ಸ್ವರ್ಗವನ್ನೇ ಕಂಡುಕೊಂಡದ್ದು. ಅವರ ಅಧೈರ್ಯ, ಅವರ ಅಸಹಾಯಕತೆ, ಅವರ ಅಬಲತೆ ಇವೆಲ್ಲಾ ಸೇರಿಯೇ ಬೆಟ್ಟತ್ತೂರಿನ ಹಿರಿಯ ಕುಂಜುಣ್ಣಿ ತಂಬುರಾನರಿಗೆ ಅವರು ಅತ್ಯಂತ ಹತ್ತಿರದವರಾದದ್ದು. ಅವರು ನಿಜವಾದ ಗಂಡಸಾಗಿದ್ದರು. ಅವರಿಗೆ ದಯಾಶೀಲೆಯೂ ಮೃದುವಚನೆಯೂ ಆದ ಓರ್ವ ಪತ್ನಿಯ ಅಗತ್ಯವಿತ್ತು. ಅಜ್ಜಿ ವಿಧವೆಯಾದ ಬಳಿಕ ಹುಟ್ಟಿದವಳು ನಾನು. ಅವರು ಯಾವತ್ತೂ ಹೇಳುತ್ತಿದ್ದರು: 'ಅವರವರ ಗಂಡಂದಿರೊಂದಿಗೆ ಅಪ್ರಿಯವಾದದ್ದನ್ನು ಹೇಳಕೂಡದು.'

'ಅಪ್ರಿಯ ಅಂದರೇನು ?' ನಾನು ಕೇಳುವುದುಂಟು.

'ಅಪ್ರಿಯ ಎಂದೆನಿಸುವುದೇನನ್ನೂ ಹೇಳಬಾರದು. ಅಷ್ಟೆ.'

'ಅಪ್ರಿಯ ಏನೂಂತ ಗೊತ್ತಿಲ್ಲದೆ ಅಪ್ರಿಯ ಹೇಳಿದರೆ ?'

'ಹಾಗೇನಿಲ್ಲ. ನೀನು ಆತನನ್ನು ದೇವರೆಂದೇ ಬಗೆದು ಬದುಕ್ಬೇಕು.'

'ನೀವು ನಿಮ್ಮ ತಂದೆಯನ್ನು ಪೂಜಿಸಿದ್ದಿರೊ ? ಮುತ್ತಜ್ಜನನ್ನು ದೇವರೂಂತ ಕರೆದಿದ್ದಿರೂ ?'

'ಹ್ಞೂಂ. ಹೋಗಿ ಸ್ನಾನ ಮಾಡು ಕಮ್ಲಾ. ಮಕ್ಕಳು ಮನೆಯೊಳಗೇ ಹುದುಗಬಾರ್ದು. ಅಲ್ದಿದ್ರೆ ಹೋಗಿ ಪಾಠ ಪುಸ್ತಕ ಓದು.'

'ನಂಗೆ ಪಾಠ ಪುಸ್ತಕ ಸಾಕಾಯ್ತು. ಎಲ್ಲ ಕಲ್ತಾಯ್ತು. ನಂಗೊಂದು ಮದ್ವೆ ಮಾಡ್ಬೇಕು. ಒಳ್ಳೆ ಚಂದದ ಒಬ್ಬ ತಂಬುರಾನ್‌ನನ್ನು. ಹಣೆಯಲ್ಲಿ ಗೋಪೀ ಚಂದನ ಧರಿಸಿದ ತಂಬುರಾನ್. ನಂಗೆ ಶಾಲೆ ಸಾಕಾಯ್ತು ಸಣ್ಣಜ್ಜಿ.'

ನಾನು ಅತೃಪ್ತಿಯೊಂದಿಗೆ ಅವರ ಮಡಿಲಲ್ಲಿ ತಲೆಯಿಟ್ಟು ಮಲಗಿದೆ.

'ನಿಂಗೆ ಹುಚ್ಚು ಕಮ್ಲಾ. ಹೀಗೆಲ್ಲ ಮಾವನ ಎದ್ರು ಹೇಳ್ಬೇಡಾಯ್ತಾ. ಹೆಣ್ಣುಡುಗೀ ಯರು ಹೀಗೆಲ್ಲ ಮಾತಾಡಿದ್ರೆ ಭಾರೀ ಅಪ್ರಾಯ್ತಾ. ಮಾವನ ಎದ್ರು ಹೇಳ್ಬೇಡಾಯ್ತಾ.'

'ನಂಗೆ ಮದ್ವೆ ಮಾಡುವ ಪ್ರಾಯಾಯ್ತೂಂತ ತೋರ್ತದೆ.'

'ಅದ್ಯಾಕೆ ಹಾಗೆ ತೋರಿದ್ದು?'

'ಮಾರಾತಾಟ್ಟಿನ ತಮ್ಮನನ್ನೂ ಅಂಬಾಳತ್ತಿನ ಉಣ್ಣಿಯಣ್ಣನನ್ನೂ ಶಾಲೆಯ ಗೋವಿಂದ ಕುರುಪ್ಪನ್ನೆಲ್ಲ ನೋಡುವಾಗ ನಂಗೆ ಮದ್ವೆಯಾಗುವಾಂತ ಆಗ್ತದೆ.'

'ಛೆ... ಛೆ... ಎಂಥದ್ದೆಲ್ಲ ಹುಚ್ಚು ಈ ಕಮ್ಲ ಹೇಳ್ತಿರೋದು! ನಿಂಗೆ ಏಳು ವರ್ಷ ಪೂರ್ತಿಯಾಗ್ಬೇಕಷ್ಟೆ ಮಗೂ. ಏಳು ವರ್ಷದಲ್ಲಿ ಯಾರಾದ್ರೂ ಮದ್ವೆ ಆಗ್ತಾರಾ? ಹದಿನೈದಾದ್ರೂ ಆಗ್ಬೇಡ್ವೆ ಮದ್ವೆ ಮಾಡಿಕೊಡ್ಲಿಕ್ಕೆ. ಈಗ ಮದ್ವೆ ಮಾಡಿಕೊಟ್ರೆ ನೀನು ಹೇಳಿದ ಮಕ್ಕೆಲ್ಲ ಸೇರಿ ನಿನ್ನನ್ನು ತೊಟ್ಲಲ್ಲಿ ಹಾಕಿ ಆಡಿಸ್ಬೇಕಾದೀತು, ಬಾಯಿಗೆ ಅನ್ನ ಉಂಡೆ ಮಾಡಿ ಕೊಡ್ಬೇಕಾದೀತು, ಬಟ್ಟೆ ಕಳಚಿ ಸ್ನಾನ ಮಾಡಿಸ್ಬೇಕಾದೀತು, ಕೊನೆಗೆ ಅವರು ಹೇಳ್ಯಾರು - ನಮಗಿಷ್ಟು ಚಿಕ್ಕ ಹೆಂಡ್ತಿ ಬೇಡಾಂತ. ನಮಗೆ ಬೇಕಾದ್ದು ಅನ್ನ, ಸಾಂಬಾರು ಮಾಡ್ಲಿಕ್ಕೆ ಗೊತ್ತಿರುವ ಹೆಂಡ್ತೀಂತ. ಮುಚ್ಚಿದ ಬಾಗಿಲನ್ನು ತೆರೀಲಿಕ್ಕಾಗುವ ಹೆಂಡತೀಂ...'

'ಸಾಕು ಸಾಕು ಕೊಚ್ಚುವಜ್ಜಿ. ಇನ್ನು ಹೇಳ್ಬೇಡಿ. ನನಗೆ ಯಾರೂ ಸಿಗ್ಲಿಕ್ಕಿಲ್ಲ. ನನ್ನನ್ನು ಮದ್ವೆ ಮಾಡ್ಲಿಕ್ಕೆ ಯಾರೂ ಬರ್ಲಿಕ್ಕಿಲ್ಲ. ಅಲ್ವೆ?' ಅಜ್ಜಿ ನನ್ನನ್ನು ತನ್ನ ಕೈಗಳಿಂದ ಅಪ್ಪಿ ಹಿಡಿದು ಮತ್ತೆ ನಿದ್ದೆಗಾಗಿ ಮಲಗಿಸಿದರು. ಅವರು ಹಾಡಿದರು... 'ತಪ್ಪೋ ತಪ್ಪೋ ತಪ್ಪಾಣಿ, ದೊಡ್ಡ ಕೊಡದಲ್ಲೇನುಂಟು, ನಾಕೊಳಗ ಬತ್ತದ ಅನ್ನವುಂಟು. ಅಮ್ಮೋರು ಕಾಯ್ಸಿದ ಮಜ್ಜಿಗೆಯೂ.....'

'ಕಮಲೆಗೆ ಹಾಡು ಕೇಳಿದ ತಕ್ಷಣ ನಿದ್ದೆ ಹತ್ತಿ ಬಿಡ್ತದೆ, ಅಲ್ವೆ?' ಮುತ್ತಜ್ಜಿ ಕೇಳಿದರು. 'ಇವಳನ್ನು ಒಬ್ಬ ಭಾಗವತರಿಗೆ ಮದ್ವೆ ಮಾಡಿ ಕೊಟ್ರಾಗ್ಬೋದು.'

'ಕುರುಡ ಭಾಗವತರಿಗಾ? ನಮ್ಮ ಮನೆಗೆ ದುಡ್ಡು ಕೇಳ್ಲಿಕ್ಕೆ ಬರುವ ಭಾಗವತರಿಗಾ? ಅವು ಮುದುಕನಲ್ವ ಅಜ್ಜಿ? ನಂಗೆ ಮುದುಕರನ್ನು ಮದ್ವೆ ಮಾಡೋದು ಬೇಡ. ಮುದುಕನಿಗೆ ನನ್ನ ಮದ್ವೆ ಮಾಡ್ಸಿದ್ರೆ ನಾ ಸತ್ಹೋಗ್ತೇನೆ.'

'ಮುದುಕನಾದ್ರೆ ಒಳ್ಳೇದು ಮಗೂ' ಮುತ್ತಜ್ಜಿ ಜೇಷ್ಟಮಧು ಜಗಿಯುತ್ತ ಹೇಳಿದರು: ಅವು ಒಂದು ಮೂಲೆಯಲ್ಲಿ ಮಲಕ್ಕೊಂಡು ನಿದ್ದೆ ಹೋಗ್ತವೆ. ಮುದುಕರಿಂದ ಏನೂ ತೊಂದ್ರೆಯಾಗ್ಲಿಕ್ಕಿಲ್ಲ. ಯುವಕರನ್ನು ಮದ್ವೆ ಮಾಡಿದ್ರೆ ಪ್ರತಿನಿತ್ಯ ಅಳ್ಬೇಕಾದೀತು.'

'ಇನ್ನು ವಿ.ಎಂ. ನಾಯರ್‌ಗೆ ಮುದುಕನನ್ನು ಹುಡ್ಕೊಂಡು ನಡಿಯೋ ಕೆಲ್ಸಾನೂ ಇಲ್ವೆ? ನಮ್ಮ ವೋಡಪ್ಪಿಲಾಯಿಯ ಶಂಕುಣ್ಣಿನಾಯರಾದ್ರೋ? ಅಲ್ಲಿದ್ರೆ ಹಿಂದೆ ನಾಟಕದಲ್ಲಿ ಕಲಿಯ ಪಾತ್ರ ಮಾಡ್ತಿದ್ದ ಚನ್ನಾತ್ತೇಲೆಯ ನಾರಾಯಣನ್ ನಾಯರಾದ್ರೋ?' ಅಜ್ಜಿ ನಕ್ಕೂ ನಕ್ಕೂ ನನ್ನ ಹಾಸಿಗೆಯಲ್ಲಿ ಮಲಗಿ ಅತ್ತ ಇತ್ತ ಉರುಳಾಡಿದರು. ನಗುವಾಗಲೆಲ್ಲ ಅವರ ಕೆನ್ನೆಯೂ ಕಿವಿಗಳೂ ಕೆಂಪಾಗುತ್ತಿದ್ದುವು.

'ನಾನೊಂದು ಉಪಾಯ ಹೇಳ್ತೇನೆ. ನಮ್ಮ ಅಂಬಾಳತ್ತಿನ ದಾಸನನ್ನು ಇವಳಿಗೆ ಮದುವೆ ಮಾಡಿಸುವ. ದಾಸ, ಮುದ್ಕನ ವೇಷಕಟ್ಟಿ ನಕ್ಲಿ ಗಡ್ಡ ಇಟ್ಟು ಇಲ್ಲಿಗೆ ಬರ್ತಿದ್ನಲ್ಲ, ನಮ್ಮನ್ನು ಹೆದ್ರಿಸ್ಲಿಕ್ಕೆ. ಕಮಲ ಊರಲ್ಲಿರುವಾಗ ರಜೆ ಮಾಡಿ ಬರ್ಲಿಕ್ಕೆ ಬರೀಬೇಕು.'

'ಅಯ್ಯೊ ಬೇಡ. ಬಾಯಲ್ಲಿ ನೀರುಳ್ಳಿ ವಾಸ್ನೆ ಇರೋ ಜನ ಅಲ್ವ? ದಾಸಣ್ಣನನ್ನು ಕರೆಸ್ಬೇಡ. ಅವರು ನೀರುಳ್ಳಿ ಸಾಂಬಾರಿನಲ್ಲಿ ಇಡ್ಲಿ ತಿಂದು ಇಲ್ಲಿಗೆ ಬಂದು ನನ್ನ ಹತ್ರಕ್ಕೆ ಬಾಯಿತಂದು ಮಾತಾಡ್ತಾರೆ. ನಂಗಾಗ ವಾಂತಿ ಬಂದಾಗಾಗ್ತದೆ. ನಂಗೆ ನೀರುಳ್ಳಿ ತಿನ್ನದವರು ಸಾಕು.'

'ಹಾಗಾದ್ರೆ ನಿಂಗೆ ನಂಬೂರಿಯೋ ತಂಬ್ರಾನೋ ಆದ್ರೆ ಸಾಕು. ಅಲ್ವೆ?'

'ಮೂಷಿಕಸ್ತ್ರೀ ಮತ್ತೆಯೂ ಮೂಷಿಕಸ್ತ್ರೀಯಾಗಿಯೇ ಹುಟ್ತಾಳೆ' ಅಜ್ಜಿ ಹೇಳಿದಳು.

'ನಂಬೂದಿರಿ ಸಿಕ್ಬೇಕಿದ್ರೆ ಹೆಚ್ಚು ದೂರ ಹೋಗ್ಬೇಡ. ನಮ್ಮ ಕಾಟ್ಟುಮಾಡದಲ್ಲಿ ಹುಡುಕಿದ್ರೆ ಸಾಕು. ಹಳೆಯ ನೆಂಟರೂ....'

ಅಜ್ಜಿಯೂ ಮುತ್ತಜ್ಜಿಯೂ ಗಟ್ಟಿಯಾಗಿ ನಗುತ್ತಿದ್ದರು. ಕೊನೆಗೆ ಅಜ್ಜಿ ಹೇಳಿದರು: 'ಇವಳ್ಯಾವಾಗ ಬೆಳೆಯುವುದು? ಬಾಯಿಗೆ ಬಂದದ್ದೆಲ್ಲ ಈ ಬೆಪ್ಪಿಗೆ ಹಾಡಾಯ್ತು. ಬುದ್ಧಿಗೆ ಸಾಕಷ್ಟು ಬೆಳವಣಿಗೆಯಿಲ್ಲಾಂತ ನನಗೆ ಕೆಲವೊಮ್ಮೆ ತೋರಿಹೋಗ್ತದೆ. ಎಂಥದ್ದೆಲ್ಲ ಕೇಳ್ತಾಳೇಂತಿಲ್ಲ.' 'ಇವಳಿಗೆ ಒಳ್ಳೆಯದೆಂದ್ರೆ ಕಾನ್ವೆಂಟೇ. ಮಾಧವನ್ ನಾಯರ ಇಷ್ಟವೂ ನೆರವೇರಲಿ. ಇಲ್ಲಿದ್ರೆ ಪರಿಷ್ಕಾರ ಕಲಿಯೋದಿಲ್ಲಾಂತಲ್ವೆ ಆಕ್ಷೇಪ?'

'ನನಗೆ ಪರಿಷ್ಕಾರ ಕಲಿಸಿದ್ರೆ ನಾನಾಗ್ಲೆ ಸಾಯ್ತೇನೆ. ಮೇಲಿನ ವರಾಂದದಿಂದ ತೆಗ್ದು ಹಾರ್ತೇನೆ. ಆತ್ಮಹತ್ಯೆ.'

'ಯಾರಿಂಥ ಮಾತನ್ನೆಲ್ಲ ಮಗೂಗೆ ಕಲಿಸ್ಕೋರು?'

'ನಂಬಿಡಿ ಮೇಷ್ಟ್ರು.'

'ಆಯಿನಿಯ ನಂಬಿಡಿಯಾ? ಆ ಜನಕ್ಕೇನು ಹುಚ್ಚು ಹಿಡಿದಿದಾ, ಮಕ್ಕತ್ರ ಸಾಯ್ಲಿಕ್ಕೇಳ್ಳಿಕ್ಕೆ? ಎಂಥೊಂದು ಮೇಷ್ಟ್ರವ. ಮಗೂಗೆ ಮನೇಲ್ಲಿ ಕಲ್ಸೋದೇ ಒಳ್ಳೇದು.'

ಮಾವನ ಲೈಬ್ರೇರಿಯಿಂದ ಮೊತ್ತಮೊದಲು ನಾನು ಓದಲೆಂದು ತೆಗೆದುಕೊಂಡ ಪುಸ್ತಕ 'ಪಾವಂಙಳ್'. ಅಂದು ಆ ಕಥೆಯನ್ನು ಮೂರು ಸಂಪುಟಗಳಾಗಿ ಪ್ರಕಟಿಸಲಾಗಿತ್ತು. ನನಗೆ ಇಷ್ಟವಾಗುತ್ತಿದ್ದ ಭಾಗಗಳನ್ನಷ್ಟೆ ನಾನು ಓದುತ್ತಿದ್ದೆ. ಬಿಷಪ್ಪರ ಬೆಳ್ಳಿ ಸಾಮಗ್ರಿಗಳನ್ನು ಕದ್ದೂ ಕಥಾ ನಾಯಕ ಶಿಕ್ಷಿಸಲ್ಪಡದ್ದು ನನಗೆ ಸಂತೋಷ ನೀಡಿತು. ಕೋಸಳಿಗೆ ಗೊಂಬೆಮಗು ಸಿಕ್ಕಿದಾಗಲೂ ಆಮೇಲೆ ಮರಿಯಾಸ್ ಎಂಬ ಯುವಕ ಗಂಡನಾಗಿ ಸಿಕ್ಕಿದಾಗಲೂ ನಾನು ಅತಿ ಹೆಚ್ಚು ಸಂತೋಷಪಟ್ಟೆ. ಏಳು ವಯಸ್ಸಾಗಿದ್ದಾಗ 'ಪಾವಂಙಳ್' ಕಾದಂಬರಿಯ ಒಂದು ಘಟನೆಯನ್ನು ನಾಟಕವನ್ನಾಗಿ ಮಾಡಿ ಎಪ್ಪೊನೈನಳ ಪಾತ್ರವನ್ನು ಅಭಿನಯಿಸಿದ್ದೆ. ತೆನಾದಿಯರ್ ದಂಪತಿಗಳ ದುಷ್ಟ ಮಗಳಾಗಿದ್ದಳಾಕೆ. ಅವಳ ಪಾತ್ರವನ್ನು ಅಭಿನಯಿಸುವ ತೀರ್ಮಾನದ ಬಗ್ಗೆ ಅಜ್ಜಿಯ ವಿರೋಧವಿತ್ತು. 'ನಿಂಗೆ ಆ ಪಾತ್ರ ಎಳ್ಳಷ್ಟೂ ಹಿಡಿಸ್ಲಿಕ್ಕಿಲ್ಲ ಕಮ್ಲಾ' ಅಜ್ಜಿ ಗೊಣಗಿದ್ದರು.

ಅಂಬಾಳತ್ತಿನ ಮನೆಯ ಹಾಗೂ ನಾಲಪ್ಪಾಟ್ಟಿನ ನಡುವೆಯಿದ್ದ ಹೊರಮನೆಯೊಂದರಲ್ಲಿ ನಾಟಕ ಅಭಿನಯಿಸಲಾಯಿತು. ಅದರ ಮಾಲಿಕರಾಗಿದ್ದ

ದಾಸಣ್ಣನೇ ನಾಟಕದ ನಿರ್ದೇಶಕರು. ಪ್ರೇಕ್ಷಕರಲ್ಲಿದ್ದ ಮಾವ ಅತಿ ಹೆಚ್ಚು ಸಂತುಷ್ಟರಾಗಿ ಕಂಡು ಬಂದರು. 'ಪಾವಂಜಳ'ನ್ನು ಮಲಯಾಳಕ್ಕೆ ಭಾಷಾಂತರಿಸಿದ್ದು ದೊಡ್ಡ ಮಾವನಾಗಿದ್ದರು. ನನ್ನ ಹಾಗು ಅಣ್ಣನ ಅಭಿನಯ ನೈಪುಣ್ಯದ ಬಗ್ಗೆ ಮಾವ ಆ ದಿನ ರಾತ್ರಿ ತುಂಬಾ ಹೊತ್ತು ಹೊಗಳಿ ಮಾತನಾಡಿದರು. ನಾಟಕದಲ್ಲಿ ಅಭಿನಯಿಸಿದ್ದ ಉಳಿದ ಮಕ್ಕಳನ್ನು ಹೊಗಳಲಿಲ್ಲ. ಮಾವನವರಿಗೆ ನಾಲಪ್ಪಾಟ್ಟಿನ ಮಕ್ಕಳ ಬಗ್ಗೆ ಮಾತ್ರ ಆಸಕ್ತಿಯಿತ್ತು. ಉಳಿದ ಮನೆಗಳಲ್ಲಿ ಜನಿಸಿದ ಮಕ್ಕಳು ಪ್ರದರ್ಶಿಸಿದ ಅಭಿನಯಕ್ಕೆ ಅವರು ಬೆಲೆ ಕೊಡಲಿಲ್ಲ. ಆದ್ದರಿಂದಲೇ ಇರಲೇಕು, ಮಾವನೇ ನಮಗೆ ಜಡ್ಜೂ ವಿಮರ್ಶಕರೂ, ವಿಧಿನಿರ್ಣಯಿಸುವುವವರೂ ಆಗಬೇಕಾಗಿ ಬಂದದ್ದು. ಕೈ ಬರಹದ ಮಾಸಪತ್ರಿಕೆ ಬರೆದು ಮುಗಿಯಬೇಕಿದ್ದರೆ ಆ ಕೂಡಲೇ ಅದನ್ನು ಮಾವನವರಿಗೆ ತೋರಿಸಿದೆವು. ಮಾವನನ್ನು ಮಾತ್ರ ಉದ್ದೇಶವಾಗಿಟ್ಟುಕೊಂಡು ನಾಟಕವನ್ನು ಅಭಿನಯಿಸಿದೆವು. ಒಮ್ಮೆಯಾದರೂ 'ಇದು ಚೆನ್ನಾಗಿ ಆಗಲಿಲ್ಲ' ಎಂದು ಅವರು ಹೇಳಲಿಲ್ಲ.

ಆದ್ದರಿಂದಲೇ ನಾವು ಆಯ್ಕೆಗೊಂಡ ಮಕ್ಕಳಂತೆ ನಮಗೆ ತೋರತೊಡಗಿದ್ದು. ಮುಂದೊಮ್ಮೆ ಉಳಿದವರಿಗೆ ಮಾರ್ಗದರ್ಶನ ಕೊಡುವ ಯೋಗ್ಯತೆಯುಳ್ಳವರಾಗಿ ಬೆಳೆಯುತ್ತೇವೆಂದು ನಾವು ನಂಬಿದ್ದೆವು.

ನನಗೆ ಉಪದೇಶಿಸಲಿಕ್ಕೆ, ಮಾರ್ಗದರ್ಶನ ನೀಡಲಿಕ್ಕೆ ಯಾರೂ ಪ್ರಯತ್ನಿಸಲಿಲ್ಲ. ಆದ್ದರಿಂದ ಸ್ವಂತ ಮನಃಸಾಕ್ಷಿಗೆ ಮಾತ್ರ ಉತ್ತರ ಹೇಳಬೇಕಾದವಳಾಗಿ ನಾನು ಬೆಳೆದೆ. ಯಾವುದು ತಪ್ಪು, ಸರಿಯಾವುದು ಎಂದು ಚೆನ್ನಾಗಿ ಅರ್ಥಮಾಡಿಕೊಳ್ಳಲಾಗದ ಒಂದು ಮನಸ್ಸಾಕ್ಷಿಯ ಒಡತಿ ನಾನಾಗಿದ್ದೆ. ಯಾವತ್ತೂ ಹೂನಗೆ ಬೀರುವ ಮನಸ್ಸಾಕ್ಷಿ, ಕ್ಷಮಿಸುವುದಕ್ಕೆ ತುಡಿಯುವ ಮನಸ್ಸಾಕ್ಷಿ.

ನಮ್ಮ ನೆಂಟರವನಾದ ಯುವಕನೂ ಒಬ್ಬ ಯುವತಿಯೂ ಅನ್ಯೋನ್ಯ ತೋರತೊಡಗಿದ್ದ ಪ್ರೀತಿಯ ಬಗ್ಗೆ ಪರಸ್ಪರ ಮಾತನಾಡುತ್ತಿದ್ದುದನ್ನು ಆ ಕಾಲದಲ್ಲಿ ನಾನು ಕೇಳಿಸಿಕೊಳ್ಳುವ ಸಂದರ್ಭ ಬಂತು. ನಾನೂ ನನ್ನ ಗೆಳತಿಯೂ ನಿದ್ರೆಯನ್ನು ನಟಿಸುತ್ತಾ ಮಲಗಿದ್ದೆವು. ಆಗ ಕಿಟಕಿಯ ತಟ್ಟಿನಲ್ಲಿ ಕುಳಿತು ಆ ಯುವಕ ಅವಳನ್ನು ಕೇಳುತ್ತಿದ್ದ:

'ನನ್ನಲ್ಲಿ ಪ್ರೀತಿಯುಂಟಾ ?'

'ಹೌದು.'

'ಎಷ್ಟು ಪ್ರೀತಿಯುಂಟು ?'

'ಹೇಳ್ಳಿಕ್ಕಾಗದಷ್ಟು ಪ್ರೀತಿಯುಂಟು.'

'ನಾನು ಕೈ ಹಿಡ್ಕೊಳ್ಳಿಯಾ ?'

'ಹಿಡ್ಕೊಳ್ಳಿ.'

ಅಣ್ಣನಲ್ಲದ ಓರ್ವಯುವಕನೊಂದಿಗೆ ಹೇಳಲಿಕ್ಕಾಗದಷ್ಟು ಪ್ರೀತಿ ಉಕ್ಕುವ ಸಂದರ್ಭ ಯಾವತ್ತಾದರೂ ನನಗೆ ಲಭಿಸೀತೇ ಎಂದು ನಾನು ನನ್ನಲ್ಲೆ ಅನೇಕ ಬಾರಿ ಕೇಳಿ ನೋಡಿದೆ. ನನ್ನನ್ನು ಪ್ರೀತಿಸಲಿಕ್ಕೆ ಓರ್ವ ಮನೋಹರ ಬಂದಾನೆ ? ನನ್ನನ್ನು ಕೊಂಡಾಡುವುದಕ್ಕೊಬ್ಬ ಮಜ್ನೂ ?'

ಅಂದು ನಮ್ಮ ಗ್ರಾಮದಲ್ಲಿ ಸಿನಿಮಾ ಇರಲಿಲ್ಲ. ನಾಟಕವೂ ಇರಲಿಲ್ಲ. ಗಂಡಸರ ಏಕೈಕ ವಿನೋದವೆಂದರೆ ಹುಡುಗಿಯರನ್ನು ಬೇಟೆಯಾಡುವುದು ಮಾತ್ರವಾಗಿತ್ತು. ವರ್ಷಕ್ಕೊಮ್ಮೆಯಾದರೂ ಗರ್ಭಿಣಿಯಾದ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಂಡ ಹೆಣ್ಣು ಮಕ್ಕಳ ಬಗ್ಗೆ ಕೇಳುತ್ತಿದ್ದೆವು. ಕಿಬ್ಬೊಟ್ಟೆ ಉಬ್ಬಿದ ಹೆಣಗಳು ಬಾವಿಗಳಲ್ಲೂ ಕೆರೆಗಳಲ್ಲೂ ತೇಲಿ ಬಂದವು, ಬಿಳಿಚಿದ ನೈದಿಲೆ ಹೂಗಳಂತೆ. ಪುರುಷರ ಬೇಟೆ ಮುಂದುವರಿದಿದೆ. ಅವರನ್ನು ತಡೆಯುವುದಕ್ಕೆ ಯಾವ ಕಾನೂನೂ ಜಾರಿಗೆ ಬರಲಿಲ್ಲ. ಉಳಿದವರ ಕೆಲಸದಲ್ಲಿ ಯಾಕೆ ಮೂಗು ತೂರಬೇಕು ಎಂಬುದಾಗಿ ಕೆಲವರು ತಮಗೆ ತಾವೇ ಅಂದುಕೊಂಡರು. ಸತ್ತ ಹೆಣ್ಣು, ನೀತಿಗೆಟ್ಟ ಹೆಣ್ಣು ಎಂಬುದು ಇನ್ನು ಕೆಲವರ ಅಂಬೋಣ. ಕೆಟ್ಟ ನಡತೆಯವರು ಸತ್ತರೆ ನಮಗೇನು ನಷ್ಟ? ಕೆಟ್ಟ ನಡತೆಯ ಗಂಡಂದಿರನ್ನೂ ಸೋದರರನ್ನೂ ಗಂಡಸರನ್ನೂ ಕೆಲವರು ಮೌನವಾಗಿ ಸಂರಕ್ಷಿಸುತ್ತಿದ್ದರು. ಕೊನೆಯಲ್ಲಿ ತಮ್ಮ ಹೆಣ್ಣು ಮಕ್ಕಳು ಆಕ್ರಮಣಕ್ಕೆ ಗುರಿಯಾದಾಗ ಅವರೂ ಗಂಟಲು ಬಿರಿದು ಅಳುತ್ತಿದ್ದರು.

ಪುರುಷನ ಕಾಮಾಸಕ್ತಿ ಆ ಗ್ರಾಮದಲ್ಲಿ ವಿಷವಾಯುವಿನಂತೆ ಅಂತರಿಕ್ಷವನ್ನು ಮಲಿನಮಾಡಿತು. ಅದರ ಬಗ್ಗೆ ಯಾರೂ ಮಾತನಾಡಲಿಲ್ಲ. ಆದರೆ ಹುಡುಗಿಯರೂ ಕೂಡ ಅದರ ಬಗ್ಗೆ ಎಚ್ಚರವುಳ್ಳವರಾದರು. ದೇವಾಲಯಗಳಲ್ಲಿ ಅರಸಿನದಾರತಿ ಹಿಡಿದು ಪ್ರದಕ್ಷಿಣೆ ಬರುವ ಹತ್ತು ವಯಸ್ಸಿನ ಹೆಣ್ಣು ಮಕ್ಕಳ ಕಾಲ ಹೆಜ್ಜೆಗಳೂ ಅದರ ಸಾಮೀಪ್ಯದಿಂದ ನಡುಗುತ್ತಿದ್ದುವು. ತೊಟ್ಟಿಲಲ್ಲಿ ಅಂಗಾತ ಮಲಗಿದ್ದ ಕಂದಮ್ಮಗಳು ತಮ್ಮ ಮೇಲೆ ಬೀರುತ್ತಿದ್ದ ತೀವ್ರ ನೋಟ ಸಹಿಸಲಾಗದೆ ಬಾಯಿತೆರೆದು ಕಿರಿಚಿದವು.

ಅದೊಂದು ನಿಕೃಷ್ಟ ಕಾಲಘಟ್ಟವಾಗಿತ್ತು. ಕೆಟ್ಟದ್ದು ಒಳ್ಳೆಯದರಂತೆ ಅಭಿನಯಿಸುವ ಕಾಲ. ಕಾಮಾಂಧರಾದವರು ರಾತ್ರಿಯಲ್ಲಿ ಹೆಣ್ಣು ಮಕ್ಕಳನ್ನು ಹುಡುಕಾಡುವ ಕಾಲ. ಪಾಪ ಪರಿಹಾರಕ್ಕಾಗಿ ನಿತ್ಯ ಪಾಪಿಗಳಾದವರು ಭಾಗವತ ಪಾರಾಯಣವನ್ನೂ ಅಯ್ಯಪ್ಪ ಪೂಜೆಯನ್ನೂ ಉದಯಾಸ್ತಮಾನ ಪೂಜೆಯನ್ನೂ ನಡೆಸುತ್ತಿದ್ದ ಕಾಲ. ಹಿಪ್ಪೋಕ್ರೆಸಿ ರಾಜದಂಡ ಎತ್ತಿದ ಕಾಲ.

ಪಾಪ ನಿವಾರಣೆಗಾಗಿ ಸಿರಿವಂತರು ಆಗಿಂದಾಗ ಬಹು ಖರ್ಚು ಬರುವ ವಿಶೇಷ ಪೂಜೆಗಳನ್ನು ನಡೆಸುತ್ತಿದ್ದರು. ಒಂದು ಕೊಲೆ ನಡೆದರೆ ಅದೇ ವರ್ಷ ಒಂದು ವಿಶೇಷ ಜಾತ್ರೆ ನಡೆಯುತ್ತಿತ್ತು. ಹಾಗಿತ್ತು ಪರಿಸ್ಥಿತಿ. ಈ ರೀತಿಯ ವಿಶೇಷ ಪೂಜೆಗಳಿಂದ ಸಂಪಾದನೆ ಮಾಡುವ ಕೆಲವು ನಿಕೃಷ್ಟ ಜನರೂ ಆ ಊರಿನಲ್ಲಿ ಹೇರಳವಾಗಿದ್ದರು. ಅವರಿಗೆ ಪಾಪದ ವ್ಯಾಪಾರೀ ಬೆಲೆ ಎಷ್ಟೆಂದು ಗೊತ್ತಿತ್ತು. ಪಾಪ ಮಾಡಿದವರು ಮಾತ್ರವೇ ಪಾಪ ಪರಿಹಾರಕ್ಕಾಗಿ ವಿಶೇಷ ಪೂಜೆಗಳನ್ನು ಮಾಡಿಸುತ್ತಿದ್ದರೆಂಬುದು ಅವರಿಗಿಂತ ಹೆಚ್ಚು ಇನ್ಯಾರಿಗೆ ಗೊತ್ತಿತ್ತು? ಅದು ಗೊತ್ತಿದ್ದೂ ಅವರು ಪಾಪ ಮಾಡುವುದಕ್ಕೆ ಪ್ರೇರೇಪಿಸಿದರು. ಅವರು ಹುರಿದುಂಬಿಸುವವರಾದರು, ದಲ್ಲಾಳಿಗಳಾದರು, ಖಳರಾದರು, ಹೆಣ್ಣು ಮಕ್ಕಳನ್ನು ನಾಶ ಮಾಡಲೂ ಕೊಲ್ಲಲೂ ಬೇಕಾದಷ್ಟು ಪ್ರೋತ್ಸಾಹವನ್ನು ಅವರು ತಮ್ಮ ಯಜಮಾನರಿಗೆ ಕೊಟ್ಟರು. ಕೊನೆಗೆ ಪಾಪ ಪರಿಹಾರಕ ಪೂಜೆಗಳಲ್ಲಿ ಚಂದನ ಹಚ್ಚಿ ಭಕ್ತನ ಹಾಗೆ ಸೋಗುಹಾಕುವುದಕ್ಕೆ

ಅವರಲ್ಲಿ ಪ್ರತಿಯೊಬ್ಬರೂ ಉತ್ಸಾಹ ತೋರಿದರು.

ಇಂದಿನ ನೈತಿಕ ವಾತಾವರಣದೊಂದಿಗೆ ತುಲನೆ ಮಾಡಿದರೆ ಅಂದಿನ ಕಾಲ ತೀರಕೆಟ್ಟ ಕಾಲವಾಗಿತ್ತೆಂದು ನಾನು ನಿಸ್ಸಂಕೋಚವಾಗಿ ಹೇಳಬಲ್ಲೆ. ಇಂದು ಕಾರ್ಮೋಡಗಳು ಹರಿದು ಹೋದ ನೀಲಾಕಾಶವನ್ನು ನಾನು ಕಾಣುತ್ತಿದ್ದೇನೆ. ಇಂದಿನ ಹೆಣ್ಣು ಮಕ್ಕಳು ಅದೃಷ್ಟವಂತೆಯರು. ಅವರನ್ನು ಅವಮಾನಿಸುವುದಕ್ಕೆ ಯಾವೊಬ್ಬ 'ಸದಾಚಾರಿಗೂ' ಇಂದು ಧೈರ್ಯ ಬರಲಿಕ್ಕಿಲ್ಲ. ಕಾರಣ, ಈ ರಾಜ್ಯದಲ್ಲಿರುವ ಎಲ್ಲ ಯುವಕರೂ ಅವರ ರಕ್ಷಕರು, ಸೋದರರು. ಅವರಿಗೆ ಧನಬಲವಿರಲಿಕ್ಕಲ್ಲ, ಉದ್ಯೋಗವಿರಲಿಕ್ಕಲ್ಲ. ಆದರೆ, ಮೃಗಸದೃಶನಾದ ಒಬ್ಬನ ಕತ್ತು ಹಿಚುಕುವುದಕ್ಕೆ ಬೇಕಾದ ಶಕ್ತಿ ಅವರ ಕೈಗಳಿಗೆ ಕಂಡಿತವಾಗಿಯೂ ಇದೆ.

ವಡೇಕರ ನಾರಾಯಣಿಯಮ್ಮ ಎಂಬ ಹೆಸರಿನ ತಂದೆಯ ಚಿಕ್ಕಮ್ಮ ಒಬ್ಬ ಆಳಿನ ಕೈಯಲ್ಲಿ ಒಂದು ಬುಟ್ಟಿಯನ್ನೂ ಗಾಂಧಿಯ ಚಿತ್ರವಿದ್ದ ಗೋಣಿಚೀಲವನ್ನೂ ಹೊರಿಸಿಕೊಂಡು ನಾಲಪ್ಪಾಟ್ಟಿಗೆ ಬಂದು ತಲುಪಿದ ಕೂಡಲೆ ಗಟ್ಟಿಯಾಗಿ ಕೇಳಿದರು:

'ಎಲ್ಲಿ ನಮ್ಮ ಹಲ್ಲುಗಿಂಜೋ ಬೆಪ್ಪಿ ?'

ಹಲ್ಲುಗಿಂಜೋ ಬೆಪ್ಪಿ ಎಂಬ ಹೆಸರು ಚಿಕ್ಕಮ್ಮ ನನಗೆ ದಯಪಾಲಿಸಿದ್ದಾಗಿದ್ದುದರಿಂದ ಉಯ್ಯಾಲೆಯಾಟ ಬಿಟ್ಟು ನಾನು ತೆಂಕ ಕೋಣೆಗೆ ಓಡಿ ಬಂದೆ.

ಚಿಕ್ಕಮ್ಮ ಆಯಾಸ ಪರಿಹಾರಕ್ಕಾಗಿ ಕೋಣೆಯ ಗೋಡೆಗೆ ಆತು ಕುಳಿತುಕೊಳ್ಳುತ್ತಿದ್ದರು. ನಿದ್ದೆ ಮಾಡುವಾಗ ಮಾತ್ರ ಮರೆಯಾಗುವ ಆ ಅಗಲವಾದ ಮಂದಹಾಸ ಮುಖ ತುಂಬ ತುಂಬಿರುತ್ತಿತ್ತು. ದೊಡ್ಡ ಹಲ್ಲುಗಳನ್ನು ಕಿತ್ತು ಹಾಕಿಸಿ ಡಾಕ್ಟರ್ ಕುರುವಿಳ ಎಂಬ ಡೆಂಟಿಸ್ಟ್ ಸಿದ್ಧಪಡಿಸಿಕೊಟ್ಟ ಚಿಕ್ಕ ಹಲ್ಲುಗಳನ್ನು ಅವರು ಬಾಯೊಳಗಿರಿಸಿಕೊಂಡಿದ್ದರು. ಅವರು ನಗುವಾಗಲೂ ಆ ಹಲ್ಲುಗಳು ಹೊರಗೆ ಕಾಣುತ್ತಿರಲಿಲ್ಲ. ಬೆಳ್ಳನೆ ದಪ್ಪಕ್ಕೆ ಭೀಮಾಕೃತಿಯುಳ್ಳ ಓರ್ವ ವೃದ್ಧೆ. ತೆಳ್ಳಗಿನ ಕೂದಲಿನೆಡೆಯಿಂದ ಬಿಳಿಯ ತಲೆಯೋಡು ಅಲ್ಲಲ್ಲಿ ಕಾಣಿಸುತ್ತಿತ್ತು. ಕೂದಲಗಂಟಿಗೆ ಶಕ್ತಿ ಬರಲೆಂದು ಜಿಂಕೆಯ ಕುಚ್ಚು ರೋಮ ಎಂಬುದಾಗಿ ಅವರು ಕರೆಯುವ ಒಂದು ಸಣ್ಣ ಚೌರಿಯನ್ನು ಚಿಕ್ಕಮ್ಮ ಉಪಯೋಗಿಸುತ್ತಿದ್ದರು. ಸ್ನಾನ ಮುಗಿಸಿ ಹೊರ ಚಾವಡಿಯ ಎಳೆಬಿಸಿಲಿನಲ್ಲಿ ಕುಳಿತುಕೊಳ್ಳುವಾಗಲೆಲ್ಲ ಆ ಚೌರಿಯನ್ನು ನೆಲದಲ್ಲಿ ಹರಡಿ ಬಿಸಿಲು ತಾಗಿಸುತ್ತಿದ್ದುದು ಚಿಕ್ಕಮ್ಮನ ಅಭ್ಯಾಸ. ಅದಕ್ಕೆ ಜಿಂಕೆಯ ಪರಿಮಳವಿರಬಹುದೆಂದು ಭಾವಿಸಿ ಒಂದು ದಿನ ನಾನದನ್ನು ತೆಗೆದು ನನ್ನ ಮೂಗಿನ ಹತ್ತಿರ ಹಿಡಿದೆ. ಕರಿಮೆಣಸು ಸೇರಿಸಿ ಕಾಯಿಸಿದ ಎಳ್ಳೆಣ್ಣೆಯ ಪರಿಮಳ ಅದಕ್ಕಿತ್ತು. ಚಿಕ್ಕಮ್ಮನನ್ನು ಕಂಡಾಗ ನಾನದನ್ನೆಲ್ಲ ನೆನಪಿಸಿಕೊಂಡೆ.

ಚಿಕ್ಕಮ್ಮನೊಂದಿಗೆ ಬಂದ ಬಾಲನ್ ಎಂಬ ಯುವಕನ ಹಲ್ಲುಗಳ ಅಸಾಮಾನ್ಯ ಉದ್ದ ನಿಮಿತ್ತವಾಗಿ ಆತ ದುಃಖಿಸುವಾಗಲೂ ಸಂತೋಷದಿಂದ ನಗುತ್ತದ್ದಾನೆಂಬುದಾಗಿ ಜನಗಳಿಗೆ ತಪ್ಪು ಅಭಿಪ್ರಾಯ ನೀಡುತ್ತಿರುವಂಥ ಮುಖವುಳ್ಳ ಸಜ್ಜನ - ನನ್ನ ಕೈ ಹಿಡಿದು ನಿಜವಾಗಿಯೂ ಸಂತೋಷಪಟ್ಟು ನಕ್ಕ.

'ಗಮ್ಮತ್ತಲ್ವಾ! ಯಾವಾಗ್ಲೂ ಉಯ್ಯಾಲೇಲಿ ಆಟ.... ಅಲ್ವೆ?' ಆತ ಕೇಳಿದ.

'ಬುಟ್ಟಿಯಲ್ಲೇನಂತೆ?' ನಾನು ಕೇಳಿದೆ.

'ಉಣ್ಣೆಯನ್ನೂ ಕರಿ. ಅವ ಬಂದ ಮೇಲೇನೆ ಇದನ್ನು ಬಿಚ್ಚೋದು. ಅಲ್ಲೀವರೆಗೆ ತಾಳ್ಮೆಯಿಂದ ಕೂತ್ಕೋ, ಹಲ್ಲುಗಿಂಜೋಳೆ' ಚಿಕ್ಕಮ್ಮ ಹೇಳಿದರು.

'ಚಿಕ್ಕಮ್ಮ ಬಂದಿಯಾರೆ' ನಾನು ಗಟ್ಟಿಯಾಗಿ ಕೂಗಿ ಹೇಳಿದೆ.

ಮುಖದ್ವಾರದಿಂದ ಮಾವನೂ ತೆಂಕ ಚಾವಡಿಯಿಂದ ಅಜ್ಜಿಯೂ ಮುತ್ತಜ್ಜಿಯೂ ಮೇಲಿನ ತೆಂಕಕೋಣೆಯಿಂದ ನನ್ನ ಚಿಕ್ಕಮ್ಮನೂ ಅಡುಗೆ ಮನೆಯಿಂದ ಅಡುಗೆಯವನೂ ಪಶ್ಚಿಮದ ಹಿತ್ತಿಲಿನಿಂದ ಕೆಲಸದವಳೂ ಬಂದು ಸೇರಿದರು.

'ನಾನು ಕೂಗಿ ಹೇಳಿದ್ದಕ್ಕೆ ಅಷ್ಟು ಶಕ್ತಿಯಿತ್ತು. ಮುಖ ಚಾವಡಿಯ ಕಲಿಯುವ ಕೋಣೆಯಲ್ಲಿ ಕುಳಿತು ಸಮಾಜ ಶಾಸ್ತ್ರ ಕಲಿಯುತ್ತಿದ್ದ ಅಣ್ಣ ಮಾತ್ರ ಚಿಕ್ಕಮ್ಮನನ್ನು ಎದಿರುಗೊಳ್ಳುವುದಕ್ಕೆ ಬರಲಿಲ್ಲ. ಅದಕ್ಕೆ ಚಾಮಿ ಅಯ್ಯರ್ ಎಂಬ ಮಾಸ್ಟರ್ ಕಾರಣವಾಗಿದ್ದರು. ಮಾಸ್ಟರ್ ನಮಗೆ ಪ್ರತಿದಿನ ಟ್ಯೂಶನ್ ನೀಡುತ್ತಿದ್ದರು. ಅರ್ಧ ಗಂಟೆ ಹೊತ್ತು ಮಲೆಯಾಳದಲ್ಲಿ ಎರಡೊಂದ್ಲಿ ಎರಡು ಎರಡೆರಡ್ಲಿ ನಾಲ್ಕು ಅಂತೆಲ್ಲ ನನ್ನಿಂದ ಬಾಯಿಪಾಠ ಹೇಳಿಸಿ ಮಾಸ್ಟರ್ ಹೇಳುತ್ತಿದ್ದರು: 'ಅಮ್ಮಿ ಹೋಗಿ ಆಡಿಕೊಳ್ಳಿ. ನಾನು ಮೋಹನ್‌ಗೆ ಕಲಿಸ್ತೇನೆ.'

'ನಾರಾಯಣ್ಯಮ್ಮ ಯಾವಾಗ ಹೊರಟದ್ದು?' ಮಾವ ಕೇಳಿದರು. ಗುರುವಾಯೂರಿನಿಂದ ಕಾಲ್ನಡಿಗೆಯಲ್ಲಿ ಬರುತ್ತಾರೆಂಬ ವಿವರ ಎಲ್ಲರಿಗೂ ಗೊತ್ತಿತ್ತು. ಒಂಬತ್ತು ಗಂಟೆಗೆ ನಾಲಪ್ಪಾಟ್ಟಿಗೆ ತಲುಪಬೇಕಿದ್ದರೆ ಎಳು ಗಂಟೆಗಾದರೂ ವಡೇಕರ ಬಿಡಬೇಕೆಂಬುದು ಎಲ್ಲರಿಗೂ ಗೊತ್ತು. ಹಾಗಿದ್ದೂ ಶಿಷ್ಟಾಚಾರಕ್ಕೋಸ್ಕರ ಚಿಕ್ಕಮ್ಮನನ್ನು ಮಾವ ಮಾತ್ರವಲ್ಲ, ಎಲ್ಲರೂ ವಿಚಾರಿಸುವವರೆ'.

'ಯಾವಾಗ ಹೊರಟಿರಿ?'

'ಬೆಳಿಬೆಳಿಗ್ಗೆ ದೇವಸ್ಥಾನಕ್ಕೋಗಿ ಕೈಮುಗಿದು ನೆಟ್ಟಗೆ ಈ ಕಡೆ ಹೊರಡ್ಬೇಕೂಂತ ಗ್ರಯಿಸಿದ್ದು. ಆದ್ರೆ ಆಗ್ಲಿಲ್ಲ. ಮಿಂದು ಬರ್ಬೇಕಿದ್ರೆ ಎಚ್ಚುಮಿ ಕಾಫೀ ಇಡ್ಲಿ ತಂದಿಟ್ಳು. ಚಿಕ್ಕಮ್ಮ ಬರಿಹೊಟ್ಟೆಗೆ ಆರು ಮೈಲು ನಡೀಬಾರ್ದೂ....ಂತ ಅವಳ ತರ್ಕ. ಅಷ್ಟಲ್ಲಿ ಇವ ಕಾಪಿ ಕುಡೀಲಿಕ್ಕೆ ಶುರು ಮಾಡೇ ಬಿಟ್ಟ. ಇವ ಅಷ್ಟು ಬೇಗ ಏಳೋವ್ನಲ್ಲಲ್ಲ? ಕೂತ ಪೆಟ್ಟಿಗೆ ಎಂಟಿಡ್ಲಿ ಗುಳುಂ ಮಾಡಿದ. ಎಂತ ಹೇಳೋದು, ನಾವು ವಾರಿಯತ್ತಿನ ಮೆಟ್ಲು ತಲುಪಬೇಕಿದ್ರೆ ಗಂಟೆ ಏಳಾಯ್ತು. ಆ ಡೇವಿಡ್ ಡಾಕ್ಟ್ರು ನಡೀಲಿಕ್ಕೆ ಹೋಗ್ತಿದ್ರು.' 'ಗಂಟೆಷ್ಟಾಯ್ತು ಡೇವಿಡೇ'ಂತ ನಾ ಕೇಳಿದೆ. ವಾಚು ನೋಡಿ ಅವ ಹೇಳಿದ, ನಾರಾಯಣ್ಯಮ್ಮೋ, ಗಂಟೆ ಏಳಾಯ್ತು. ಇಷ್ಹೊತ್ತಿಗೆ ನಿಮ್ಮದಿದಲ್ಲಿಗೆ ಸವಾರಿ? ನಾಯೇಳಿದೆ, ನಿಮಗೆಲ್ಲ ಸರ್ಕೀಟೊಡೀಬೋದಾದ್ರೆ ನಂಗೂ ಒಡೀಬಾರ್ದಾ? ನ ಸ್ತ್ರೀ ಸ್ವಾತಂತ್ರ್ಯಮರ್ಹತೀಂತೆಲ್ಲ ನಾನ್ನಂಬ್ಲಿಕ್ಕಿಲ್ಲ.' ಆಗ ಅವ ಹೇಳಿದ - 'ನಾರಾಯಣ್ಯಮ್ಮ ಅದು ನಿಮ್ಮನ್ನು ಕಂಡ್ರೇನೆ ಗೊತ್ತಾಗ್ತದೆ.'

'ಹ.....ಹ.....ಹ.....'

ಎಲ್ಲರೂ ಜೋರು ಜೋರಾಗಿ ನಕ್ಕರು.

'ಉಣ್ಣೆಮಾಯೋ, ಅಂಬಾಳತ್ತಿಗೋಗಿಯೋಳು, ವಡೇಕರೇಂದ ನಾರಾಯಣ್ಯಮ್ಮ

ಬಂದ್ಯಾರೇಂತ' ಅಜ್ಜಿ ಹೇಳಿದರು. ಅಂಬಾಳತ್ತಿನ ಮನೆಯಲ್ಲೂ ಪ್ರಾಯದವರೂ ಮಕ್ಕಳೂ ಚಿಕ್ಕಮ್ಮನ ಬರುವಿಕೆಯನ್ನು ನಮ್ಮ ಹಾಗೆಯೇ ಕಾತರತೆಯಿಂದ ನಿರೀಕ್ಷಿಸುತ್ತಿದ್ದರು. ಅವರು ಪುನ್ನಯೂರ್‌ಕುಳದಲ್ಲಿ ಒಂದು ವಾರ ತಂಗಿದ್ದಾಗ ನಮ್ಮ ನೆಂಟರಿಗೆ, ನಮಗೆ, ಕೆಲಸದವರಿಗೆ ಎಲ್ಲರಿಗೂ ಒಂದು ಉತ್ಸವವಿದ್ದ ಹಾಗೆ. ಚಿಕ್ಕಮ್ಮ ಅಂಬಾಳತ್ತಿನ ಉಣ್ಣಿಯಣ್ಣನನ್ನು ಸಿಂಬೆ ಮೊಯ್ದ್ದೂಂತಲೂ ಮಾರಾತ್ತಾಟ್ಟಿನ ತಮ್ಮನನ್ನು ಹೂಚೆಂಡು ಎಂತಲೂ ಕರೆದರು.

'ನಾರಾಯಣ್ಯಮ್ಮ ಬಂದರೆ ನಾಟಕ, ಚಾಕ್ಯಾರ್‌ಕೂತ್ತ್ ಒಟ್ಟಗೇ ನೋಡಿದ ಹಾಗಾಗ್ತದೆ'. ಅಂಬಾಳತ್ತಿನ ಗುರಿಕಾರರಾದ ಕೇಶುವಣ್ಣ ಒಮ್ಮೆ ಹೇಳಿದ್ದರು. ಚಿಕ್ಕಮ್ಮನಿಗೆ ಉಳಿದವರನ್ನು ಅನುಕರಿಸಿ ನಡೆಯೋದಕ್ಕೂ ಮಾತನಾಡೋದಕ್ಕೂ ಗೊತ್ತಿತ್ತು. ತನ್ನ ಬಲದ ಹೆಗಲಿನ ಮೇಲಿನಿಂದ ಭೂತ ಒಳಗೆ ಪ್ರವೇಶಿಸಿತು ಎಂದು ನಂಬಿದ್ದ ಹುಚ್ಚಿಯಂತೆಯೂ ಹಾವುಗೋವಿಂದನ ಹಾಗೆಯೂ ಕೊಳತ್ತಾಪುಳ್ಳಿ ನಂಬೂದಿರಿಯಂತೆಯೂ ಚಿಕ್ಕಮ್ಮ ನಮಗಾಗಿ ಅನುಕರಿಸಿ ತೋರಿಸಿದರು.

ಆಮೇಲೆ ಎಷ್ಟೋ ವರ್ಷಗಳ ನಂತರ 'ನಗುವ ಬುದ್ಧ' ಎಂಬುದಾಗಿ ಪ್ರಸಿದ್ಧಿ ಪಡೆದ ಪ್ರತಿಮೆಯನ್ನು ಕಂಡಾಗ ಅದಕ್ಕೂ ಚಿಕ್ಕಮ್ಮನಿಗೂ ಆಕೃತಿಸಾಮ್ಯ ಉಂಟೆಂಬುದಾಗಿ ನನಗೆ ತಿಳಿದು ಬಂತು. ಆ ಬುದ್ಧನ ದೋಣಿಯ ಹಾಗಿರುವ ಮುಗುಳ್ನಗೆಯೇ ಚಿಕ್ಕಮ್ಮನ ಊದಿದ ಮುಖವನ್ನು ಯಾವತ್ತೂ ಅಲಂಕರಿಸುತ್ತಿದ್ದುದು.

ಚಿಕ್ಕಮ್ಮ ನೆಂಟರಾಗಿ ಬಂದರೆ ನಾನೂ ಅಜ್ಜಿಯೂ ನಡುಕೋಣೆ ತೆರವು ಮಾಡಿ ಉತ್ತರದ ಕೋಣೆಯಲ್ಲಿ ಮಲಗುತ್ತಿದ್ದೆವು. ಅದಕ್ಕೆ ಕಾರಣವಿತ್ತು. ನಡುವಿನ ಕೋಣೆಯು ಮೂತ್ರದ ದಿಣ್ಣೆಗೆ ಮಾತ್ರ ಚಿಕ್ಕಮ್ಮನನ್ನು ಆದರಿಸುವ ಶಕ್ತಿಯೂ ವಿಸ್ತಾರವೂ ಇದ್ದುದು. ಚಿಕ್ಕಮ್ಮನಿಗಾದರೆ ರಾತ್ರಿ ಹತ್ತು ಸಲವಾದರೂ ಮೂತ್ರ ಮಾಡಬೇಕು. ಚಿಕ್ಕಮ್ಮ ಅಲ್ಲಿ ಉಳಿದುಕೊಳ್ಳುತ್ತಿದ್ದಾಗ ರಾತ್ರಿಯಲ್ಲಿ ಯಾವಾಗ ನನಗೆ ಎಚ್ಚರವಾದರೂ ಪತ್ತಿರದ ಕೋಣೆಯಿಂದ ಚೆಂಬಿನ ಪಾತ್ರೆಗೆ ಗಿಂಡಿ ಮುಳುಗಿಸುವ ಶಬ್ದ ಕೇಳಿಸುತ್ತಿತ್ತು. ರಜಾ ದಿನಗಳಿಲ್ಲದ ಫ್ಯಾಕ್ಟರಿಯಂತಿದ್ದರು ಚಿಕ್ಕಮ್ಮ. ಹಗಲಿಡೀ ಬಾಕಿಯಿದ್ದೋರನ್ನು ಬಾಯಿತುಂಬಾ ನಗಾಡಿಸುವುದು, ರಾತ್ರಿಯಿಡೀ ಮೂತ್ರ ಮಾಡುತ್ತ ಪಾತಿಗೆ ನೀರೆರೆಯುವುದು. ಹಾಗಿದ್ದೂ ನೋಡಲು ಅವರು ಆರೋಗ್ಯವತಿಯಾಗಿದ್ದರು. ಚಿಕ್ಕಮ್ಮ ನಿತ್ಯವೂ ಬಿಳಿ ಉಡುತ್ತಿದ್ದರು. ಯಾವತ್ತೂ ಗಂಜಿ, ನೀಲ ಹಾಕಿ ಒಗೆದ ಮುಂಡನ್ನೂ ಶಾಲನ್ನೂ ಬಿಳಿಯ ರವಿಕೆಯನ್ನೂ ಅವರು ಧರಿಸುತ್ತಿದ್ದರು. ಹಸಿರು ಅಂಚಿನ ಶಾಲೆಂದರೆ ಚಿಕ್ಕಮ್ಮನಿಗೆ ಇಷ್ಟ. ಅವರ ಮುಂಡುಗಳಿಗೆ ಸಾಂಬ್ರಾಣಿ ಹೊತ್ತಿಸಿದಾಗಿನ ಹೊಗೆಯ ಪರಿಮಳವಿರುತ್ತಿತ್ತು. ನಾನು ಆ ಪರಿಮಳವನ್ನು ಆಘ್ರಾಣಿಸುವುದಕ್ಕಾಗಿ ಅವರ ಮಡಿಲೇರಿ ಕುಳಿತು ನನ್ನ ಮುಖವನ್ನು ಅವರ ಎದೆಯಲ್ಲಿ ಹುದುಗಿಸುತ್ತಿದ್ದೆ. ಆಗ ಚಿಕ್ಕಮ್ಮ ನನ್ನ ಮುಖವನ್ನು ತನ್ನ ದಪ್ಪನೆಯ ಮೊಲೆಗಳೆಡೆಯಲ್ಲಿ ಅದುಮುತ್ತಲೂ ವಾತ್ಸಲ್ಯಭರಿತರಾಗಿ ನನ್ನ ನೆತ್ತಿಯನ್ನು ಚುಂಬಿಸುತ್ತಲೂ ಇದ್ದರು.

'ನೀ ದೊಡ್ಡೋಳಾದ್ರೆ ನಮ್ಮ ಅಪ್ಪುಣ್ಣಿಯನ್ನು ಮದ್ವೆ ಮಾಡ್ಬೇಕು' ಅವರು ಒಮ್ಮೆ

ಹೇಳಿದರು: 'ಅಪ್ಪನತ್ರ ಹಠಹಿಡೀಬೇಕು. ನಂಗೆ ಅಪ್ಪುಣ್ಣಿ ಗಂಡನಾದ್ರೆ ಸಾಕೂಂತ.'

ನಾನಾವ ಅಭಿಪ್ರಾಯವನ್ನೂ ಹೇಳಲಿಲ್ಲ. ಅಪ್ಪುಣ್ಣಿಯಣ್ಣ ತಂದೆಯ ಏಕ ಸಹೋದರಿಯ ಏಕೈಕ ಪುತ್ರನಾಗಿದ್ದ. ಅವರನ್ನು ಚಿಕ್ಕಮ್ಮ ತನ್ನ ಮಗನಂತೆ ನೋಡಿಕೊಳ್ಳುತ್ತಿದ್ದುದಷ್ಟೇ ಅಲ್ಲ ಅಗಾಧವಾಗಿ ಪ್ರೀತಿಸುತ್ತಿದ್ದರು ಕೂಡ.

'ಯಾಕೆ ನೀನೇನೂ ಮಾತಾಡ್ಲಿಲ್ಲ? ನಿನಗೆ ಅಪ್ಪುಣ್ಣಿಯಣ್ಣನನ್ನು ಮದ್ವೆ ಮಾಡಿಕೊಳ್ಳಿಕ್ಕೆ ಇಷ್ಟ ಇಲ್ವೆ?' ಚಿಕ್ಕಮ್ಮ ಕೇಳಿದರು.

'ನನಗೆ ಹತ್ತು ವಯಸ್ಸಾಗಲಿ. ಆಮೇಲೆ ಮದ್ವೆ. ಅಷ್ಟೊತ್ತಿಗೆ ಅಪ್ಪುಣ್ಣಿಯಣ್ಣ ಬೇರೆ ಯಾರನ್ನಾದ್ರೂ ಮದ್ವೆ ಮಾಡ್ಕೊಂಡಿರ್ತಾರೆ' ನಾನು ಹೇಳಿದೆ.

'ಇದು ನೋಡಿದ ಹಾಗಲ್ಲಾಯ್ತಾ ಬಾಲ' ಚಿಕ್ಕಮ್ಮ ಬಾಲನನ್ನು ಕರೆದು ಹೇಳಿದರು: 'ಇದು ಭಯಂಕರ ಆಸಾಮಿ ಆಯ್ತಾ.'

ಬಾಲನ್ ನಕ್ಕ. ಬಾಲನ ಕೆಲಸವೆಂದರೆ ಚಿಕ್ಕಮ್ಮ ಹೇಳಿದ್ದಕ್ಕೆ ನಗುವುದೂ ಅವರನ್ನು ಹಿಂಬಾಲಿಸುವುದಷ್ಟೇ ಆಗಿತ್ತು. ಆ ಔದಾರ್ಯಕ್ಕೆ ಪ್ರತಿಫಲವಾಗಿ ತಾನು ಯಾವತ್ತಾದರೂ ಕುಟ್ಟನ ಹತ್ತಿರ ಹೇಳಿ ಕಲ್ಕತ್ತಾದಲ್ಲಿ ಒಂದು ಕೆಲಸ ತೆಗಿಸಿಕೊಡುವ ಎಂದು ಚಿಕ್ಕಮ್ಮ ಆಶ್ವಾಸನೆ ಕೊಟ್ಟಿದ್ದರು.

'ಕಲ್ಕತ್ತಾದ ಕೆಲಸದ ವಿಚಾರ ಎಲ್ಲಿಗ್ಬಂತು?' ಅಜ್ಜಿ ಒಂದು ದಿವಸ ಬಾಲನಲ್ಲಿ ಕೇಳಿದರು. ಚಿಕ್ಕಮ್ಮ ಸ್ನಾನಕ್ಕೆ ಹೋಗಿದ್ದರು. ಆದ್ದರಿಂದ ಮನಸ್ಸು ಬಿಚ್ಚಿ ಮಾತನಾಡುವುದಕ್ಕೆ ಬಾಲನಿಗೆ ಒಂದು ಅವಕಾಶ ಸಿಕ್ಕಿತು.

'ಆ ಕೆಲ್ಸ ಸಿಗ್ಬಹುದೂಂತ ನಂಗಂತೂ ಏನೂ ವಿಶ್ವಾಸಿಲ್ಲ. ಚಿಕ್ಕಮ್ಮೋರು ಹೇಳಿದ್ರೆ ಕುಟ್ಟಣ್ಣೋರು ಕೇಳ್ಯಾರೂಂತಾನೂ ನಂಗೆ ನಂಬಿಕೆಯಿಲ್ಲ. ಆದ್ರೂ ಚಿಕ್ಕಮ್ಮೋರನ್ನು ಬಿಟ್ಟೋಗ್ಲಿಕ್ಕೆ ನಂಗ್ಯಾಂಕೋ ಆಗೋದಿಲ್ಲ. ನನ್ನ ಸ್ವಂತ ಅಮ್ಮನಿಗೆ ನನ್ನತ್ರ ಇಷ್ಟು ಪ್ರೀತಿಯಿರ್ಲಿಕ್ಕಿಲ್ಲ. ಈ ಚಿಕ್ಕಮ್ಮೋರ ಕಾಲಕಳೀದೆ ನಂಗೆ ವಡೇಕರ ಬಿಟ್ಟೋಗ್ಲಿಕ್ಕೆ ಆಗ್ಲಿಕ್ಕಿಲ್ಲ. ಅಷ್ಟೇ ನಂಗೆ ಹೇಳ್ಳಿಕ್ಕಿರೋದು.'

ದುಃಖ ಪ್ರಕಟಿಸುವಾಗಲೂ ಬಾಲನ ಹಲ್ಲುಗಳು ಬೆಳಗಿ ನಕ್ಕವು. ಆ ದೃಶ್ಯ ನನ್ನನ್ನು ವಿಶೇಷವಾಗಿ ಆಕರ್ಷಿಸಿತು. ಸೌಂದರ್ಯಕ್ಕಿರುವ ಆಕರ್ಷಣ ಶಕ್ತಿ ವಿರೂಪಕ್ಕೂ ಉಂಟೆಂಬುದಾಗಿ ಅಂದೇ ನಾನರಿತುಕೊಂಡದ್ದು.

ಚಿಕ್ಕಮ್ಮ ಅಂದೂ ಫಲಾಹಾರದ ಬುಟ್ಟಿಯೊಂದಿಗೇ ಬಂದಿದ್ದರು. ನನ್ನ ಅಣ್ಣನ ಟ್ಯೂಶನ್ ಮುಗಿದು ಮಾಷ್ಟು ಹೊರಡುವ ಸಿದ್ಧತೆ ಮಾಡುತ್ತಿದ್ದಾಗ ಚಿಕ್ಕಮ್ಮ ಕೂಗಿ ಹೇಳಿದ್ರು:

'ಮಾಷ್ಟ್ರೇ ಅಲ್ಲಿ ನಿಲ್ಲಿ. ನಿಮ್ಗೆ ನಾನೊಂದು ಸಂಗತಿ ತಂದ್ಯೇನೆ'.

ಮಾಷ್ಟು ತನ್ನ ಮೂಗು ಹಿಂಡಿ, ಕೈಯನ್ನು ಮುಖಮನೆಯ ಗೋಡೆಗೆ ಒರೆಸಿ ಚಿಕ್ಕಮ್ಮನನ್ನು ನೋಡಿ ಮುಗುಳ್ನಕ್ಕರು.

ಚಿಕ್ಕಮ್ಮ ಒಂದು ಚಿಕ್ಕ ಪೊಟ್ಟಣ ತೆಗೆದು ಮಾಷ್ಟಿಗೆ ಕೊಟ್ಟರು. ಅವರು ಚಿಕ್ಕಮ್ಮನನ್ನು ಮುಟ್ಟದೇನೆ ಅದನ್ನು ಸ್ವೀಕರಿಸಿದರು. ಅದನ್ನು ಆ ಕಡೆ ಈ ಕಡೆ ತಿರುಗಿಸಿ ನೋಡಿದ ಮೇಲೆ ಮಾಷ್ಟು ಉತ್ಸಾಹದೊಂದಿಗೆ ತಲೆ ಅಲುಗಿಸಿದರು.

'ನನಗೆ ಹೇಳಿದ ಉಡುಗೊರೇನೆ' ಅವರು ಹೇಳಿದರು.

'ಪರೀಕ್ಷಿಸಿ ನೋಡಿ' ಚಿಕ್ಕಮ್ಮ ಮಾಷ್ಟ್ರಿಗೆ ಹೇಳಿದರು. 'ನಿಂತ ನಿಲುವಿಗೇ ನೂರೊಂದು ಸಲ ಸೀನ್ಲಿಕ್ಕುಂಟು.'

ಮಾಷ್ಟ್ರು ಪೊಟ್ಟಣ ತೆರೆದರು. ಒಂದು ಚಿಟಿಕೆ ಹುಡಿ ತೆಗೆದು ಮೂಗಿಗೇರಿಸಿದರು. ಕೂಡಲೆ ಅವರು ಭಯಂಕರ ಶಬ್ದದೊಂದಿಗೆ ಸೀನತೊಡಗಿದರು. ಸೀನಿನೊಂದಿಗೆ ಅವರ ಮುಖ ಕೆಂಪಾಗತೊಡಗಿತು. ಅವರು ಸೀನುತ್ತ ಸೀನುತ್ತ ಸತ್ತೇ ಹೋಗಬಹುದೆಂದೂ ನಾನು ಹೆದರಿದೆ. ಚಿಕ್ಕಮ್ಮ ಗೋಡೆಗೆ ಆತು ಕುಳಿತು ಮಾಷ್ಟ್ರು ಪ್ರತಿಬಾರಿಯೂ ತಲೆಕೆಳಹಾಕುವುದೂ ಮೇಲೆತ್ತುವುದೂ ನೋಡುತ್ತ ತಲೆಕುಲುಕಿ ನಕ್ಕರು.

'ಸಾಕಾಯ್ತಾ ಮಾಷ್ಷೇ' ಅವರು ಕೇಳಿದರು.

'ಸಾಕಾಯ್ತು ನಾರಾಣ್ಯಮ್ಮೋ, ಸಾಕಾಯ್ತು. ಇದೆಂಥ ಹುಡಿಯಪ್ಪಾ! ಇದಕ್ಕೆ..... (ಸೀನು).... ಶಕ್ತಿ ಜಾಸ್ತಿಯುಂಟಲ್ಲಾ. ಒಳ್ಳೆ ಮೆಣಸು ಹುಡಿಮಾಡಿ ಅದನ್ನೇ ಎಳೆದ ಹಾಗೆ' ಮಾಷ್ಟ್ರು ಬೆವರುತ್ತ ಹೇಳಿದರು.

'ಇದು ಊರ ವ್ಯಾಪಾರಿಚೆಟ್ಟಿಗಳು ಉಪಯೋಗಿಸೋ ಹುಡಿ. ಅವಕ್ಕೆ ಇದ್ರ ಶಕ್ತಿ ಸಹಿಸ್ಲಿಕ್ಕಾಗ್ತದೆ. ಮಾಷಿಗೆ ಸುಸ್ತಾಯ್ತಾ? ಸ್ವಲ್ಪ ಮಜ್ಜಿಗೆ ಕುಡೀತೀರಾ?'

'ಬೇಡ. ನಾನಿನ್ನು ಮಠಕ್ಕೆ ಹೋಗಿ ಏನಾದ್ರೂ ತಿನ್ತೇನೆ' ಮಾಷ್ಟ್ರು ಹೇಳಿದ್ರು.

ಅವರು ಹೋದ ಮೇಲೆ ನಾನೂ ಅಣ್ಣನೂ ಬುಟ್ಟಿಯಲ್ಲಿದ್ದ ವಸ್ತುಗಳನ್ನು ಒಂದು ಹುಲ್ಲು ಚಾಪೆಯಲ್ಲಿ ಬಿಡಿಸಿಟ್ಟೆವು. ದೊಡ್ಡ ಕಣ್ಣುಳ್ಳ ಚಕ್ಕುಲಿಯೂ 'ಅಮ್ಮ'ಂದಿರು ತಯಾರಿಸಿದ ಲಡ್ಡೂ, ಖರ್ಜೂರವೂ, ಹೊದಳೂ, ನೈಯಪ್ಪವೂ, ಗಂಧದ ಉಂಡೆಗಳೂ ಅದರಲ್ಲಿದ್ದುವು. ಗಂಧದ ಉಂಡೆಗಳನ್ನು ಒಂದೊಂದಾಗಿ ಚಿಕ್ಕಮ್ಮನೇ ವಿತರಣೆ ಮಾಡಿದರು. ನನ್ನ ಚಿಕ್ಕಮ್ಮನಿಗೂ ಅತ್ತೆಗೂ ಮಾವನ ಅಮ್ಮನಿಗೂ ಒಂದೊಂದು ಸಿಕ್ಕಿತು. ಕೊನೆಗೆ ತನ್ನ ಸೊಂಟದ ಮಡಿಕೆ ಬಿಡಿಸಿ ಒಂದು ಚಿಕ್ಕ ಕಪ್ಪಗಿನ ವಸ್ತುವನ್ನು ಅವರು ನನ್ನೆಡೆಗೆ ಚಾಚಿದರು. ಒಳ್ಳೆ ಕಾಡಿಗೆ ಆಯ್ತಾ. ಸಾಣೆಗೆ ತಿಕ್ಕಿ ಕಣ್ಣಿಗೆ ಹಚ್ಚಬೇಕು. ಕಣ್ಣು ಚಂದ ಕಾಣ್ತದೆ'.

ಅದನ್ನು ಅಡಿಮೇಲು ಮಾಡಿ ನೋಡಿದಾಗ ಅದರಲ್ಲಿ ಬಿಳಿ ಬಣ್ಣದ ರೇಖೆಗಳಿದ್ದುದಾಗಿ ಕಂಡು ಬಂತು. ಅಂದು ಸಾಯಂಕಾಲ ಅಂಬಾಳತ್ತಿನ ಅಂಗಳದಲ್ಲಿ ಆಡುತ್ತಿದ್ದಾಗ ಪ್ರಸನ್ನೆಯ ತಂದೆ ಕುಂಜುಣ್ಣಿಯಣ್ಣ ನನ್ನನ್ನು ಕರೆದು ಹೇಳಿದರು:

'ನಾರಾಯಣ್ಯಮ್ಮ ನಿನಗೆ ಕಾಡಿಗೆ ಕೊಟ್ರೂಂತ ಪ್ರಸನ್ನ ಹೇಳಿದ್ಳು. ಅದನ್ನು ಕಣ್ಣಿಗೆ ಹಚ್‌ಬಾರ್ದು, ಆಯ್ತಾ. ಅದು ವಿಷ. ರಕ್ತದಲ್ಲಿ ಸೇರಿದ್ರ ನೀ ಮಲಗಿದಲ್ಲೇ ಆಗಿಬಿಡ್ತಿ'.

ಆಮೇಲೆ ನಾನು ಆ ಕಾಡಿಗೆಕಲ್ಲನ್ನು ಉಪಯೋಗಿಸಲಿಲ್ಲ. ಅಣ್ಣ ಸ್ಟಾಂಪುಗಳೂ, ನಾಣ್ಯಗಳೂ, ಗೋಲಿಗಳೂ ಶೇಖರಿಸಿಡುತ್ತಿದ್ದ ಮರದ ಪೆಟ್ಟಿಗೆಯಲ್ಲಿ ಆ ಕಲ್ಲು ಉಪಯೋಗಶೂನ್ಯವಾಗಿ ಬಿದ್ದಿತ್ತು.

ನನಗೆ ಎಂಟು ವಯಸ್ಸಾಗಿದ್ದಾಗ ಚಿಕ್ಕಮ್ಮ ರೋಗಿಷ್ಠೆಯಾಗಿ ವಡೇಕರ ತೆಂಕ ಕೋಣೆಯಲ್ಲಿ ಮಲಗಿದ್ದರು. ಒಮ್ಮೆ ತ್ರಿಚೂರಿನ ಬೋರ್ಡಿಂಗಿಗೆ ಹೋಗುವ ದಾರಿಯಲ್ಲಿ ನಾನು ವಡೇಕರಕ್ಕೆ ಹೋದೆ. ತೆಂಕಕೋಣೆಯಿಂದ ಭಯಂಕರವಾದ ಆರ್ತಧ್ವನಿ ಕೇಳಿ ನಾನು ಹೆದರಿ ನಡುಗಿದೆ. ಬಾಲನ್ ತಲೆ ಹೊರಕ್ಕೆ ಹಾಕಿ ಹೇಳಿದ:

'ಅಮ್ಮಿ ಹೆದರಬೇಡ. ಚಿಕ್ಕಮ್ಮ ಹೊಟ್ಟೇಂದ ಹೋಗದೆ ಮೂರು ದಿವಸಾಯ್ತು. ಮಲಗಿ ಬೊಬ್ಬೆ ಹಾಕೋದು! ನೋವಿಂದ ರಾತ್ರಿ ಹಗಲೂ ನಿದ್ರೆಯಿಲ್ಲ.'

ನಾನು ತಂದೆಯ ಸೋದರಿಯ ಹಿಂದೆ ಅವಿತೆ.

'ಚಿಕ್ಕಮ್ಮನ್ನ ನೋಡ್ಬೇಡ್ವೆ ?' ಬಾಲನ್ ಕೇಳಿದ.

ನನ್ನ ಕಾಲುಗಳು ಕಂಗಾಲಾದಂತೆ ನನಗೆ ತೋರಿತು. ನನ್ನ ಅಂಗೈ ಬೆವರಿತು. 'ಅವಳನ್ನೊಮ್ಮೆ ಇಲ್ಲಿ ಕರ್ಕೊಂಡು ಬರ್ತೀಯಾ ಬಾಲ' ಚಿಕ್ಕಮ್ಮ ಓರ್ವ ಗಂಡಸಿನ ಸ್ವರದಲ್ಲಿ ಆಜ್ಞಾಪಿಸಿದರು.

'ನಾ ಚಿಕ್ಕಮ್ಮನ್ನ ನೋಡೋದಿಲ್ಲ' ನಾನು ಹೇಳಿದೆ.

ಜ್ವರ ಪ್ರಾರಂಭವಾದ ಐದೋ ಆರೋ ದಿವಸಗಳಲ್ಲಿ ನನ್ನ ಮುಖದಲ್ಲಿ ಶರೀರದಲ್ಲಿ ಕೆಂಪು ಬೊಟ್ಟಗಳು ಕಾಣಿಸಿಕೊಳ್ಳತೊಡಗಿದಾಗ ಆದಷ್ಟು ಬೇಗ ನನ್ನನ್ನು ಊರಿಗೆ ಕೊಂಡು ಹೋಗಿ ಬಿಡಲು ಮದರ್ ಸುಪೀರಿಯರ್ ಪೊನ್ನಮ್ಮೆಗೆ ಹೇಳಿದರು. ಬೋರ್ಡಿಂಗ್‌ನ ನನ್ನ ಕೋಣೆಯಲ್ಲಿ ಇನ್ನೂ ಮೂವರು ಹುಡುಗಿಯರಿದ್ದರು. ಅವರಿಗೂ ಅಸೌಖ್ಯ ಬಾಧಿಸುವ ಸಾಧ್ಯತೆಯಿದ್ದುದರಿಂದ ನನ್ನನ್ನು ಮನೆಗೆ ಕಳುಹಿಸುವುದು ಅತ್ಯಂತ ತುರ್ತಾದ ಅಗತ್ಯವಾಗಿತ್ತು. ಶಾರದೆ ಒಂದು ಓರೆಂಜ್ ಸಾಟಿನ್ ರಿಬ್ಬನಿನಿಂದ ನನ್ನ ಕೂದಲನ್ನು ಅದುಮಿ ಕಟ್ಟಿದಳು. ಮೀನಾಕ್ಷಿ ನನ್ನ ಮುಖಕ್ಕೆ ದಪ್ಪಕ್ಕೆ ಪೌಡರನ್ನೂ ಮೆತ್ತಿದಳು.

ದಡಾರದ ಜ್ವರ. ಹೆದರ್ಕೋಬೇಡ ಹುಡುಗೀ' ಎಲಿ ಹೇಳಿದಳು.

ಪೊನ್ನಮ್ಮ ಗಂಜಿಯೂ ನೀಲವೂ ಹಾಕಿದ ಒಗೆದ ಪಂಚೆ ಉಂಟುಕೊಂಡರು. ತನ್ನ ಊದಿದ ಕೆನ್ನೆಗಳನ್ನು ಚಿವುಟಿ ಇನ್ನಷ್ಟು ಕೆಂಪು ಮಾಡಿದರು. ಮದರ್ ಕೊಟ್ಟ ರೂಪಾಯಿಯನ್ನು ಮಡಿಲಲ್ಲಿ ಸಿಕ್ಕಿಸಿದರು.

'ಬಾ ಹುಡ್ಗೀ, ನಾವು ಬಸ್ಸು ಹಿಡಿಯುವಾ' ಅವರು ಹೇಳಿದರು.

ಬಸ್‌ಸ್ಟ್ಯಾಂಡಿಗೆ ತಲುಪಬೇಕಿದ್ದರೆ ಎಲ್ಲರೂ ಪೊನ್ನಮ್ಮಯನ್ನು ಕುತೂಹಲದಿಂದ ನೋಡಿದರು.

'ಕಾನ್ವೆಂಟಿಂದ ಬರೋದಾ ?' ಒಬ್ಬಾತ ಕೇಳಿದ.

'ಅದು ಗೊತ್ತಾಗಿ ನಿಂಗೇನಾಗ್ಬೇಕು ?'

ಪೊನ್ನಮ್ಮ ಒಂದು ಮರು ಪ್ರಶ್ನೆ ಹಾಕಿದಳು. ಡ್ರೈವರ್‌ಗಳು ನಕ್ಕರು. ಒಬ್ಬಾತ ರಸ್ತೆಗೆ ಮುಖ ಮಾಡಿ ವಿಚಿತ್ರವಾಗಿ ವೀಳ್ಯ ಜಗಿದು ಉಗುಳಿದ.

'ಎದುರ್ಗಡೇಂದ ಹತ್ತಿಕೊಳ್ಳಿ, ತಂಗೀ - ಹಿಂದಿಡೀ ಹೆಣ್ಣುಬ್ಬರು - ಸಮಾಧಾನ ಸಿಗ್ಲಿಕ್ಕಿಲ್ಲ' ಡ್ರೈವರ್ ಹೇಳಿದರು.

ಪೊನ್ನಮ್ಮ ನನ್ನನ್ನೂ ಎಳೆದು ಹತ್ತಿಸಿಕೊಂಡು ಡ್ರೈವರ ಎಡಭಾಗದಲ್ಲಿ ಕುಳಿತರು.

'ಮಡ್ಲಲ್ಲಿ ತಲೆ ಇಟ್ಕೋ ಮಗೂ' ಅವರು ಹೇಳಿದರು. ಗಂಜಿ ಪಸೆಯ ಪರಿಮಳ ನನಗೆ ಹಿತವೆನಿಸಿತು.

'ನೋಡೋದಕ್ಕ ಚೆಂದಿರುವ ಹುಡುಗೇರನ್ನು ಕಂಡ್ರೆ ಈ ಹೆಣ್ಣುಬ್ಬರು ನೋಡಿ

ರಕ್ತಕುಡೀತಾರೆ - ನನ್ನತ್ರಕ್ಕೆ ಸರ್ದು ಕೂತ್ಕೊಳ್ಳಿ' ಡ್ರೈವರ್ ಹೇಳಿದ.

'ಬೇಡ ನಾಯಿಲ್ಲೇ ಕೂತ್ಕೊಳ್ತೀನೆ' ಪೊನ್ನಮ್ಮ ಬಾಗಿಲಿನ ಹತ್ತಿರಕ್ಕೆ ಸ್ವಲ್ಪ ವಾಲಿಕೊಂಡು ಕುಳಿತರು. ಡ್ರೈವರ, ಪೊನ್ನಮ್ಮಯ ಮಧ್ಯದಲ್ಲಿ ನಾನು.

'ಏನಿದ್ರ ಮುಖದಲ್ಲೆಲ್ಲ ? ದಡಾರ, ಸಿಡುಬು, ನರುಕೋಟ್ಟೆ ಎಲ್ಲ ಆದ್ರೆ ಬಸ್ನಲ್ಲಿ ಕೊಂಡೋಗ್ಬಾರ್ದಾಯ್ತಾ. ರೂಲಿರೋದು ಆಗೇ. ನಿಜ ಹೇಳಿ. ಈ ಮಗೂಗೆ ದಡಾರಲ್ವೆ ?'

'ನನ್ನ ದೇವ್ರೇ, ಎಂತ ನೀವೇಳೋದು ? ಅದಕ್ಕೆ ದಡಾರೇನೂ ಇಲ್ಲ. ಅದ್ರ ಬಣ್ಣ, ಒಳ್ಳೆ ಬಣ್ಣ. ಕೆಂಪ್ಕೆಂಪಿದ್ಬಾಳೆ. ಈಗ ಬಿಸ್ಲು ತಾಗಿ ಇನ್ನಷ್ಟು ಕೆಂಪಾದ್ಲು.'

'ಮಗೂಗೆ ತಲೆನೋವು. ಮಲಕ್ಕೋಮ್ಮ. ನನ್ನ ಮಡ್ಲಲ್ಲಿ ತಲೆಯಿಟ್ಟು ಮಲಕ್ಕೊ. ಕುನ್ನಂಕುಳ ಬಂದಾಗ ಕರೀತೇನೆ.'

ಕುನ್ನುಂಕುಳದಿಂದ ಒಂದು ಟ್ಯಾಕ್ಸಿ ಕರೆದು ಪೊನ್ನಮ್ಮ ನನ್ನನ್ನು ಅದರಲ್ಲಿ ಕೂರಿಸಿದರು. ಕುನ್ನಂಕುಳದ ಒಂದೇ ಒಂದು ಟ್ಯಾಕ್ಸಿ ಕುರುವಾನ್‌ನ ಕಾರು. ಆತ ಕಂಡ ಕೂಡಲೆ ಹೇಳಿದ, 'ಅರೆ, ಇದು ನಮ್ಮ ನಾಲಪ್ಪಾಟ್ಟಿನ ಹುಡ್ಗಿಯಲ್ವ ?' ನಿನ್ನೆ ನಾನು ನಿಮ್ಮ ಅಣ್ಣನ್ನು ಮನೇಕ್ಕೊಂಡೋಗಿ ಬಿಟ್ಟದ್ದಷ್ಟೆ. ಅಣ್ಣಂಗೂ ಮುಖದಲ್ಲೆಲ್ಲ ದಡಾರ ಎದ್ದಿದೆ.'

ಆಗ ನನ್ನಣ್ಣ ಕುನ್ನಂಕುಳದಲ್ಲಿ ಇದ್ದುಕೊಂಡು ಕಲಿಯುತ್ತಿದ್ದ. ನಮಗಿಬ್ಬರಿಗೂ ಯಾವ ರೋಗವಾದರೂ ಒಂದೇ ಸಮಯಕ್ಕೆ ಬರುತ್ತಿತ್ತು. ಆದ್ದರಿಂದ ನನಗೆ ಅಚ್ಚರಿಯೆನಿಸಲಿಲ್ಲ.

ಕರುವಾನ್ ತನ್ನ ಕನ್ನಡಕವನ್ನು ಟವೆಲಿನಿಂದ ಉಜ್ಜಿದ. ಆಮೇಲೆ ಕಾರಿನ ಗಾಜನ್ನು ಅದೇ ಟವೆಲಿನಿಂದ ಉಜ್ಜಿದ.

'ಹೋಗ್ವಾ ಮಗೂ. ಸಂಜೆಯಾಗ್ವೇಕಿದ್ರೆ ಮನಗೆ ತಲುಪಿಸುವಾಯ್ತಾ.'

ಪೊನ್ನಮ್ಮಯ ಕೈಗಳಲ್ಲಿ ನಾನು ವಿಶ್ರಮಿಸಿದೆ. ಕಾರಿನ ಬೋನೆಟ್ ತೆರೆದು ಕರುವಾನ್ ಒಂದು ಮಿಂಚಿನ ಪರಿಶೋಧನೆ ನಡೆಸಿದ. ಬಳಿಕ ತನ್ನ ಸೀಟಿಗೆ ಮರಳಿದ.

'ಷಾಟಾಯ್ತು, ಕಾರು ಷಾಟಾಯ್ತು' ಆತ ಹಿಂದಕ್ಕೆ ನೋಡಿ ನಗುತ್ತ ಹೇಳಿದ. ಆತನ ಹಲ್ಲುಗಳು ವೀಳ್ಯದ 'ಕರೆ' ನಿಮಿತ್ತವಾಗಿ ಕಪ್ಪು ಹಿಡಿದಿತ್ತು.

ಅಂದು ಕುನ್ನಂಕುಳದಿಂದ ಪುನ್ನಯೂರ್‌ಕುಳಕ್ಕೆ ರಸ್ತೆಯಿರಲಿಲ್ಲ. ತೆಂಗಿನ ತೋಟಗಳೊಳಗಿಂದ ಕಾರು ಹೋಯಿತು, ಬಹು ನಿಧಾನ, ನಾಲಪ್ಪಾಟ್ಟಿಗೆ ತಲುಪಿದಾಗ ಕಾರು ಭಾರೀ ಸದ್ದು ಮಾಡುತ್ತ ನಿಂತಿತು. ಶಬ್ದ ಮುಂದುವರಿಯಿತು.

'ಷಾಟು ಮಾಡೋದೇ ಕಷ್ಟ. ನಿಲ್ಸಿದ್ರೆ ಮತ್ತೆ ಷಾಟು ಮಾಡೋದು ಕಷ್ಟ' ಕರುವಾನ್ ಹೇಳಿದ.

ಪೊನ್ನಮ್ಮ ತನ್ನ ಬಟ್ಟೆಯನ್ನು ಕೊಡವುತ್ತ ಇಳಿದು ನಡೆದರು. ರೆಕ್ಕೆ ಬಿಡಿಸಿದ ಬಿಳಿಯ ಪಾರಿವಾಳದಂತೆ. ಅವರ ಸೌಂದರ್ಯವನ್ನು ತನ್ನ ಕಣ್ಣುಗಳ ಮೂಲಕ ಆಸ್ವಾದಿಸುತ್ತಿದ್ದ ಟ್ಯಾಕ್ಸಿ ಡ್ರೈವರನ ಬಗ್ಗೆ ನನಗೆ ಮೆಚ್ಚುಗೆಯೆನಿಸಿತು. ನಾನು ಪೊನ್ನಮ್ಮಯ ಕೈಬೆರಳಲ್ಲಿ ನೇತುಕೊಂಡೆ.

ದೊಡ್ಡ ಮಾವ ಚಾವಡಿಯಿಂದ ಎದ್ದು ಬಂದರು.

'ಅಮ್ಮಿಯಾ ? ಏನಾಯ್ತು ?' ಅಜ್ಜಿ ಕಾರಿನ ಹತ್ತಿರಕ್ಕೆ ಓಡಿ ಬಂದರು. ಅಜ್ಜಿಯ ಮುಖ ಬಿಳಿಚಿತು.

'ಹೆದರ್ಲಿಕ್ಕೇನಿಲ್ಲಾಯ್ತಾ ? ಮಗೂಗೆ ದಡಾರದ ಜ್ವರ ?' ಪೊನ್ನಮ್ಮ ಹೇಳಿದರು.

'ಉಣ್ಣೆಯೂ ಬಂದಿಯಾನೆ' ಅಜ್ಜಿ ಹೇಳಿದರು. ಅವರು ನನ್ನನ್ನು ಹತ್ತಿರಕ್ಕೆ ಸೆಳೆದರು. ನನ್ನ ಫ್ರಾಕ್ ಎತ್ತಿ ಶರೀರ ಪರಿಶೋಧಿಸಿದರು.

'ಸಾರವಿಲ್ಲ, ಆಯ್ತಾ ?' ಅವರು ಹೇಳಿದರು.

'ಹೆದರ್ಲಿಕ್ಕೆಂತದೂ ಇಲ್ಲ.'

'ಯಾರೂಂತ... ಗೊತ್ತಾಗ್ಲಿಲ್ಲ' ಅಜ್ಜಿ ಹೇಳಿದರು.

'ನನ್ನೆಸ್ರು ಪೊನ್ನಮ್ಮ. ನಾನು ಕಾನ್ವೆಂಟಲ್ಲೇ ಇರ್ರೋಳು. ಮಕ್ಕಿಗೆ ಹೊಲಿಗೆ ಕಲಿಸ್ತೇನೆ. ನನ್ನತ್ರ ಮದರ್ ಹೇಳಿದ್ರು, ಮಗೂನ್ನ ಕರ್ಕೊಂಡೋಗಿ ಬಿಟ್ಟುಬಾಂತ. ನಾನೀ ಕಾರ್ನಲ್ಲೆ ಕುನ್ನಂಕುಳಕ್ಕೆ ವಾಪಾಸೋಗ್ತೇನೆ.'

'ಬೇಡ. ರಾತ್ರಿ ಇಲ್ಲೇ ಕಳೀಬೋದು. ಬೆಳಿಗ್ಗೆ ಹೋಗ್ಗೋದೇ ಸೌಕರ್ಯ.'

'ತೆಂಕ ಮೂಲೆಯಲ್ಲಿ ಮುತ್ತಜ್ಜಿಯಂದಿರೂ ಚಿಕ್ಕಮ್ಮನೂ ಹುಲ್ಲು ಚಾಪೆಗಳಲ್ಲಿ ಕುಳಿತುಕೊಂಡಿದ್ದರು. ಪೊನ್ನಮ್ಮಗೆ ಚಿಕ್ಕಮ್ಮನ ಕೋಣೆಯಲ್ಲಿ ಮಲ್ಕೊಳ್ಳುವುದಕ್ಕೆ ಅಜ್ಜಿ ಹೇಳಿದರು.

'ನಂಗೊಂದಕ್ಕೆ ಹೋಗ್ಬೇಕು.'

ಅವರಿಗೆ ಎಲ್ಲಿಗೆ ಹೋಗಬೇಕಾಗಿತ್ತೆಂಬುದು ಚಿಕ್ಕಮ್ಮನಿಗೆ ಅರ್ಥವಾಗಲಿಲ್ಲ. ಅವರ ಭಾಷೆ ನಾಲಪ್ಪಾಟ್ಟಿನವರಿಗೆ ವಿಚಿತ್ರವೆನಿಸಿತು. ಪೊನ್ನಮ್ಮ ತನ್ನ ಕೂದಲ ಗಂಟನ್ನು ಬಿಡಿಸಿದಾಗ ಅದರ ಸೌಂದರ್ಯ ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಎಲಿಯಜಾಟ್ಟಿನ ಅರಮನೆಯೊಳಗಿನ ತಂಬುರಾಟ್ಟಿಯವರಿಗೂ ಪೊನ್ನಮ್ಮಯ ಕೂದಲಿಂತೆ ಮನೋಹರವಾದ ಕೂದಲು ಇದ್ದಿರಲಿಕ್ಕಿಲ್ಲ ಎಂದು ಆಮೇಲೆ ಅಜ್ಜಿ ಪ್ರಸ್ತಾಪಿಸಿದರು. ಕೂದಲಿಗೆ ಜಾತಿಯೂ ಮತವೂ ಬಾಧಕವಲ್ಲ ಎಂದು ಅಜ್ಜಿಯ ಅಮ್ಮನಾದ ಮುತ್ತಜ್ಜಿ ಹೇಳಿದರು.

'ಭಾರೀ ಒಂದು ಅದ್ಭುತವೇ!' ಅಜ್ಜಿ ಹೇಳಿದರು.

'ಆ ಚೈನಿನಲ್ಲಿ ತೂಗೋ ಶಿಲುಬೆ ಕಂಡಾಗ್ಲೇ ಕ್ರಿಸ್ತ್ಯಾನಿ ಹುಡ್ಗೀಂತ ಗೊತ್ತಾದ್ದು. ಒಳ್ಳೆ ಮುಖಶ್ರೀ. ನಾಯರಿಕ್ಕೇಕೂಂತ ನಾ ಗ್ರಯಿಸಿದ್ದೆ' ಮುತ್ತಜ್ಜಿ ಹೇಳಿದರು.

'ಮದ್ವೆ ಹುಡಗಿ ಬಂದಳ್ಳೊ, ಮದ್ವೆ ಹುಡ್ಗೀ' ಮಧ್ಯಾಹ್ನದ ನಿದ್ದೆಯಿಂದ ಆ ಮಾತುಗಳು ನನ್ನನ್ನು ತಟ್ಟಿ ಎಚ್ಚರಿಸಿದುವು. ಯಾರಾ ಮಾತನ್ನುಚ್ಚರಿಸಿದ್ದು ? ಕೆಲಸದವಳಾ ? ಉತ್ತರದ ಕೋಣೆಯ ಕಿಟಕಿಯಿಂದ ನಾನು ಅಂಗಳದ ಕಡೆ ನೋಡಿದೆ. ದೊಡ್ಡ ಮಾವಿನ ಕೆಳಗೆ ಮೂರು ಕಲ್ಲುಗಳ ಮೇಲಿಟ್ಟ ಚೆಂಬು ಪಾತ್ರೆಯಿಂದ ಹೊಗೆ 'ಹೊಮ್ಮು'ತ್ತಿತ್ತು. ಭತ್ತ ಬೇಯಿಸುವ ಚೆಂಬು ಪಾತ್ರೆಯದು. ಅದರ ಬಲಕ್ಕೆ ಬಾಗಿದ ಹಲಸಿನ ಹತ್ತಿರ ಎಂಟೋ ಒಂಬತ್ತೋ ಹೆಂಗಸರು ಸಾಲು ಸಾಲಾಗಿ ನಿಂತಿದ್ದರು. ಅವರ ಮಧ್ಯದಲ್ಲಿ ಹಳದಿ ರೇಷ್ಮೆ ಸೀರೆಯನ್ನು ಮೊಣಕಾಲಿಗಿಂತ ಮೇಲೆ

ಸುತ್ತಿಕೊಂಡು ಓರ್ವ ಯುವತಿ ನಿಂತಿದ್ದಳು. ತಲೆಯಲ್ಲಿ ಬಾಡತೊಡಗಿದ್ದ ಮಲ್ಲಿಗೆಮಾಲೆಯೂ ಕೆನ್ನೆಯಲ್ಲಿ ಕಾಡಿಗೆಯ ಕುರುಹುಗಳೂ ಇದ್ದ ಓರ್ವ ವಧು.

'ಚಿಕ್ಕ ತಂಬ್ರಾಟ್ಯೋರಿಗೆ ಮದ್ವೆ ಹುಡ್ಗಿ ಇಷ್ಟಾಯ್ತಾ?' ವಳ್ಳಿ ಕೇಳಿದಳು. ನಾನು ಬೇಗಬೇಗ ಮಾಳಿಗೆ ಮೆಟ್ಟಲಿಳಿದು ಉತ್ತರದ ಚಾವಡಿಗೆ ಬಂದೆ.

'ಚಿಕ್ಕ ತಂಬ್ರಾಟ್ಯೋರಿಗೆ ಮದ್ವೆ ಹುಡ್ಗಿ ಇಷ್ಟಾಯ್ತಾ?' ವಳ್ಳಿ ಮತ್ತೊಮ್ಮೆ ಕೇಳಿದಳು.

ವಧು ಭ್ರಮಿತಳಾಗಿ ನನ್ನ ಮುಖವನ್ನು ನೋಡಿದಳು. ಅಂಚಿನಲ್ಲಿ ಹೂಗಳನ್ನು ಹೊಲಿದು ಸೇರಿಸಿದ್ದ ಕರವಸ್ತ್ರವನ್ನು ಅವಳು ತನ್ನ ಕೈಬೆರಳುಗಳಿಂದ ಬರಿದೇ ಹೊಸಕುತ್ತಿದ್ದಳು.

'ಮದುಮಗಳ ಹೆಸರೆಂತ?' ನಾನು ಕೇಳಿದೆ.

ವಳ್ಳಿ ತನ್ನ ಬಾಯಲ್ಲಿದ್ದ ಕೆಂಪು ಮಿಶ್ರಣವನ್ನು ಹಿತ್ತಿಲಲ್ಲಿ ಬೆಳೆದುನಿಂತಿದ್ದ ನಾಚಿಕೆಮುಳ್ಳಿನ ಗಿಡಗಳ ಮೇಲೆ ಉಗುಳಿದಳು.

'ಲಚ್ಚುಮೀಂತ ಎಸ್ರು' ವಳ್ಳಿ ಹೇಳಿದಳು.

'ಹೆಸ್ರೊಳ್ಳೆ ಉಂಟು' ಮುತ್ತಜ್ಜಿ ಹೇಳಿದರು. ವಳ್ಳಿಯ ಹಿರಿಯ ಮಗ ಅಂದು ಕೊಲಂಬೋದ ಒಂದು ಎಸ್ಟೇಟಿನಲ್ಲಿ ಕೆಲಸ ಮಾಡುತ್ತಿದ್ದ. ಅಂಜಕಾಳನ್ ಎಂಬ ರಹಸ್ಯ ಹೆಸರಿದ್ದ ಕುಂಜುಕುಟ್ಟನ್. ಮಾಂಬುಳ್ಳಿಕೃಷ್ಣನ ತಂದೆಯ ಹೆಸರು ಅಂಜಕಾಳನ್ ಎಂದಾಗಿತ್ತು. ಕೊಲಂಬೋದ ಉದ್ಯೋಗ ನಿಮಿತ್ತವಾಗಿಯೇ ಇರಬೇಕು, ನಗರವಾಸನೆಯುಳ್ಳ ಹುಡುಗಿ ಮಗನ ಹೆಂಡತಿಯಾಗಿ ವಳ್ಳಿಗೆ ಲಭಿಸಿದ್ದು ಎಂಬುದಾಗಿ ಚಿಕ್ಕಮ್ಮ ಅಭಿಪ್ರಾಯಪಟ್ಟರು.

'ನೀನವಳನ್ನು ನೋಯಿಸ್ಬಾರ್ದಾಯ್ತಾ ವಳ್ಳಿ' ಮುತ್ತಜ್ಜಿ ಹೇಳಿದರು.

'ಯಾಕೆ ದೊಡ್ಡ ತಂಬ್ರಾಟ್ಯೋರು ಹಾಗ್ಯೇಳೋದು?'

'ನಿನ್ನ ಸ್ವಭಾವ ನಂಗೆ ಚೆನ್ನಾಗಿ ಗೊತ್ತಿರೋದ್ರಿಂದಾನೇ ಹೇಳಿದ್ದು.'

ಜೊತೆಗೆ ಬಂದಿದ್ದ ಹೆಂಗಸರು ಕೈಬೆರಳುಗಳಿಂದ ಬಾಯಿ ಮುಚ್ಚಿ ನಕ್ಕರು. ವಳ್ಳಿ ಅದೊಂದು ಸಮಯಕಳೆಯೋ ಮಾತೆಂಬಂತೆ ಗಣಿಸಿ ಅವರೊಂದಿಗೆ ತಾನೂ ನಕ್ಕಳು. ಸಾಧಾರಣವಾಗಿ ವಳ್ಳಿ ತನ್ನ ವಿಶಾಲವಾದ ಎದೆಯನ್ನು ಮುಚ್ಚುವ ಕ್ರಮವಿಲ್ಲ. ಅವತ್ತೊಂದು ಮೈಯೊರಸುವ ವಸ್ತ್ರವನ್ನು ಹೆಗಲಿಗೆ ನೇತು ಹಾಕಿದ್ದಳು. ಅದರ ಹಾಸುಹೊಕ್ಕುಗಳೆಡೆಯಿಂದ ಅವಳ ಚಿನ್ನದಪದಕ, ಮೇಘಪಟಲಗಳ ನಡುವಣ ಪೂರ್ಣಚಂದ್ರನಂತೆ ಹೊಳೆಯುತ್ತಿತ್ತು. ಅವಳ ಮೂಗುತಿಯಲ್ಲಿ ಆರ್ದ್ರಾನಕ್ಷತ್ರದಂತೆ ಉಬ್ಬಿದ ಒಂದು ಕಲ್ಲಿತ್ತು. ಬಿಸಿಲಿಗೆ ಅದು ಥಳಥಳಿಸಿತು.

ಅತ್ತಿಗೆಯ ಗಮನವನ್ನು ಸೆಳೆಯುವುದಕ್ಕಾಗಿಯೆಂಬಂತೆ ಅಂಜಕಾಳನ್‌ನ ಚಿಕ್ಕತಮ್ಮಂದಿರು ಒಂಟಿ ಕಾಲಿನಲ್ಲಿ ಮಾವಿನ ಮರಕ್ಕೆ ಸುತ್ತು ಬರುವುದೂ ತೆಂಗಿನ ಮರಕ್ಕೆ ಹತ್ತಲೆಳಸುವುದೂ ಮಾಡುತ್ತಿದ್ದರು.

'ರಾಗವಾ... ಪ್ರಭಾಕರಾ.... ನಿಲ್ರೋ ಒಂದು ಮೂಲೇಲಿ, ನಾಯಿ ಮಕ್ಳೆ - ತೆಂಗೀಗತ್ತಿ ಕಾಲ್ಮುರೀಬೇಡಿ' ವಳ್ಳಿ ಮುಷ್ಟಿಬಿಗಿದು ತನ್ನ ಹಣೆಗೇ ಚಚ್ಚಿಕೊಳ್ಳುತ್ತ ಕೂಗಿ ಹೇಳಿದಳು.

ಪತಿಯ ಸಹೋದರರ ಕಸರತ್ತುಗಳನ್ನು ಲಕ್ಷ್ಮಿ ಕಡೆಗಣ್ಣಿನಿಂದ ನೋಡಿದಳು.

'ಊಟಾಯ್ತಾ ?' ಅಜ್ಜಿ ಕೇಳಿದರು.

'ಇಲ್ಲಿಲ್ಲ. ನಾನ್ನಟ್ಟಗೆ ಇಲ್ಲಿಗೇ ಕರ್ಕೊಂಬಂದೆ. ಮದ್ವೆ ಹುಡ್ಗೀನ್ನು ನೋಡ್ಲಿಕ್ಕೆ ಚಿಕ್ಕತಂಬ್ರಾಟಿಯೋರು ಕಾದಿರ್ಬೋದೂಂತ ನಂಗೊತ್ತಿತ್ತು' ವಳ್ಳಿ ಹೇಳಿದಳು.

ಅಜ್ಜಿ ಎರಡು ಸಪೂರ ಅಂಚಿನ ಮುಂಡುಗಳನ್ನು ವಧುವಿಗೆ ಉಡುಗೊರೆ ನೀಡಿದರು. ಆ ಮುಂಡುಗಳಿಗೆ ಕೇದಗೆ ಹೂವಿನ, ಶ್ರೀಗಂಧದ ಪರಿಮಳವಿತ್ತು. ಲಕ್ಷ್ಮಿ ಆ ಮುಂಡುಗಳನ್ನು ಮೂಸಿ ನೋಡಿದಳು.

'ಅವಳಿಗೇನಾದ್ರೂ ತಿನ್ಲಿಕ್ಕೊಡು' ಅಜ್ಜಿ ವಳ್ಳಿಗೆ ಹೇಳಿದರು.

ಅವರೆಲ್ಲರೂ ಆಮೇಲೆ ಮೆರವಣಿಗೆಯಲ್ಲಿ ತೆಂಕುದಿಕ್ಕಿಗೆ ಸಾಗಿದರು. ಪಶ್ಚಿಮದ ಅಂಗಳ ದಾಟಿ, ಕೊಳದ ಮನೆದಾಟಿ, ಶ್ರಾದ್ಧದಮನೆಯ ಹಿಂಭಾಗದಲ್ಲಾಗಿ ನಡೆದರು. ರಾಘವನೂ ಪ್ರಭಾಕರನೂ ಮೆರವಣಿಗೆಯ ನಾಯಕರಾಗಿ, ಒಂಟಿಗಾಲಿನಲ್ಲಿ.

ಎರಡು ದಿವಸಗಳ ನಂತರ ಲಕ್ಷ್ಮಿ ನಾಲಪ್ಪಾಟ್ಟಿನ ಭತ್ತ ಕುಟ್ಟುವ ಮನೆಯಲ್ಲಿ ಕಾಣಿಸಿಕೊಂಡಳು. ರೇಷ್ಮೆ ಸೀರೆಯಿಲ್ಲದೆ, ಹೂಮಾಲೆಯಿಲ್ಲದೆ, ಕಾಡಿಗೆಯಿಲ್ಲದೆ, 'ನಾನು ನಿಮ್ಮೆಲ್ಲರನ್ನೂ ಪ್ರೀತಿಸುತ್ತೇನೆ' ಎಂಬ ಅರ್ಥ ಬರುವ ಹೂನಗೆ ಮಾತ್ರ ಮುಖದಲ್ಲಿ ಧರಿಸಿಕೊಂಡು.

'ಕೆಲ್ಸ ಗೊತ್ತಾಗ್ಲಿ' ವಳ್ಳಿ ಹೇಳಿದಳು. 'ನನ್ನ ಕುಞ್ಕಾಳೀನ್ನೂ ಮದ್ವೆ ಮಾಡ್ಸಿ ಮುದುಟ್ಟೂರ್‌ಗೆ ಕಳಿಸಾಯ್ತು. ಇನ್ನೀ ಕುಟುಂಮ್ಮದ ಕೆಲ್ಸೆಲ್ಲ ಇವ್ಳೇ ಮಾಡ್ಬೇಕು. ನಂಗೆ ಪ್ರಾಯಾಯ್ತಲ್ಲ. ಯಾವಾಗ್ಲೂ ಗಂಟು ನೋವು. ಅಯ್ಯಮ್ಮೋ...' ವಳ್ಳಿ ಒರಳಿಗೆದುರಾಗಿ ನೆಲದಲ್ಲಿ ಕುಳಿತು ಗೋಡೆಗೆ ಆತು, ಕಣ್ಣು ಮುಚ್ಚಿಕೊಂಡಳು.

'ನಿಂಗೆಷ್ಟು ವಯಸ್ಸಾಯ್ತು ವಳ್ಳಿ' ನಾನು ಕೇಳಿದೆ.

'ನಂಗೊಂದಿಷ್ಟು ವಯಸ್ಸಾಯ್ತು ಚಿಕ್ಕಂಬ್ರಾಟ್ಟೀ. ಮೂವತ್ತಿಮೂರು. ಬರೋ ಸಿಮ್ಮಕ್ಕೆ ಮೂವತ್ತಿನಾಕಾಗ್ತದೆ.'

'ಅಂಜಕಾಳಂಗೆಷ್ಟು ವಯಸ್ಸಾಯ್ತು ?' ನಾನು ಕೇಳಿದೆ.

'ಅವನಿಗಿಪ್ಪತ್ತಾರು ವಯಸ್ಸೂ'

'ದೊಡ್ಡ ಮಗಳು ಕಾಳಿಗೊ ?'

'ಅವಳಿಗೆ ಮೂವತ್ತಿ ಎರಡೂ'

'ವಳ್ಳಿ ಒಂದು ವಯಸ್ಸಿದ್ದಾಗ ಹೆತ್ತದ್ದೇಗೆ ?'

'ಅದ್ರಲ್ಲಿ ಚಿಕ್ಕಂಬ್ರಾಟ್ಟಿಯೋರು ನಂಗೊಂದು ಸರೀ ಇಟ್ರು.'

ಭತ್ತ ಕುಟ್ಟಿ ಆದಾಗ ಲಕ್ಷ್ಮಿ ಒಂದು ಹಿಡಿ ತೌಡನ್ನು ತಿನ್ನಲೆಂದು ಗುಟ್ಟಾಗಿ ನನಗೆ ಕೊಟ್ಟಳು. ಅಂಬಾಳತ್ತಿನ ಮನೆಯ ಶ್ಯಾಮಲೆಯೂ ಎಡೆಗೆಡೆಗೆ ಓಡಿ ಬಂದು ತೌಡು ತಿನ್ನುತ್ತಿದ್ದಳು.

'ಹಿಂಡಿ ಇದಕ್ಕಿಂತಲೂ ರುಚಿ ಇರ್ತದೆ' ಶ್ಯಾಮಲ ಹೇಳಿದಳು.

ದನಕ್ಕೆ ಅಕ್ಕಚ್ಚಿನಲ್ಲಿ ಕಲಸುವುದಕ್ಕೆ ತೆಗೆದಿಟ್ಟ ತೆಂಗಿನ ಹಿಂಡಿ ತೆಗೆದು ನಾನೂ ಶ್ಯಾಮಲೆಯೂ ಯಾರೂ ಕಾಣದಂತೆ ತಿಂದೆವು. ಹುಳಿಯೂ ಹೊಯ್ಗೆಯು ತರಿತರಿತನವೂ ಬಾಯಿಯ ಅನುಭವಕ್ಕೆ ಬಂತು.

'ಮಣ್ಣಿದ್ರೂ ಅಡ್ಡಿಲ್ಲಾಯ್ತಾ. ಅದನ್ನು ನುಂಗಿ ಬಿಟ್ರಾಯ್ತು' ಶ್ಯಾಮಲ ಹೇಳಿದಳು.
ಶ್ಯಾಮಲ ಮಾವಿನಕಾಯಿ ಕೊಯ್ದು ಪಿಙಾಣಿ ಪಾತ್ರೆಯಲ್ಲಿಟ್ಟು ಉಪ್ಪೂ ಮೆಣಸೂ ಅರೆದು ತೆಂಗಿನೆಣ್ಣೆಯನ್ನೂ ಸೇರಿಸಿ ಮಿಶ್ರಮಾಡಿ ನಮಗೆಲ್ಲರಿಗೂ ತಿನ್ನಲಿಕ್ಕೆಂದು ತಂದುಕೊಡುತ್ತಿದ್ದಳು. ಹಿರಿಯರು ಕಾಣದಂತೆ ಮುಖದ್ವಾರದಲ್ಲಿ ಕುಳಿತೋ ಶ್ರಾದ್ಧದ ಮನೆಯಲ್ಲೋ ನಾವು ಅದನ್ನು ತಿನ್ನುತ್ತಲೂ ಕಣ್ಣೀರನ್ನು ಸುರಿಸುತ್ತಲೂ ಇದ್ದೆವು.

ಅಂದು ನಮ್ಮ ಸಂಗಡಿಗರಲ್ಲಿ ಮುಖ್ಯವಾಗಿ ಆರು ಮಂದಿಯಿದ್ದರು. ಮಾರಾತ್ತಾಟ್ಟಿನ ಟಿ.ಕೆ.ಆರ್. ಕುಟ್ಟಿ ಎಂದು ದಸ್ಕತ್ತು ಹಾಕಿ ಅಭ್ಯಾಸ ಮಾಡಿದ್ದ ತಮ್ಮ ಆತನ ತಂಗಿ ತಂಗಂ, ಅಂಬಾಳತ್ತಿನ ಕೇಶವದಾಸ್ ಮೆನೋನ್‌ರ ಮಗಳು ಮಾಲತಿಕುಟ್ಟಿ, ಕುಂಜುಣ್ಣಿ ಮೆನೋನ್‌ರ ಮಕ್ಕಳಾದ ಪ್ರಸನ್ನ, ಶ್ಯಾಮಲ, ಹೆಡ್‌ಮಾಸ್ಟರ್ ಚಾಮಿ ಅಯ್ಯರ್‌ರ ಮಗ ರಾಜು ಎಂಬ ರಾಜಮಣಿ. ನೋವಾದ ಕೂಡಲೆ ಅಳುವ ಯಾರನ್ನೂ ನಮ್ಮ ಗುಂಪಿನಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಹಸಿ ಕಡ್ಡಿಯಿಂದ ಪರಸ್ಪರ ಹೊಡೆದುಕೊಳ್ಳುವುದೂ ಮಣ್ಣಿಗೆ ಬೀಳಿಸುವುದೂ ಮುಂತಾದವು ನಮ್ಮ ವಿನೋದಗಳಾಗಿದ್ದುವು. ಅಂದೆಲ್ಲ ನಮ್ಮ ತೊಡೆಗಳಲ್ಲಿ ಹಿಡಿಕಡ್ಡಿಯ ಏಟಿನ ಕಲೆಗಳಿರುತ್ತಿದ್ದುವು. ಮೊಣಗಂಟುಗಳಲ್ಲಿ ಯಾವಾಗಲೂ ವಾಸಿಯಾಗದ ಗಾಯಗಳಿರುತ್ತಿದ್ದುವು. ಸಂಜೆಗೆ ಮೊದಲು ಕೊಳಕ್ಕಿಳಿದು ಸ್ನಾನ ಮಾಡುವಾಗ ನಾವು ಉರಿ ಸಹಿಸಲಾಗದೆ 'ಓ..ಓ....ಅಯ್ಯೋ' ಎಂಬ ಶಬ್ದ ಹೊಮ್ಮಿಸುತ್ತಿದ್ದೆವು. ನಾವೇ ರೂಪುಕೊಟ್ಟ ಆಟಗಳಾದ್ದರಿಂದ ನಮ್ಮೊಳಗೆ ಗಾಯ ಮಾಡಿಕೊಂಡಲ್ಲಿ ಆ ಬಗ್ಗೆ ನಾವು ಯಾವತ್ತೂ ಹಿರಿಯರಿಗೆ ದೂರು ಕೊಡುತ್ತಿರಲಿಲ್ಲ.

'ರಾತ್ರಿಪೆಟ್ಟು' ಎಂಬ ಹೆಸರಿನ ಒಂದು ಆಟ ನಮಗೆ ಬಹು ಇಷ್ಟವಾದ ಆಟವಾಗಿತ್ತು. ಮೇಲಿನ ಯಾವುದಾದರೊಂದು ಕೋಣೆಯಲ್ಲಿ ಕಿಟಕಿ ಬಾಗಿಲುಗಳೆಲ್ಲ ಮುಚ್ಚಿ ಒಂದು ಗುಂಪು ಇನ್ನೊಂದು ಗುಂಪನ್ನು ಹುಡುಕಿ ಹಿಡಿದು ಚಿವುಟಿಯೂ ಎಳೆದೂ ಹೊಡೆದೂ ನೋಯಿಸುವುದು. ಅದು ನಮ್ಮ ಆಟವಾಗಿತ್ತು. ಯಾರಿಗೂ ಅಳುವ ಅಧಿಕಾರವಿರಲಿಲ್ಲ. ಆಟದ ಕೊನೆಯಲ್ಲಿ ಕಿಟಕಿಗಳನ್ನು ತೆರೆದಾಗ ಕೆಲವು ಕೆನ್ನೆಗಳಲ್ಲಿ ಬೆರಳಿನ ಮುದ್ರೆಗಳನ್ನು ಕಾಣಬಹುದಾಗಿತ್ತು. ಕಣ್ಣುಗಳು ಕದಡಿಯೂ.

'ಮಾಲತಿಕುಟ್ಟಿ ಅತ್ತಾಗುಂಟು' ತಮ್ಮ ಹೇಳುತ್ತಿದ್ದ. ಅದನ್ನು ಕೇಳಿ ಕಂಗಾಲಾಗಿ 'ಕುಟ್ಟಿಯಕ್ಕಾ, ಕುಟ್ಟಿಯಕ್ಕಾ'ಂತ ಗಟ್ಟಿಯಾಗಿ ಬೊಬ್ಬೆ ಹಾಕುತ್ತ ಮಾಲತಿಕುಟ್ಟಿ ತನ್ನ ಸಾಕಮ್ಮನನ್ನು ಹುಡುಕುತ್ತ ಅಂಬಾಳತ್ತಿನ ಮನೆಗೆ ಓಡುತ್ತಿದ್ದಳು. 'ಅಳೋವ್ರಿಗೆ ಯುದ್ಧದಲ್ಲಿ ಪಾಲ್ಗೊಳ್ಳೋದು ಸಾಧ್ಯವಿಲ್ಲ'. ನನ್ನಣ್ಣ ಎಲ್ಲರಿಗೂ ಎಡೆಗಡೆಗೆ ಎಚ್ಚರಿಕೆ ಕೊಡುತ್ತಿದ್ದ. ಲೋಕಮಹಾಯುದ್ಧ ಪುನ್ನಯೂರ್‌ಕುಳಕ್ಕೆ ಬಂದು ತಲುಪುವಾಗ— ಮಾಲತಿಕುಟ್ಟಿಯನ್ನೂ ಪ್ರಸನ್ನಳನ್ನೂ ಹಿಟ್ಲರ್ ತನ್ನ ಸೈನ್ಯಕ್ಕೆ ಯಾವತ್ತೂ ಸೇರಿಸಿಕೊಳ್ಳಲಿಕ್ಕಿಲ್ಲ ಎಂಬುದಾಗಿ ನಮಗೆಲ್ಲ ತಿಳಿಯಿತು.

'ಇಂಥೋರನ್ನು ತೆಕ್ಕೊಂಡ್ರೆ ಯುದ್ಧದಲ್ಲಿ ಸೋಲೆ' ತಮ್ಮ ಹೇಳಿದ.

'ನನ್ನನ್ನು ಸೈನ್ಯಕ್ಕೆ ತೆಕ್ಕೊಂಡಾರು ಅಲ್ವೆ ?' ನಾನು ಕೇಳಿದೆ. ನನ್ನ ಎದೆ ಜೋರಾಗಿ ಢವಗುಟ್ಟುತ್ತಿತ್ತು.

ಮಾರಾತ್ತಾಟ್ಟಿನ ತಮ್ಮ ತನ್ನ ತಲೆಯನ್ನು ಹಿಂದೆ ಸರಿಸಿದ, ಬಲಗೈಯನ್ನು ತನ್ನ ಹಣೆಯ ಮೇಲಿಟ್ಟು ಜೋರಾಗಿ ನಕ್ಕ. 'ನಿಂಗೊಂದು ಕೋವಿ ಎತ್ತೋ ಶಕ್ತಿ ಇಲ್ವಲ್ಲಾ? ಅಮ್ಮೀ. ನಿನ್ನಿಂದ ಸೈನ್ಯಕ್ಕೆಂತ ಲಾಭ? ಕುದುರೆಗೆ ಆಹಾರ ಕುಟ್ಟಿಕೊಡ್ಲಿಕ್ಕಾಗ್ಬೋದು. ಅಷ್ಟೆ' ತಮ್ಮ ಹೇಳಿದ.

ಲಾನ್ಸ್‌ಡೌನ್ ರಸ್ತೆಯ ಮನೆಯೊಂದರಲ್ಲಿ ವಾಸಿಸುತ್ತಿದ್ದ ಕಾಲವದು. ವರಾಂಡದಲ್ಲಿ ನಿಂತು ರಸ್ತೆಯಲ್ಲಿ ನಡೆದು ಹೋಗುವವರನ್ನು ನೋಡಿ ಖುಷಿ ಪಡುವುದಕ್ಕೆ ನನಗೆ ಬೇಕಾದಷ್ಟು ಸಮಯವಿರುತ್ತಿತ್ತು. ಅದರಲ್ಲೂ ರಜಾ ದಿವಸಗಳಲ್ಲಿ. ಕೆಲವೊಮ್ಮೆ ನನ್ನ ನೋಟದ ತೀಕ್ಷ್ಣತೆ ನಿಮಿತ್ತವಾಗಿಯೇ ಇರಬೇಕು, ಅವರಲ್ಲಿ ಕೆಲವರು ಮೇಲಕ್ಕೆ ನೋಡಿ ನನ್ನನ್ನು ಗಮನಿಸುತ್ತಲೂ ಇದ್ದರು. ನನ್ನ ನೋಟವನ್ನು ಮನಶ್ಶಕ್ತಿಯ ಮೂಲಕ ಹೆಚ್ಚು ತೀಕ್ಷ್ಣ ಮಾಡಲು ನನಗೆ ಸಾಧ್ಯವಾಗುತ್ತಿತ್ತು. ಕನ್ನಡಿ ತೋರಿಸಿ ಸೂರ್ಯರಶ್ಮಿಯನ್ನು ಯಾರದ್ದಾದರೂ ಮುಖಕ್ಕೆ ಬೀಳಿಸುವ ರೀತಿಯ ವಿನೋದವಾಗಿತ್ತದು. ಕಣ್ಣುಗಳ ತೀವ್ರತೆ ಹೆಚ್ಚಿಸಿ ಅಪರಿಚಿತರನ್ನು ಆಕರ್ಷಿಸುವುದು. ಹೆಚ್ಚಿನವರೂ ಒಂಬತ್ತೋ ಹತ್ತೋ ವರ್ಷ ವಯಸ್ಸುಳ್ಳ ಫ್ರಾಕ್‌ಧಾರಿಣಿಯನ್ನು ನೋಡಿ ಮಂದಹಾಸ ಬೀರುತ್ತ ನಡೆದು ಹೋಗುತ್ತಿದ್ದರು. ಒಬ್ಬಾತ ಮಾತ್ರ ತನ್ನ ನಡೆ ನಿಲ್ಲಿಸಿ ನನ್ನನ್ನು ಅಸ್ವಸ್ಥಳಾಗಿಸುವ ರೀತಿಯಲ್ಲಿ - ನನ್ನ ಶರೀರವನ್ನೂ ಮುಖವನ್ನೂ ತನ್ನ ದೃಷ್ಟಿಯಲ್ಲಿ ಅದುಮಿದ. ಆತ ಕುರೂಪಿಯಾಗಿದ್ದ. ಕಾಷಾಯವರ್ಣದ ದೋತಿಯನ್ನೂ ಅಂಗಿಯನ್ನೂ ಧರಿಸಿದ್ದ. ಗಡ್ಡ, ಕೂದಲು ನಿಯಂತ್ರಣ ಮೀರಿ ಬೆಳೆದಿತ್ತು. ಕುತ್ತಿಗೆಯಲ್ಲಿ ವಿವಿಧ ರೀತಿಯ ಮಣಿಮಾಲೆಗಳನ್ನು ಧರಿಸಿದ್ದ. ಆತ ಮೇಲಕ್ಕೆ ನೋಡಿ, ನನ್ನನ್ನು ಕಂಡ ತಕ್ಷಣ ತನ್ನ ನಡಿಗೆ ನಿಲ್ಲಿಸಿದ. ಮುಂಡಕ್ಕೆ ಚಾಚಿದ್ದ ಕೆಂಪು ಹಲ್ಲುಗಳ ಮೂಲಕ ಆತ ನಗುವುದಕ್ಕೆ ಯತ್ನಿಸುತ್ತಿದ್ದಾನೆಂದು ನಾನು ತಪ್ಪಾಗಿ ಭಾವಿಸಿದೆ. ಆತನ ಮುಷ್ಠಿಯ ಚಲನೆಗಳನ್ನು ಕಂಡಾಗಲೇ ಅದು ನಗುವಲ್ಲ. ಭೀಭತ್ಸರೂಪದ ಒಂದು ಹೂಂಕಾರವಾಗಿತ್ತೆಂದು ನಾನು ಆಮೇಲೆ ಅರ್ಥೈಸಿಕೊಂಡೆ. ರೋಷಗೊಂಡ ಕಾಡುನಾಯಿಯ ಮುಖಭಾವವಾಗಿತ್ತದು. ಆತ ತನ್ನ ಬಲದ ಕಾಲನ್ನು ಯಾವುದೋ ನಾಟ್ಯದ ಆರಂಭಗತಿಯೋ ಎಂಬಂತೆ ಚಲಿಸಿದ. ಎಡದ ಕೈಯಿಂದ ಲೈಟುಕಂಬ ಹಿಡಿದು ಆತ ನನ್ನನ್ನೇ ನೋಡಿ ನಿಂತ. ತನ್ನ ದೃಷ್ಟಿಯನ್ನು ಹಿಂದೆಗೆದರೆ ನಾನು ಓಡಿ ತಪ್ಪಿಸಿಕೊಂಡೇನೆಂದು ಆತ ಭಾವಿಸಿರಬೇಕು. ಆತನ ಕಪ್ಪು ಮುಖ ಬಿಸಿಲಿಗೆ ಬೆವತು ಹೊಳೆಯುತ್ತಿದ್ದುದನ್ನು ಭೀತಿ ಮಿಶ್ರಿತ ಕುತೂಹಲದಿಂದ ನಾನು ನೋಡಿದೆ.

ಮತ್ತೆ ಅದೊಂದು ಹವ್ಯಾಸವಾಯಿತು. ಆ ಸನ್ಯಾಸಿ ನನ್ನ ಬರುವಿಕೆಯನ್ನು ನಿರೀಕ್ಷಿಸುತ್ತಾ ರಸ್ತೆಯಲ್ಲಿ ಅಂಚೆ ಪೆಟ್ಟಿಗೆಯ ಹಿಂದೆ ಮುದುಡಿ ಕುಳಿತ. ವರಾಂಡದಲ್ಲಿ ನನ್ನನ್ನು ಕಂಡರೆ ತನ್ನ ಹಲ್ಲುಗಳನ್ನು ಪ್ರಕಟಪಡಿಸುತ್ತಿದ್ದ. ಆಮೇಲೆ ತನ್ನ ಗುಪ್ತಾಂಗವನ್ನು ಕೈಗೆತ್ತಿ ಲಲ್ಲೆಯಾಡುತ್ತಿದ್ದ. ಈ ಜಗತ್ತಿನ ವಿರೂಪಗಳ ಪ್ರತೀಕವಾಗಿ ನಾನಾತನನ್ನು ಪರಿಗಣಿಸಿದೆ. ತೆರೆದ ಮಹಡಿಯ ಮೆಟ್ಟಿಲಿನ ಮೂಲಕ ಆತ

ಮೇಲಕ್ಕೇರಿ ಬಂದು ನನ್ನನ್ನು ಹಿಡಿದೊಯ್ಯಬಹುದೆಂದು ನಾನು ಭೀತಳಾದೆ. ಹಾಗಿದ್ದೂ ವರಾಂಡಕ್ಕೆ ಬರದಿರಲು ನನ್ನಿಂದ ಸಾಧ್ಯವಾಗಲಿಲ್ಲ. ಅಪಾಯಗಳನ್ನು ಆಹ್ವಾನಿಸುವ ಮನಸ್ಸಾಗಿತ್ತು ನನ್ನದು. ಒಮ್ಮೆ ಮಧ್ಯಾಹ್ನದ ನಿದ್ದೆಯ ಸಮಯದಲ್ಲಿ ನಾನು ಮಾತ್ರ ನಿದ್ರಿಸದೆ ಒಂದು ಹೂಚಟ್ಟಿಯ ಗಿಡದಂತೆ ನಿಂತಿದ್ದಾಗ ಸನ್ಯಾಸಿ ರಸ್ತೆಯಲ್ಲಿ ಕಾಣಿಸಿಕೊಂಡ. ಆತನ ರೋಮ ನಿಬಿಡವಾದ ಮುಖದಲ್ಲಿ ಎರಡು ಸಿಹಿಹಣ್ಣುಗಳಂತೆ ಕಣ್ಣುಗಳು ಹೊಳೆದುವು. ಹಲ್ಲುಗಳು ಅವುಗಳ ಭೀಕರ ನಗುವನ್ನು ನನಗೆ ಉಡುಗೊರೆಯಾಗಿ ಕೊಟ್ಟವು. ತನ್ನ ದೇಹವನ್ನು ನೇವರಿಸುತ್ತ ನಿಂತ ಆತನನ್ನು ನನ್ನ ಕೆಲಸದಾಕೆ ನೋಡಿದಳು.

'ಅಯ್ಯೋ ನನ್ನಮ್ಮೋ, ಇದೆಂತ ಗ್ರಾಚಾರ ಹಿಡಿದ ಸನ್ಯಾಸಿ! ಮಗೂನ್ನ ನೋಡಿ ಮುಂಡೆತ್ತುತ್ತಲ್ಲ. ಈಚೆ ಬನ್ನಿ ಮಗೂ. ವರಾಂಡದಲ್ಲಿ ನಿಲ್ಬೇಡಿ' ಅವಳು ಹೇಳಿದಳು. ಅವಳು ನನ್ನನ್ನು ಹಿಡಿದೆಳೆದು ಒಂದು ಸೋಫಾದಲ್ಲಿ ಕುಳ್ಳಿರಿಸಿದಳು.

'ನೀವೇನೂ ಕಾಣ್ಲಿಲ್ಲಲ್ಲ?' ಅವಳು ಬಿಳಿಚಿದ ತುಟಿಯಗಲಿಸಿ ಕೇಳಿದಳು: ಕಾಣ್ಬಾರದ್ದೇನೂ ಕಾಣ್ಲಿಲ್ಲಲ್ಲಾ?' ಅವಳು ಮತ್ತೂ ಕೇಳಿದಳು.

'ನಾನು ತಲೆ ಅಲುಗಿಸಿದೆ.'

'ನೀವಾ ಸನ್ಯಾಸಿಯ ಮುಖ ನೋಡಿದ್ದಷ್ಟೇ ಅಲ್ವಾ?' ಕೆಲಸದವಳು ಕೇಳಿದಳು.

'ಅವನನ್ನು ಇಡೀ ನೋಡಿದೆ' ನಾನು ಹೇಳಿದೆ.

'ನನ್ನ ಪುಣ್ಲೋಸ್ಥಾನದ ಭಗೋತಿ, ಇನ್ನಾನೇನಪ್ಪಾ ಮಾಡ್ಲಿ? ನೀವು ಅಮ್ಮನತ್ರ ಹೇಳಿದ್ರೆ ನನ್ನಲ್ವಾ ಬೈಯೋದು. ನಿಮ್ಗೆ ಮೊದ್ಲೇ ನನ್ನ ಕರೀಬೋದಾಗಿತ್ತಲ್ಲ? ನಾ ಆ ಸನ್ಯಾಸೀನ್ನು ಕಲ್ಲೊಡ್ದು ಓಡಿಸ್ತಿದ್ದೆ' ಅವಳು ಹೇಳಿದಳು. ಅಷ್ಟು ಹೇಳಿ ಅವಳು ಮತ್ತೂ ವರಾಂಡಕ್ಕೆ ಹೋಗಿ ರಸ್ತೆಯ ಕಡೆಗೆ ನೋಡಿದಳು.

'ನೀವು ಏಳ್ಬೇಡಿ ಮಗೂ. ಆ ಗ್ರಾಚಾರ ಹಿಡ್ದವ ಹೋಗ್ಲಿಲ್ಲ.'

ಕೆಲಸದವಳ ಗದ್ದಲ ಕೇಳಿದ ಅಡುಗೆಯವ ಕಾಲಿಗೆ ಬಾರು ತುಂಡಾದ ಚಪ್ಪಲಿ ಸಿಕ್ಕಿಸಿ ರಸ್ತೆಗಿಳಿದ. ಅವ ಸನ್ಯಾಸಿಯೊಂದಿಗೆ ಮಾತಾಡೋದನ್ನು ನಾನು ನೋಡಿದೆ. ಸನ್ಯಾಸಿಯನ್ನು ಗದರಿಸುವುದಕ್ಕೆ ಹೋದವ ಆತನೊಂದಿಗೆ ಸ್ನೇಹ ಪ್ರಕಟಪಡಿಸುವಂತೆ ನನಗೆ ತೋರಿತು. ಇಬ್ಬರೂ ಹಸನ್ಮುಖಿಗಳಾಗಿದ್ದರು. ಅವ ಹಿಂದಿರುಗಿದ ಕೂಡಲೆ ಸನ್ಯಾಸಿ ವೇಗವಾಗಿ ಉತ್ತರ ದಿಕ್ಕಿಗೆ ನಡೆದ. ಎಲ್ಗಿನ್ ರಸ್ತೆ ಪ್ರಾರಂಭವಾಗುವಲ್ಲಿ ಆತ ಒಮ್ಮೆ ತಿರುಗಿನೋಡಿದ.

'ಆ ಜನಕ್ಕೆ ನಮ್ಮ ಮಗೂನ್ನ ಮದ್ವೆ ಮಾಡ್ಬೇಕಂತೆ' ಅಡುಗೆಯವ ಹೇಳಿದ.

'ಅದಕ್ಕೆ? ಅದನ್ನು ಕೇಳ್ಕೊಂಡು ನೀವ್ವಾಪಾಸು ಬಂದ್ರಿ, ಅಲ್ವೆ? ಕಿವಿಗೆಡ್ಡೆಗೆ ಒಂದೇಟು ಕೊಡ್ಬೋದಿತ್ತಲ್ಲ? ನೀವೊಂದು ಗಂಡ್ಸಾ?' ಕೆಲಸದವಳು ಸಿಟ್ಟಿಗೆದ್ದದ್ದು ಕಂಡು ಬಂತು. 'ತಿಂದ ಅನ್ನದ ನೆಂಪಿಲ್ಲ ನಿಮ್ಗೆ' ಆಕೆ ಮುಂದುವರಿದಳು, 'ಮೈ ನೆರೇದ ಈ ಮಗೂನ ಮದ್ವೆ ಆಗ್ತೇನೆಂತ ಹೇಳಿದ ಅವನ ಕೆಪ್ಪಟೆಗೆ ಎರಡು ಬಿಗೀಲಿಲ್ಲಲ್ಲ! ನಾಯೇಳ್ತೇನೆ ಅಮ್ಮನತ್ರ. ನಾ ಯಜಮಾನ್ರತ್ರವೂ ಹೇಳ್ತೇನೆ.'

'ಮಗುವೂ ನೀವೂ ಸನ್ಯಾಸಿಯ ಕೈಯಾಟ ನೋಡಿ ನಿಂತದ್ದಕ್ಕಲ್ವಾ ಅದು ಕಂಡದ್ದು? ಬೇರೇನೂ ನೋಡ್ಲಿಕ್ಕಿರ್ಲಿಲ್ವಾ, ಈ ಕಲ್ಕತ್ತೇಲಿ?' ಅಡುಗೆಯವ ಬೊಬ್ಬಿರಿದ.

ಆಮೇಲೆ ಆ ಕತೆ ಕುಞಾತ್ತುವಿಗೆ ಸಿಕ್ಕಿತು. ಕುಞಾತ್ತುವಿನಿಂದ ತಂದೆಯ ಕಂಪೆನಿಯಲ್ಲಿ ಕೆಲಸಕ್ಕಿದ್ದ ಡ್ರೈವರ್‌ಗಳಿಗೆ ಸಿಕ್ಕಿತು. ಅಲಾವುದೀನ್ ಎಂಬ ಡ್ರೈವರ್ ಒಂದು ಶನಿವಾರ ಸನ್ಯಾಸಿಯನ್ನು ಆವೇಶದಿಂದ ಮೆಟ್ಟಿದ. ಆದಿನ ಬದುಕಿಕೊಳ್ಳುವುದಕ್ಕಾಗಿ ಎಲ್ಜಿನ್ ರಸ್ತೆಯ ಕಡೆಗೆ ಓಡಿದ ಆ ಪ್ರಾಕೃತರೂಪಿ ಆಮೇಲೆ ಅತ್ತಕಡೆ ಸುಳಿಯಲಿಲ್ಲ. 'ಕುಂಭಮೇಳ ಮುಗಿಸಿ ಹಿಂದಿರುಗುತ್ತಿದ್ದವನಂತೆ' ಅಡುಗೆಯವ ಒಂದು ದಿವಸ ಹೇಳಿದ. 'ಯಾರು ?' ನಾನು ಕೇಳಿದೆ. 'ಕಲ್ಲೂ ತೋರ್ಸಿದ್ಧಲ್ಲ, ಮುಂಡೆತ್ಲಿಲ್ವಾ ಒಬ್ಬ ಗೋಸಾಯಿ ? ಅವ ಕುಂಭಮೇಳ ಮುಗ್ಸಿ, ಬರ್ತಿದ್ದೋನಂತೆ.'

'ಕುಂಭಮೇಳಾಂದ್ರೆಂತಾ ?'

'ಲೋಕದ ಜನೆಲ್ಲ ಸೇರ್ತಾರೆ ಕುಂಭಮೇಳ ನೋಡ್ಲಿಕ್ಕೆ. ಸನ್ಯಾಸಿಗಳ ಒಂದು ಜಂಗುಳಿ ಜಾತ್ರೆಯಲ್ವ, ಜಂಗುಳಿ! ಕೆಲೋರು ಹಾವನ್ನೆಲ್ಲ ತಲೆಗೆ ಸುತ್ಕೊಂಡು ಬರ್ತಾರೆ.'

'ನೀವ್ಹೋಗಿದ್ರಾ ನಂಬ್ಯಾರೇ ಕುಂಭಮೇಳಕ್ಕೆ ?'

'ನಾವ್ಹೋಗ್ಲಿಲ್ಲ.... ನಾ ಸನ್ಯಾಸಿ ಅಲ್ವಲ್ಲಾ. ನಂಗೆ ಹಾವೂ ಬೇಡ, ಭಸ್ಮವೂ ಬೇಡ. ಏನೂ ಬೇಡ. ಒಂದೆಡೆ ಸಮಾಧಾನದಿಂದ ಬದ್ಕಿದ್ರೆ ಸಾಕು. ಕಲ್ಲೂ ಹೋಗ್ಲಿ ಕುಂಭಮೇಳ ನೋಡ್ಲಿಕ್ಕೆ. ಅವ್ಳಿಗಲ್ವೆ ಸನ್ಯಾಸಿಗಳ ಮೇಲೆ ಪ್ರೀತಿ.'

ಕಲ್ಲೂ ಅಳುವುದಕ್ಕೆ ತೊಡಗಿದಳು. ಪರಿಹಾಸಕ್ಕೆ ಗುರಿಯಾದಾಗಲೆಲ್ಲ ಬಿಕ್ಕಿ ಬಿಕ್ಕಿ ಅಳುವುದಕ್ಕೂ ಆ ಮೂಲಕ ಕ್ಷಮೆ ಕೇಳಿಸುವುದಕ್ಕೂ ಅವಳು ಸಮರ್ಥಳಾಗಿದ್ದಳು. ಹತ್ತೋ ಹದಿನೈದೋ ಸಂದರ್ಭಗಳಲ್ಲಿ ಅವಳಲ್ಲಿ ಕ್ಷಮೆ ಕೇಳಬೇಕಾಗಿ ಬಂದ ನಂಬ್ಯಾರ್ ಕೊನೆಗೆ ಅವಳನ್ನು ಮದುವೆಯೂ ಆದ. ಆಮೇಲೆ ಅವಳನ್ನು ಎಷ್ಟೇ ನೋಯಿಸಿದರೂ ನಂಬ್ಯಾರ್ ಕ್ಷಮೆ ಕೇಳಬೇಕಾಗಿ ಬರಲಿಲ್ಲ.

ನನಗೆ ಎಂಟು ವಯಸ್ಸೂ ಎಂಟು ತಿಂಗಳೂ ಪ್ರಾಯವಾಗಿದ್ದಾಗ ನನ್ನ ಅಮ್ಮ ಇನ್ನೊಬ್ಬು ಹೆಣ್ಣು ಮಗುವಿಗೆ ಜನ್ಮವಿತ್ತರು. ಹೆರಿಗೆ ದಿನ ಸಮೀಪಿಸುವಾಗ ಮಿಡ್‌ವೈಫನ್ನು ಮನೆಯಲ್ಲೇ ಇರಿಸಿಕೊಳ್ಳುವ ಕ್ರಮ ಆಗ ಇತ್ತು. ಆ ದಿನಗಳಲ್ಲಿ ಅಮ್ಮ ನಡೆದಾಡುವ ಜಾಗದಲ್ಲೆಲ್ಲ ಮಿಡ್‌ವೈಫ್ ಕೂಡ ಸಖಿಯಂತೆ ನಡೆದಾಡಿದಳು. ಆಕೆ ಓರ್ವ ಸಿರಿಯನ್ ಕ್ರಿಸ್ತಾನಿಯಾಗಿದ್ದಳು. ಅವರನ್ನು ನಾಲಪ್ಪಾಟ್ಟಿನವರು ನರ್ಸ್ ಎಂದೂ ನೈಸ್ ಎಂದೂ ಕರೆಯುತ್ತಿದ್ದರು. ಸಾಧಾರಣವಾಗಿ ನಂಬಿಕೊಂಡು ಬಂದ ಜಾತಿಮತ ವ್ಯತ್ಯಾಸಗಳನ್ನೆಲ್ಲ ಅವರು ಪ್ರಸವ ಕಾಲದಲ್ಲಿ ಸೌಕರ್ಯ ಗಮನಿಸಿ ಮರೆತು ಬಿಡುತ್ತಿದ್ದರು.

ನರ್ಸಿಗೆ ನಾಲಪ್ಪಾಟ್ಟಿನಲ್ಲಿ ತಂಗುವುದು ಇಷ್ಟದ ವಿಷಯವಾಗಿತ್ತು. ಮಾತಾಡತೊಡಗಿದರೆ ಸಾಕಷ್ಟು ಕೇಳುಗರಿದ್ದರು. ಮಲಗುವ ಎಲ್ಲ ಸೌಕರ್ಯಗಳೂ ಇದ್ದುವು.

'ಸ್ವಲ್ಪ ಮೀನು ಪದಾರ್ಥ ಸೇರಿಬಿಟ್ಟರೆ ಬಾರಿ ಗಮ್ಮತ್ತು' ಅವರು

ಕೆಲಸದವರೊಂದಿಗೆ ಹೇಳಿದರು. ಸಸ್ಯಾಹಾರವನ್ನೇ ಸೇವಿಸಬೇಕಾಗಿ ಬಂದ ಮಾಂಸಹಾರಿಗಳಾದ ಅಡುಗೆಯವರು ಸಹತಾಪದೊಂದಿಗೆ ನಕ್ಕರು.

ಕೊನೆಗೆ ವಳ್ಳಿ ಒಂದು ಉಪಾಯ ಕಂಡುಕೊಂಡಳು. ನಾಲಪ್ಪಾಟ್ಟಿನಲ್ಲಿ ಮಧ್ಯಾಹ್ನದ ಊಟ ಒಂದು ಗಂಟೆಗೆಲ್ಲ ಮುಗಿದಿರುತ್ತದೆ. ಅನಂತರ ವೀಳ್ಯ ಜಗಿಯಲೆಂದು ಹೇಳಿ 'ನೈಸ್' ಮಾಂಬುಳ್ಳಿ ಮನೆಗೆ ಹೋಗಬೇಕು. ನಾಲಪ್ಪಾಟ್ಟಿನಲ್ಲಿರುವವರು ಹೊಗೆಸೊಪ್ಪಿನ ಹುಡಿ, ವೀಳ್ಯದೆಲೆ, ಅಡಕೆ ಕೊಡುವುದಿಲ್ಲವೆಂದಲ್ಲ. ಆದರೆ ಊರ ಹೊಗೆಸೊಪ್ಪು ಬೇಕೆಂದು ಹೇಳಿ 'ನೈಸ್' ತನ್ನ ನಡಿಗೆಗೆ ವೇಗವನ್ನು ಹೆಚ್ಚಿಸಬೇಕು. ಅಲ್ಲಿ ಮುಖಮನೆಯಲ್ಲಿ ಹಲಗೆ ಮಣೆಯಲ್ಲಿ ಕುಳಿತು ಒಳ್ಳೆಯ ಕುಚ್ಚಿಲಕ್ಕಿಯ ಅನ್ನಕ್ಕೆ, ಕೋಡುಹುಳಿ ಹಾಕಿ ಮಾಡಿದ ಬೂತಾಯಿ ಪದಾರ್ಥ ಸೇರಿಸಿ ಉಣ್ಣಬಹುದು. ಮೀನಿನ ವಾಸನೆ ಬಾಯಿಯಿಂದ ಹೋಗಲಿಕ್ಕೆಂದು ಊರ ಹೊಗೆಸೊಪ್ಪು ಸೇರಿಸಿ ವೀಳ್ಯ ಜಗಿಯಬಹುದು. ಈ ರೀತಿಯ ಚಿಪ್ಪಡಿ ವಿದ್ಯೆಗಳು ನನಗೆ ಖುಷಿಕೊಟ್ಟವು. ಶರೀರದ ಮೇಲ್ಭಾಗ ಸ್ಥೂಲವಾಗಿಯೂ ಸೊಂಟದ ಕೆಳಭಾಗ ಸಪೂರವಾಗಿಯೂ ಕಾಣುವ ಆ ಹೆಂಗಸರು ಗಂಜಿ ಪಸೆಯ ಸೀರೆಯುಟ್ಟು ಕೊಡೆ ಹಿಡಿದುಕೊಂಡು ತೆಂಕುಪಡು ದಿಕ್ಕಿಗೆ ನಡೆಯಬೇಕಿದ್ದರೆ ನಾನವರನ್ನು ಕೊಳದವರೆಗೆ ಹಿಂಬಾಲಿಸುತ್ತಿದ್ದೆ. ಅವರು ಬಾಯಿ ತುಂಬ ಉಣ್ಣುವುದೂ ವೀಳ್ಯ ಜಗಿದು ಗಿಡಗಳ ಗುಂಪಿಗೆ ಉಗುಳುವುದೂ ನೋಡಿನಿಲ್ಲಲು ನನಗೆ ಆಸಕ್ತಿಯಿತ್ತು. ಅವರ ಗಹಗಹಿಸುವ ನಗೆಯೂ ನನಗಿಷ್ಟವಾಯಿತು.

ಹೆರಿಗೆ ದಿನ ಸಮೀಪಿಸಿತೆಂದು ಎಲ್ಲರಿಗೂ ಖಾತ್ರಿಯಾದರೆ ಗರ್ಭಿಣಿಗೆ ಹರಳೆಣ್ಣೆ ಕುಡಿಸುವ ಸಂಪ್ರದಾಯ ಅಂದು ಚಾಲ್ತಿಯಲ್ಲಿತ್ತು. ಒಳ್ಳೆ ನಕ್ಷತ್ರದ ಒಂದು ದಿವಸ ಆಯ್ದು ಅದರ ಮೊದಲ ದಿನ ಹೊಟ್ಟೆ ತೊಳೆಸಲು ವ್ಯವಸ್ಥೆ ಮಾಡುತ್ತಿದ್ದರು. ಹೆಚ್ಚಾಗಿ ಆ ಹೊಟ್ಟೆ ತೊಳಿಸಿದ ಮೂರನೆಯ ದಿವಸ ಗರ್ಭಿಣಿ ಹೆರುತ್ತಲೂ ಇದ್ದಳು. ವೃಶ್ಚಿಕ ತಿಂಗಳು ಉತ್ರಾಡ ನಕ್ಷತ್ರ ಹುಟ್ಟುವಾಗ ಅಮ್ಮನಿಗೆ ಹರಳೆಣ್ಣೆ ಕುಡಿಯಬೇಕಾಗಿ ಬಂತು. ತಿರುವೋಣದಂದೋ ಧನಿಷ್ಠದಂದೋ ಹೆರಿಗೆಯಾದೀತೆಂದು ಮುತ್ತಜ್ಜಿ ಸೂಚಿಸಿದರು. ಹೆತ್ತದ್ದು ಪೂರ್ವಾಭಾದ್ರ ದಿನದಂದು. ರಾತ್ರಿ ಸುಮಾರು ಒಂದು ನಿದ್ದೆಯಿಂದ ಪಕ್ಕನೆ ಎಚ್ಚರವಾದಾಗ ವರಾಂಡದಲ್ಲಿ ಒಳ್ಳೆ ಬೆಳಕು. ನಡುವಿನ ಕೋಣೆಯಿಂದ ಮೆತ್ತನೆಯ ಮಾತುಕತೆ. ಎದ್ದುಹೋಗಿ ಅಲ್ಲೇನು ನಡೆದಿದೆಯೆಂದು ಹೋಗಿ ತಿಳಿದುಕೊಳ್ಳಲು ನನಗೆ ಸಂಕೋಚವಾಯಿತು. ರಾತ್ರಿ ಹೊತ್ತು ಪ್ರಾಯಪೂರ್ತಿಯಾದವರು ಮಾತ್ರ ವ್ಯವಹರಿಸಬಹುದಾದ ಕಾಲಘಟ್ಟವೆಂದು ನಾನು ಬಲ್ಲವಳಾಗಿದ್ದೆ.

ಹೆಚ್ಚು ಸ್ಫುಟವಾಗಿ ಕೇಳುತ್ತಿದ್ದುದು ನರ್ಸಿನ ಧ್ವನಿ ಅವರು ಹೇಳಿದರು:

ಒತ್ತಡ ಹಾಕಿ..... ಇನ್ನೊಮ್ಮೆ ಒತ್ತಡ ಹಾಕಿ.

ನನಗೆ ನಗು ಬಂತು. ನಗು ತಡೆಯಲಿಕ್ಕೆ ನಾನು ದಿಂಬನ್ನು ಕಚ್ಚಿದೆ. ಅಲ್ಲಿಗೇ ನನಗೆ ಮತ್ತೊಮ್ಮೆ ನಿದ್ದೆ ಹತ್ತಿತು. ಕಮ್ಲಾ, ಕಮ್ಲಾ.... ಏಳು ಎಂಬುದಾಗಿ ಅಜ್ಜಿ ಆಮೇಲೆ ಕರೆದಾಗಲಷ್ಟೆ ನಾನು ಎದ್ದುದು. ಕಿಟಕಿಯಾಚೆ ಆಕಾಶವಿನ್ನೂ ಬಿಳಿಯಾಗಿ

ಮುಗಿದಿರಲಿಲ್ಲ. ಆದ್ದರಿಂದಲೇ ಅಜ್ಜಿ ಕರೆದೆಬ್ಬಿಸಿದಾಗ ನನಗೆ ಆಶ್ಚರ್ಯವಾಯಿತು.

'ನಿಂಗೆ ತಂಗಿನ್ನೋಡ್ಬೇಡ್ವೆ ಕಮ್ಲಾ?' ಅಜ್ಜಿ ಕೇಳಿದರು.

'ತಂಗಿ ಬಂದ್ಲಾ?' ನಾನು ಕೇಳಿದೆ.

'ಬಂದ್ಲು.'

ವಿಷುಕಣಿ ನೋಡುವುದಕ್ಕೆ ಕರೆದೊಯ್ಯಲ್ಪಡುವವಳಂತೆ ಅರೆಮುಚ್ಚಿದ ಕಣ್ಣು ರೆಪ್ಪೆಯೊಂದಿಗೆ ನಾನು ನಡುಕೋಣೆಗೆ ನಡೆದೆ. ಅಲ್ಲಿದ್ದ ಮಂಚದಲ್ಲಿ ಅಮ್ಮ ಮಗ್ಗುಲಾಗಿ ಮಲಗಿ ನಿದ್ರಿಸುತ್ತಿದ್ದರು. ನೆಲದಲ್ಲಿ ಹರಡಿದ್ದ ಹುಲ್ಲು ಚಾಪೆಯಲ್ಲಿ ಒಂದು ದಪ್ಪನೆಯ ಶಿಶು ಮಲಗಿತ್ತು. ಅದರ ಕತ್ತರಿಸಿದ ಹೊಕ್ಕುಳಿನ ತುದಿಬಟ್ಟೆಯಲ್ಲಿ ರಕ್ತದ ಕಲೆಯಿತ್ತು. ಕೋಣೆಯೊಳಗೆ ಡೆಟ್ಟಾಲಿನ ವಾಸನೆ ತುಂಬಿಹೋಗಿತ್ತು.

'ಪುಟ್ಟ ತಂಗಿಯನ್ನು ಮುಟ್ಟೋದಿಲ್ವೆ?' ಅಜ್ಜಿ ಕೇಳಿದರು.

'ಈಗ ಬೇಡ.'

'ನಿಂಗಿಷ್ಟ ಆಗ್ಲಿಲ್ವೆ?'

ನಾನು ತಲೆ ಅಲುಗಿಸಿದೆ.

'ಈ ಮಗು ದೊಡ್ಡದಾಗೋದ್ಯಾವಾಗ? ನನ್ಜೊತೆ ಆಡ್ಲಿಕ್ಕೆ ಬರೋದ್ಯಾವಾಗ?' ಅಜ್ಜಿ ನಕ್ಕರು.

'ನಿನ್ನೊಟ್ಟಿಗೆ ಆಡ್ಲಿಕ್ಕೆ ಬರ್ಲಿಕ್ಕಿಲ್ಲ ಕಮ್ಲಾ. ಈ ಮಗು ದೊಡ್ಡದಾಗ್ಬೇಕಿದ್ರೆ ನಿನ್ನ ಆಟೆಲ್ಲ ನಿಂತಿರ್ತದೆ.'

'ಮತ್ಯಾಕೆ ಅಮ್ಮ ಇದನ್ನು ಹೆತ್ತದ್ದು?'

'ಹುಚ್ಚುಚ್ಚು ಮಾತಾಡ್ಬಾರ್ದು ಕಮ್ಲಾ. ಹೋಗಿ ಹಲ್ಲುಜ್ಜಿ ಓದು.'

ಅಂದು ಉಪಾಹಾರದ ಹೊತ್ತಿಗೆ ಅಣ್ಣ ಹೇಳಿದ:

'ಆ ಮಗೂನ್ನ ನನ್ನ ಕಿಸೆಯಲ್ಲಿ ಹಾಕ್ಬೋದು. ಅಷ್ಟು ಚಿಕ್ಕದು. ನಾನು ಕಿಸೆಯಲ್ಲಿ ಹಾಕಿ ನೋಡ್ಲಾ?'

'ಕಿಸೆಯಲ್ಲಿ ಹಿಡೀಲಿಕ್ಕಿಲ್ಲ. ಸ್ಕೂಲ್‌ಬೇಗಿನಲ್ಲಿ ಹಾಕುವಾ. ಏನಾಯ್ತು ಅಳಿಲನ್ನು ಹಿಡ್ದು ಪಳಗಿಸುವಾಂತೇಳಿ? ಎಷ್ಟು ಕಾಲಾಯ್ತು ಹೇಳೋದು? ಇಲ್ಲೀವರೆಗೆ ಹಿಡೀಲಿಲ್ಲಲ್ಲ?'

ಒಂದು ಅಳಿಲನ್ನು ಪಳಗಿಸಿ ತನ್ನ ನಿತ್ಯ ಸಂಗಾತಿಯನ್ನಾಗಿ ಮಾಡಿಕೊಳ್ಳಲು ಅಣ್ಣ ಬಯುಸಿದ್ದ. ಅದಕ್ಕಾಗಿ ಕಾರ್ಡ್‌ಬೋರ್ಡಿನ ಪೆಟ್ಟಿಗೆಗಳಲ್ಲಿ ದ್ವಾರ ಮಾಡುವುದೂ ಇಲಿ ಬೋನುಗಳನ್ನು ಹುಡುಕಿಡುವುದೂ ಆತನ ದಿನಚರ್ಯೆಯ ತಪ್ಪಿಸಲಾಗದ ಜವಾಬ್ದಾರಿಗಳಾಗಿದ್ದುವು. ಅಳಿಲುಗಳ ಭಾಷೆ ತನಗೆ ಗೊತ್ತೆಂದೂ ಅಣ್ಣ ನನ್ನೊಂದಿಗೆ ಹೇಳಿದ್ದ: 'ಬಡಾಯಿ' -ಮಾರಾತ್ತಾಟ್ಟಿನ ತಮ್ಮನೂ ಪ್ರತಿಕ್ರಿಯಿಸಿದ್ದ. ಅವನನ್ನು ನಂಬುವಂತೆ ಮಾಡಲು ಆ ಊರಿನಲ್ಲಿ ಯಾರಿಗೂ ಸಾಮರ್ಥ್ಯವಿರಲಿಲ್ಲ. ರವೀಂದ್ರನಾಥ ಠಾಗೋರ್ ನಿಧನರಾದರೆಂದು ಹೇಳಿದಾಗಲೂ ಆ ತಮ್ಮ ಅದನ್ನು ಒಪ್ಪಿಕೊಳ್ಳಲು ಸಿದ್ಧನಿರಲಿಲ್ಲ. ಅವರ ಶವಯಾತ್ರೆಯನ್ನು ನಾನು ಮನೆಯ ಕಿಟಕಿಯ ಮೂಲಕ ನೋಡಿದ್ದೆ. ಹಾಗಿದ್ದೂ ತಮ್ಮ ಹೇಳಿದ 'ಹೋಗಾ ಅಮ್ಮಿ ಇದೆಲ್ಲ ನಿನ್ನ ರೈಲು.'

ಅಂದು ಊರಿನಲ್ಲಿ ಎರಡು ವರ್ಗದವರಿದ್ದರು. ಸತ್ಯವನ್ನು ಅಸತ್ಯವೆಂದು ತಿಳಿಯುವವರೂ ಅಸತ್ಯವನ್ನು ಸತ್ಯವೆಂದೇ ಪರಿಗಣಿಸುವವರೂ. ಎರಡು ವರ್ಗದವರೂ ವ್ಯಾಮೋಹದ ಗೂಡಿನಲ್ಲಿ ಸಿಕ್ಕಿಬಿದ್ದವರೆ. ಹೆರಿಗೆಯ ನಂತರದ ಒಂದು ವಾರ ಕಾಲ ನರ್ಸ್ ನಾಲಪ್ಪಾಟ್ಟಿನಲ್ಲೆ ಇದ್ದರು. ಅವರಿಗೆ ಸೀರೆ, ಚಪ್ಪಲಿ, ಚರ್ಮದ ಚೀಲ ಮೊದಲಾದ ವಸ್ತುಗಳನ್ನು ಅಮ್ಮನೂ ಅಜ್ಜಿಯೂ ಉಡುಗೊರೆಯಾಗಿ ನೀಡಿದರು. ಅಮ್ಮನಿಗೆ ಸ್ನಾನ ಮಾಡಿಸುವುದರ ಬಗ್ಗೆ ಅವರಿಗೂ ಉಣ್ಣಿಮಾಯಮ್ಮಗೂ ವಿಶೇಷ ಆಸಕ್ತಿಯಿತ್ತು. ಆದರೆ, ಅಮ್ಮ ಅವರನ್ನು ಬಚ್ಚಲು ಮನೆಯೊಳಕ್ಕೆ ಪ್ರವೇಶಿಸಗೊಡಲಿಲ್ಲ.

'ನಾನು ಸ್ವಲ್ಪ ಹೊತ್ತು ಸಮಾ ಎಣ್ಣೆ ತಿಕ್ಕಿ ಕೊಡ್ತೇನೆ' ಉಣ್ಣಿಮಾಯಮ್ಮ ಹೇಳಿದಳು.

'ನಾನೇ ಸ್ನಾನ ಮಾಡ್ತೇನೆ' ಅಮ್ಮ ಹೇಳಿದರು.

ಅಮ್ಮ ಸ್ನಾನ ಮಾಡುವಾಗ ಬಚ್ಚಲು ಮನೆಯ ಹೊರಗೆ ಪೂರ್ವದಿಕ್ಕಿನ ಕೋಣೆಯಲ್ಲಿ ಗೋಡೆಗೆ ಆತುಕೊಂಡು ನರ್ಸೂ ಉಣ್ಣಿಮಾಯಮ್ಮನೂ ಕುಳಿತುಕೊಳ್ಳುತ್ತಿದ್ದರು. ಅವರ ಮಾತು ಕೇಳುವುದಕ್ಕೆ ನಾನೂ.

'ಇದಲ್ಲ ಇಂಗ್ಲೀಷು ಹೆರಿಗೆ' ಉಣ್ಣಿಮಾಯಮ್ಮ ಹೇಳಿದಳು. ಸರಿಯಾದ ಆರೈಕೆ ಕ್ರಮದ್ದಾದ್ರೆ ನೋಡೋದಿಕ್ಕೆ ನಾಲ್ಕು ಕಣ್ಣು ಬೇಕಾದೀತು. ಮೊದಾಲು ಸೊಲೂಪ ದಾನ್ವಂತರ ಪಚ್ಚೇಕು. ಮತ್ತೆ ಹಸಿ ಅರಷ್ಣ ತೇದು ಹಚ್ಚಿ ಅರ್ಧ ಗಂಟೆ ತಿಕ್ಬೇಕು. ಆಮೇಲೆ ಪಚ್ಚೆಸ್ರು ಉಜ್ಜಿ ಅಂಟು ತಗೀಬೇಕು. ಕೇಪುಳಗಿಡದ ಎಲೆ ಹಾಕಿ ಕುದ್ಸಿದ ನೀರೆರೀಬೇಕು. ಒಳ್ಳೆ ಕೆಂಪ್ಕೆಂಪಾಗಿರ್ತದೆ. ಮತ್ತೆ ಬೆಳ್ಳುಳ್ಳಿ ಲೇಹ್ಯ ತಿನ್ಬೇಕು. ಮೆಂತೆ ಹುಡಿಯೂ. ನಂಗಿದೆಲ್ಲ ಮಾಡ್ಲಿಕ್ಕೆ ಗೊತ್ತುಂಟು. ಆದ್ರೆ, ಯಾರೂ ಕೇಳ್ಳಿಕ್ಕಿಲ್ಲಲ್ವಾ. ಈಗ ಆರೈಕೆ ಚೆನ್ನಾಗಿ ಮಾಡದಿದ್ರೆ ಮೈ ಹಾಳಾದೀತು. ಯಾರತ್ರೇಳೋದು? ಕೇಳ್ಬೇಡ್ವ?'

'ಇಂಗ್ಲೀಷ್ ಮದ್ದು ತೆಕ್ಕೊಳ್ತಾರಲ್ಲ. ಟೋನಿಕ್ಕು. ಈಗ್ಯಾರು ಲೇಹ್ಯ, ಮೆಂತೆಹುಡಿ ತಿನ್ತಾರೆ? ಬೇಕಾದ ಮದ್ದೆಲ್ಲ ಕಲ್ಕತ್ತೇಂದ ವಿ.ಎಂ. ನಾಯರ್ ಕಳಿಸ್ತಾರಲ್ಲ.'

'ಕಲ್ಕತ್ತೇಲೆಂತ ಮದ್ದುಂಟು? ಇಲ್ಲಿ ಸಿಕ್ಕದ ಮದ್ದುಂಟಾ? ಕಳೆದ ವರ್ಷ ನಾನೊಂದು ಹೆರಿಗೆ ಮಾಡ್ಸೋದಕ್ಕೆ ಹೋದಾಗ ಅಲ್ಲಿ ಮೂರು ಮದ್ದು ತೆಕ್ಕೊಂಡಿದ್ರು. ಹಸಿವೆಯಾಗ್ಲಿಕ್ಕೆ ಒಂದು ಲೇಹ್ಯ, ಜೀರ್ಣಾಗ್ಲಿಕ್ಕೆ ಒಂದು ಲೇಹ್ಯ, ಒಳ್ಳೇದಾಗ್ಲಿಕ್ಕೆ ಇನ್ನೊಂದು ಲೇಹ್ಯ. ಆಮೇಲೆಂತ? ಬಾಣಂತಿತನ ಮುಗ್ಸಿ ಏಳ್ಬೇಕಿದ್ರೆ ಎಂತ ಬಣ್ಣ? ಹೊಸ ಚಿನ್ನದಾಗೆ. ಇನ್ನು ತೋರವೊ? ಏನೂ ಹೇಳೋದು ಬೇಡ. ದೇವಸ್ಥಾನಕ್ಕೋಗ್ವಾಗ ದೃಷ್ಟಿತಾಗೀತೂಂತ ನಾ ಎದ್ರಿದೆ ಆಯ್ತಾ? ಅಷ್ಟೂ ಚಂದ. ದೇವತೆಗಳಾಗೆ....'

ನರ್ಸ್ ತನ್ನ ಅನಾಕರ್ಷಕ ಕೈಗಳನ್ನು ಸೂಕ್ಷ್ಮವಾಗಿ ಪರಿಶೋಧಿಸಿದಳು.

'ಒಣಗಿ ಹೋಗಿದೆ.... ಇಲ್ಲಿ ಗಾಣದ ಒಳ್ಳೆ ಎಳ್ಳೆಣ್ಣೆ ಇದ್ದೀತಾ? ನಂಗೆ ಸರೀ ಹಚ್ಚಿ ಸ್ನಾನ ಮಾಡ್ಬೇಕು...'

'ನನ್ನೊಟ್ಟಿಗೆ ಕೊಳದ ಮನೆಗೆ ಬನ್ನಿ ನೈಸೇ. ನಾ ಬೆನ್ನು ಉಜ್ಜಿ ಕೊಡ್ತೇನೆ.'

'ನೀವು ತುಂಬಾ ಹೆರಿಗೆ ನೋಡಿದ್ದಿರ್ಬೋದು, ಅಲ್ವೆ ಉಣ್ಣಿಮಾಯಮ್ಮ?'

'ನಾ ಕಾಣದ ಹೆರಿಗೆ ಈ ಊರಲ್ಲೇ ನಡೀಲಿಲ್ಲಾಂತ...'

'ಅದೇ ನಿಜ. ಕೆಳ ಜಾತಿಯವರ ಗುಡಿಸ್ಲಿಗೆ ಹತ್ಲಿಕ್ಕಿಲ್ಲ. ನಾಯನ್ಮಾರರ ಮನೆಗಾದ್ರೆ ಹೋಗ್ತೀರಿ.'

'ನಂಬೂರಿಗಳದ್ದೂ. ನನ್ನ ಕಾಣದಿದ್ರೆ ದಾಕುದಾರ್ರು ಕೇಳ್ತಾರು - ಅಲ್ಲಾ, ಉಣ್ಣಿಮಾಯಮ್ಮಲ್ಲೀಂತ. ನಮಗೆ ಸಹಾಯ ಮಾಡೋ ಜನಾದೂಂತ ಆ ಜನ ಹೇಳೋದು. ತಮಾಶೆ ಜನಾಯ್ತಾ. ಆದ್ರೆ, ಒಮ್ಮೊಮ್ಮೆ ಹೇಳೋದುಂಟು. ತಾಯಾ ಬೇಕಾದ್ದು. ಮಗುವಾ? ಎರಡ್ರಲ್ಲೊಂದು ನಿಶ್ಚಯ್ಸಿಕೊಳ್ಳಿ. ಒಂದನ್ನು ಬದುಕಿಸ್ಲಿಕ್ಕೆ ಮಾತ್ರ ನನ್ನಿಂದ ಸಾಧ್ಯ. ಆಗ ಶುರುವಾಗ್ತದೆ ಎದೆ ಹೊಡ್ಕೋಳ್ಳೋದು, ಬೊಬ್ಬಿರಿಯೋದು. ದಾಕುದಾರ್ರ ಕಾಲಿಡೀಲಿಕ್ಕೆ ಸುರುವಾಗ್ತದೆ. ಇಬ್ರನ್ನೂ ಬದ್ಕಿಸ್ಬೇಕೂಂತ ಒಂದೇ ಹಟ. ಕೆಲೋಮ್ಮೆ ಇಬ್ರನ್ನೂ ಬದ್ಕಿಸ್ತಾರೆ. ಕೆಲೋಮ್ಮೆ ಮಗೂನ್ನು ಮಾತ್ರ ಕೊಯ್ದು ತೆಗೀತಾರೆ. ಅದು ನೋಡ್ಲಿಕ್ಕಾಗೋದಿಲ್ಲಾಯ್ತಾ. ಗಂಡು ಮಗ್ವಾದ್ರೆ ಅದಕ್ಕೆ ಮಿಣ್ಣೀರ್ತದೆ. ಎಲ್ಲ ಕತ್ತೀಂದ ಕೆತ್ತಿ ಒಟ್ಟು ಸೇರಿಯೊಂದು ರಕ್ತಮಯ. ನಂಗೆ ಕೆಲವೊಮ್ಮೆ ಅದನ್ನೆಲ್ಲ ನೋಡೋವಾಗ ತಲೆ ಸುತ್ತು ಬರ್ತದೆ. ಆದ್ರೆ, ಸುಮ್ನೆ ಕೂತ್ಕೊಳ್ಳಿಕಾಗೋದಿಲ್ಲಲ್ಲ. ಎಲ್ಲಾ ಗುರುವಾಯೂರಪ್ಪನ ಲೀಲೆ, ಅಲ್ವೆ ನೈಸೇ?'

ನರ್ಸ್ ತಲೆ ಆಡಿಸಿದಳು.

'ಎಂತ ಈ ರಕ್ತಮಯ? ರಕ್ತ ಎಲ್ಲಿಂದ ಬರ್ತದೆ?' ನಾನು ಉಣ್ಣಿಮಾಯಮ್ಮರೊಂದಿಗೆ ಗಲಿಬಿಲಿಗೊಂಡು ಕೇಳಿದೆ. ಭಯದಿಂದ ಕಾಲುಗಳು ನಡುಗಿದುವು. 'ಅಯ್ಯೋ ಈ ಮಗು ಇಲ್ಲಿ ಕೂತು ಇದೆಲ್ಲ ಕೇಳ್ತಿತ್ತಾ? ಕೊಚ್ಚುವಮ್ಮ ಬೈಲಿಕ್ಕುಂಟಲ್ಲ ನನ್ನ ಗುರುವಾಯೂರಪ್ಪಾ. ಹೋಗಿ ಆಟಾಡಿ. ದೊಡ್ಡೋರು ಮಾತಾಡೋ ಜಾಗದಲ್ಲಿ ಹೀಗೆ ಅಡಗಿ ಕೂತ್ಕೋಬಾರ್ದು ಮಗೂ. ಹೊರ್ಗೆ ಅಂಗಣಕ್ಕೆ ಹೋಗಿ ಏನಾದ್ರೂ ಆಡಬಾರ್ದೆ? ನಿಮ್ಮಣ್ಣನ್ನು ನೋಡಿ ಕಲೀಬೇಕು. ಎಷ್ಟೊಳ್ಳೆ ಹುಡುಗ್ರು. ಯಾವಾಗ ನೋಡಿದ್ರೂ ಓತ್ತೀರ್ತಾರೆ. ಇಲ್ದಿದ್ರೆ ಬರಿಯೋದು.'

'ಈ ಮಗೂನ ಸ್ವಭಾವ ಯಾಕಪ್ಪಾ ಹೀಗಾಯ್ತು. ಹೆಂಗ್ಸರು ಹೆರಿಗೆ ಬಗ್ಗೆ ಮಾತಾಡಿದ್ರೆ ಅದನ್ನು ಕೇಳಿ ಕೂತ್ಕೊಳ್ಳೋದು. ಹೋಗಿ ಆಡಿ ಮಗೂ, ನಿಮ್ಮತ್ರ ಮಾತಾಡಿ ಕೂರ್ಲಿಕ್ಕೆ ನಂಗೆ ಪುರುಸೊತ್ತಿಲ್ಲ. ನಂಗೆ ಬೇರೆ ಕೆಲ್ಸುಂಟು.'

ನಾವು ಕಲ್ಕತ್ತಾದಿಂದ ಬಂದು ತಲುಪಿ ಒಂದು ವಾರ ಆಗಿರಬೇಕು, ಕೆಲಸದವಳ ಹೆಸರಿನಲ್ಲಿ ಟಪ್ಪಾಲಿನ ಮೂಲಕ ಒಂದು ಪಾರ್ಸೆಲ್ ಬಂತು. ಎಷ್ಟೋ ವರ್ಷಗಳಿಗೆ ಮೊದಲು ನಡೆದ ಕತೆಯಿದು. ಅಂದೆಲ್ಲ ನಮ್ಮ ಗ್ರಾಮದಲ್ಲಿ ಅಂಚೆಪೇದೆ ಇದ್ದುದಾಗಿ ನನಗೆ ನೆನಪಿಲ್ಲ. ಪೋಸ್ಟ್ ಮಾಸ್ಟರ್‌ರ ಸೇವಕನಾಗಿದ್ದ ರಪ್ಪಾಯಿ ಎಂಬ ಹುಡುಗ ಮುಸ್ಸಂಜೆಯ ವೇಳೆಗೆ ನಾಲಪ್ಪಾಟ್ಟಿಗೆ ಕಾಗದಗಳನ್ನೂ ವಾರಪತ್ರಿಕೆಗಳನ್ನೂ ತಂದುಕೊಡುತ್ತಿದ್ದ. ಸೋಮವಾರ ಸಾಯಂಕಾಲ ತೆಂಕಮೂಲೆಯ ಪೂರ್ವದ ಕಂಬದಲ್ಲಿ ಶಾಶ್ವತವಾಗಿ ನೆಲೆಗೊಂಡಿದ್ದ ತೂಗುದೀಪದ ಬೆಳಕಿನಲ್ಲಿ ನನ್ನ ಅವಿವಾಹಿತಳಾದ ಚಿಕ್ಕಮ್ಮ ಮಾತೃಭೂಮಿ ವಾರಪತ್ರಿಕೆಯನ್ನು ಗಟ್ಟಿಯಾಗಿ

ಓದುತ್ತಿದ್ದರು. ನಾನೂ ಅಣ್ಣನೂ ಅಜ್ಜಿಯೂ ಮುತ್ತಜ್ಜಿಯೂ ಅವರ ಕೇಳುಗರಾಗಿದ್ದೆವು. ಪೊಟ್ಟಕ್ಕಾಡರದ್ದೋ ಉರೂಬರದ್ದೊ ಸಣ್ಣ ಕತೆಗಳನ್ನು ಓದುವಾಗ ನಾಲಪ್ಪಾಟ್ಟಿನ ತೆಂಕಮೂಲೆಯಲ್ಲಿ ಎಲ್ಲರೂ ಶ್ವಾಸ ಹಿಡಿದು ಕತೆಯ ಅಂತ್ಯದ ಬಗೆಗಿನ ಕುತೂಹಲದೊಂದಿಗೆ ಸ್ತಬ್ಧರಾಗಿ ಕುಳಿತಿರುತ್ತಿದ್ದರು. ಚೇಳುಗಳ ಪ್ರೇಮಕತೆಯನ್ನು ಯಾರೋ ಒಬ್ಬರು ಒಮ್ಮೆ ಬರೆದಿದ್ದರು. ಶ್ರೀಮಾಧವನ್‌ರ ಚಿತ್ರಗಳು ಅದಕ್ಕೆ ಒತ್ತುಕೊಟ್ಟವು. ಅದು ನನಗೂ ಅಣ್ಣನಿಗೂ ತುಂಬ ಹಿಡಿಸಿತು. ಮುತ್ತಜ್ಜಿಯವರಿಗೆ ಅದಷ್ಟು ಇಷ್ಟವಾಗಲಿಲ್ಲ. ಪ್ರೇಮಕತೆಗಳು ನಮಗೆ ಏನೂ ಇಷ್ಟವಾಗುವುದಿಲ್ಲ ಎಂಬ ಚರ್ಚೆಯನ್ನು ಅವರು ಸಹಜವಾಗಿ ಪ್ರಕಟಿಸುತ್ತಿದ್ದರು. 'ಪರಿಶುದ್ಧ ಪ್ರೇಮ! ನಂಗದು ಕೇಳಿ ಗಲೀಜಾಯ್ತು!' ಅಜ್ಜಿ ಹಲವೊಮ್ಮೆ ಆಸಕ್ತಿರಹಿತರಾಗಿ ಹೇಳುತ್ತಿದ್ದರು. ಒಳ್ಳೆ ಕುಟುಂಬದ ಹೆಂಗಸರಿಗೆ ಪ್ರೇಮದ ಬಗ್ಗೆ ಜುಗುಪ್ಸೆಯಿರಬೇಕು ಎಂಬುದಾಗಿ ನಾಲಪ್ಪಾಟ್ಟಿನ ಹೆಂಗಸರು ನಂಬಿಕೊಂಡಿದ್ದರು.

ಒಂದು ಸಾಯಂಕಾಲ ರಪ್ಪಾಯಿ ಬಂದಾಗ ಆತನ ಕೈಯಲ್ಲಿ ಒಂದು ಪಾರ್ಸೆಲಿತ್ತು. ಕೋರಬಟ್ಟೆಯಲ್ಲಿ ಮುಚ್ಚಿ ಮೂರು ಭಾಗಕ್ಕೂ ಅರಗಿನ ಸೀಲು ಹಾಕಲಾಗಿದ್ದ ಒಂದು ಪೊಟ್ಟಣ. ಮೇಲ್ಗಡೆಯಿದ್ದ ವಿಳಾಸ ನಮ್ಮ ಕೆಲಸದಾಕೆಯದ್ದಾಗಿತ್ತು. ಅವಳ ಹೆಸರು ಓದುತ್ತಲೆ ಮಾವ ಹೇಳಿದರು, 'ಇಲ್ಲಿ ಆ ಹೆಸರಿನವರ್ಯಾರೂ ಇಲ್ಲ.'

ಅಜ್ಜಿ ತೆಂಕಮೂಲೆಯಿಂದ ತನ್ನ ತಲೆ ಹೊರಹಾಕುತ್ತ. 'ಇದ್ದಾಳೆ. ಇಲ್ಲಿನ ಕೆಲಸದೋಳು.'

'ಪಾರ್ಸೆಲ್ ಬಂದಿದೆ.... ಪಾರ್ಸೆಲ್, ಕಲ್ಕತ್ತೆಂದ. ದಸ್ಕತ್ತು ಹಾಕಿ ತೆಕ್ಕೋಬೇಕು. ಇಲ್ಲಿದ್ರೆ ಹೆಬ್ಬೆರಳಿಗೆ ಶಾಯಿ ಹಚ್ಚಿ ಹೆಬ್ಬೆಟ್ಟಾಕಿದ್ರೂ ಸಾಕು' ರಪ್ಪಾಯಿ ಕೂಗಿ ಹೇಳಿದ.

ಕೆಲಸದಾಕೆ ಬಡಗುಮೂಲೆಯಲ್ಲಿ ಕುಳಿತು ಹೊಟ್ಟೆದ ಬಳೆಗಳನ್ನು ಬೆಂಕಿಗೆ ಹಿಡಿದು ಬಾಗಿಸುತ್ತಿದ್ದಳು. ಅವಳು ಆ ಗದ್ದಲ ಕೇಳಿ ದುಃಖ ತಡೆಯದೆ ಅಳತೊಡಗಿದಳು.

'ಅವಳು ಮುಖದ್ವಾರಕ್ಕೆ ಬರ್ಲಿಕ್ಕಿಲ್ಲ. ನೀ ಹೋಗಿ ದಸ್ಕತ್ತು ತಗೊಂಡ್ರೆ ಸಾಕು ಕುಟ್ಟಾ' ಮಾವನ ತಾಯಿ ಹೇಳಿದರು.

ಅಜ್ಜಿಯ ಮುಖ ಕಂಪಿಡುವುದನ್ನು ನಾನು ಗಮನಿಸಿದೆ. ಅವರು ಪಾರ್ಸೆಲಿನ ಹಗ್ಗವನ್ನು ಕತ್ತಿಯಿಂದ ಕೊಯ್ದರು. ಒಗೆದ ಜರಿಯಂಚಿನ ಎರಡು ಮುಂಡುಗಳು ನೆಲದಲ್ಲಿ ಬಿದ್ದುವು. ಕಲ್ಕತ್ತೆಯ ಅಡುಗೆಯವನ ಒಂದು ಪತ್ರವೂ.

'ನಿಂಗ್ಯಾಕೆ ಆ ಜನ ಮುಂಡು ಕಳಿಸೋದು?' ಅಜ್ಜಿ ಕೇಳಿದರು. ಕೆಲಸದವಳು ಬಡಗು ಮೂಲೆಯ ಬಾಗಿಲು ದಾಟಿದ ಕೂಡಲೆ ಕಾಣಿಸುವ ಕತ್ತಲ ಮೂಲೆಯಲ್ಲಿ ಹಣ್ಣಾಗಲಿಕ್ಕಿಟ್ಟ ಹಲಸಿನ ಕಾಯಿಗಳ ನಡುವೆ ಅಡಗಿದಳು.

'ಆ ಜನ ನಿಂಗ್ಯಾಕೆ ಮುಂಡು ಕಳಿಸೋದು?' ಅಜ್ಜಿ ಮತ್ತೊಮ್ಮೆ ಕೇಳಿದರು.

'ನಂಗೊತ್ತಿಲ್ಲ' ಕೆಲಸದವಳು ಹೇಳಿದಳು.

'ಇದನ್ನು ನಾಳೆಯೆ ವಾಪಾಸು ಕಳಿಸ್ತೇನೆ' ಅಜ್ಜಿ ಹೇಳಿದರು. ಅಡುಗೆಯವನ ಕಾಗದವನ್ನು ಪೂರ್ತಿಯಾಗಿ ಓದದೇನೇ ಅಜ್ಜಿ ಅದನ್ನು ಸುರುಟಿ ಒಲೆಯಲ್ಲಿ ಹಾಕಿದರು.

'ನಾ ಎಂತ ತಪ್ಪೂ ಮಾಡ್ಲಿಲ್ಲ. ನನ್ನ ಪುಣ್ಯೋಸ್ಥಾನದ ಭಗೋತಿಯಾಣೆ ಸತ್ಯ.

ನಾಯೆಂತ ತಪ್ಪೂ ಮಾಡ್ಲಿಲ್ಲ' ಕೆಲಸದವಳು ಹೇಳಿದಳು.

ಹುಡುಗಿಯನ್ನು ಅವಳ ಮನೆಗೆ ಕಳಿಸುವುದೇ ಒಳ್ಳೆಯದೆಂದು ಮುತ್ತಜ್ಜಿಯವರು ಹೇಳಿದರು. ಅವಳು ಎದೆ ಬಡಿದುಕೊಳ್ಳುವುದೂ ಅಳುವುದೂ ಮಾಡಿದ್ದರ ನಿಮಿತ್ತವಾಗಿ ಆ ತೀರ್ಮಾನ ಕಾರ್ಯಗತವಾಗಲಿಲ್ಲ.

ಕೆಲಸದವಳು ಅಂದಿನಿಂದ ಪಶ್ಚಾತ್ತಾಪ ಪಡುವ ಮಗ್ದಲನ ಮರಿಯಳಂತೆ ವರ್ತಿಸತೊಡಗಿದಳು. ದೇವಾಲಯದ ಕೊಳಕ್ಕಲ್ಲ ಹುಡುಗಿಯರ ಜೊತೆ ಸ್ನಾನಕ್ಕೆ ಹೋಗುವುದು ನಿಂತುಹೋಯಿತು. ಸದಾಕಾಲವೂ ದುಃಖಭಾವದೊಂದಿಗೆ ನನ್ನ ತಂಗಿಯನ್ನು ಮಡಿಲಲ್ಲಿರಿಸಿಕೊಂಡು ಶೂನ್ಯ ನೋಡುತ್ತ ಕುಳಿತುಕೊಳ್ಳ ತೊಡಗಿದಳು.

'ಇನ್ನು ನಾ ಕಲ್ಕತ್ತಕ್ಕೆ ಹೋಗ್ಲಿಕ್ಕಿಲ್ಲ ಮಗೂ' ಅವಳು ನನ್ನೊಂದಿಗೆ ಹೇಳಿದಳು.

'ಅದ್ಯಾಕೆ ?' ಕಾರಣೇನು ?'

'ಕಾರಣೂಂಟು. ಆದ್ರೆ ನಿನ್ನತ್ರೇಳ್ಳಿಕ್ಕಾಗ್ಗು ಮಗೂ.'

ಒಂದು ದಿವಸ ಅವಳು ಅಮ್ಮನ ಹತ್ತಿರ ತನಗೆ ಕೀಟಲೆ ಕೊಡುತ್ತಿದ್ದ ಒಬ್ಬ ಜಮೀನ್ದಾರನ ಕಥೆ ಹೇಳಿದಳು. ತಾನು ಹೇಳಿದ್ದು ಕೇಳದೇ ಹೋದರೆ ಅವಳ ಮನೆಯನ್ನು ಹೊತ್ತಿಸಿ ಬಿಡುವುದಾಗಿ ಆತ ಬೆದರಿಕೆಯೊಡ್ಡಿದ್ದನಂತೆ.

'ಆ ಜನಕ್ಕೆಂತ ಬೇಕಂತೆ ?' ನಾನು ಕೇಳಿದೆ.

'ನಂಗದು ಹೇಳ್ಳಿಕ್ಕಾಗೋದಿಲ್ಲ. ಮಕ್ಕತ್ರ ನಾ ಅದೆಲ್ಲ ಹೇಳ್ಳಿಕ್ಕಿಲ್ಲ.'

ಅಜ್ಜಿ ಹತ್ತಿರ ಆ ಬಗ್ಗೆ ನಾನು ಮಾತನಾಡಿದಾಗ ಅವರು ಸಿಟ್ಟುಗೊಂಡರು.

'ದರಿದ್ರದ್ದು. ಅವಳನ್ನು ಯಾವತ್ತೋ ಕಳಿಸ್ಬೇಕಾಗಿತ್ತು. ಮಕ್ಳು ದೊಡ್ಡೋರಾಗ್ತಿಯಾರೆಂತ ಗೊತ್ತಾಗ್ಬೇಡ್ವೆ ?'

ಒಂದು ದಿವಸ ಮಧ್ಯಾಹ್ನ ಕಳೆಯಬೇಕಿದ್ದರೆ ಕೆಲಸದವಳನ್ನು ಕೇಳಿಕೊಂಡು ಅವಳ ಅಮ್ಮ ನಾಲಪ್ಪಾಟ್ಟಿಗೆ ಬಂದಳು. ಪೊನ್ನಾನಿಯಿಂದ ಸಂಬಂಧಿಕರು ಬಂದಿದ್ದಾರೆಂದೂ ಆದ್ದರಿಂದ ಅವಳನ್ನು ತತ್ಕಾಲಕ್ಕೆ ಮನೆಗೆ ಕರೆದುಕೊಂಡು ಹೋಗುವೆನೆಂದೂ ಅವಳು ಹೇಳಿದಳು: 'ನಾಳೆ ವಾಪಾಸು ಕಳಿಸ್ತೇನೆ.'

ಅಂದು ಮುಸ್ಸಂಜೆಗೆ ನನ್ನ ಅಜ್ಜಿ ಅಡುಗೆಯವನನ್ನು ಅವಳ ಮನೆಗೆ ಹೇಳಿ ಕಳುಹಿಸಿದರು.

'ಮಗು ಅಳ್ತದೇಂತ ಹೇಳು. ಬೇಗ ಬರ್ಲಿ.'

ಅಡುಗೆಯವ ಹಿಂದಿರುಗಿ ಬರಬೇಕಿದ್ದರೆ ನಮ್ಮ ಊಟ ಮುಗಿದಿತ್ತು. ಆತ ಪೂರ್ವದ ಕೋಣೆಯಲ್ಲಿ ಲಾಟಾನು ಇರಿಸಿ ಅಲ್ಲಿಯೆ ಕುಳಿತುಬಿಟ್ಟ.

'ನಂಗಿನ್ನೀ ಕೆಲ್ಸ ಆಗ್ಲಿಕ್ಕಿಲ್ಲ ದೊಡ್ಡಮ್ಮೋರೇ. ಇಂಥಾ ಹೆಂಗಸ್ರ ಮನೆಗೆಲ್ಲ ಇನ್ನು ನನ್ನ ಕಳಿಸ್ಬಾರ್ದು. ಮನಸ್ಸೇ ಹಾಳಾಯ್ತು.'

'ಏನಾಯ್ತೀಗ ?'

'ನಾನಲ್ಲಿಗೆ ಹೋದಾಗ ಒಳಗಡೇಂದ ಒಬ್ರು ಕೆಮ್ತಿದ್ರು. ನಾ ಆಗ ಸ್ವಲ್ಪ ತಲೆ ಎತ್ತಿ ನೋಡಿದೆ..... ಯಾರಲ್ಲಿದ್ರೂಂತ ನೀವು ಗ್ರಯಿಸ್ತೀರಿ ದೊಡ್ಡಮ್ಮೋರ ?'

'ಸಾಕು ಸಾಕು ಇನ್ನೇನೂ ಹೇಳ್ಬೇಡ.'

'ಕಿಟಕೀ ಒಳಗಡೇಂದ ನೋಡಬೇಕಿದ್ರೆ ಅವ್ರು ನನ್ನೂ ನೋಡಿದ್ರು. ನಾ ಕೂಡ್ಲೆ ಈಚೆ ಬಂದೆ. ಇನ್ನವ್ರನ್ನಿಲ್ಲಿಗೆ ಹತ್ತಿಸ್ಬಾರ್ದಾಯ್ತು. ಇಲ್ಲಿ ಮಕ್ಕುಮರಿಗಳಿದ್ದಾರಲ್ಲ ದೊಡ್ಡಮ್ಮೋರೆ. ಅವ್ರು ಮಕ್ಳನ್ನೂ ಹಾಳು ಮಾಡ್ತಾಳು.'

ಕೆಲಸದವ ಅಂದು ರಾತ್ರಿ ಊಟ ಮಾಡಲಿಲ್ಲ.

ನನ್ನ ತಮ್ಮ ಸುಂದರನಿಗೆ ಪಾಠ ಹೇಳಿಕೊಡಲೆಂದು ಮಂಗಳೂರಿನವರಾದ ಓರ್ವ ಮುದುಕ ನಮ್ಮ ಕಲ್ಕತ್ತಾದ ಮನೆಗೆ ಬರುತ್ತಿದ್ದರು. ಅವರನ್ನು ಅಡಿಗೆಯವ ಮತ್ತಿತರರು 'ಸಾಯೇಬ್ರು' ಎಂದು ಕರೆಯುತ್ತಿದ್ದರು. ನಾವು ಅವರನ್ನು 'ಲಂಬೋದರ ಮಾಷ್ಟ್ರು' ಎಂದೂ ಕರೆದೆವು. ಅವರ ಹೊಟ್ಟೆ ಒಂದು ಭೂಲೋಕದ ಹಾಗೆ ಉಬ್ಬಿಕೊಂಡಿದೆಯೆಂದು ನಾವು ಭಾವಿಸಿದೆವು. ಅದಕ್ಕೆದುರಾಗಿ ಕುಳಿತುಕೊಂಡಾಗ ಅದರೊಳಗಿನಿಂದ ಗುಡುಗಿನ ಶಬ್ದವನ್ನೂ ಸಮುದ್ರದ ಭೋರ್ಗರೆತವನ್ನೂ ಗಿಳಿಗಳ ಕೂಗನ್ನೂ ನಾವು ಕೇಳಿ ನಕ್ಕೆವು. ಆದರೆ ಸುಂದರನ್ ಒಮ್ಮೆಯೂ ನಗುವ ಧೈರ್ಯ ತೋರಿಸಲಿಲ್ಲ. ಅವನು ಬಿಳಿಚಿದ ಮುಖದಿಂದ ಕೂಡಿಕೊಂಡು ಲಂಬೋದರ ಮಾಷ್ಟ್ರು ಹೇಳುವುದನ್ನೆಲ್ಲ ಶ್ರದ್ಧೆಯಿಂದ ಕೇಳಿದ. ಇಂಗ್ಲೀಷರನ್ನು ಇಂಡಿಯಾದಿಂದ ಹೊರಹಾಕಿದರೆ ಹಿಂದೂಗಳೆಲ್ಲರೂ ಉಪವಾಸಬಿದ್ದು ಸಾಯಬೇಕಾಗಿ ಬರಬಹುದೆಂದೂ ವಾಸ್ತವವಾಗಿ ಕಾಂಗ್ರೆಸ್ ಹಿಂದೂಗಳ ಕುತಂತ್ರದ ಫಲವಾಗಿ ರೂಪುಗೊಂಡ ಸಂಸ್ಥೆಯೆಂದೂ ಮಾಷ್ಟ್ರು ಹೇಳಿದರು. 'ನಾನು ಬ್ರಿಟಿಷ್ ರಾಜನಾಗಿರುತ್ತಿದ್ದರೆ ಇವರನ್ನೆಲ್ಲ ಗುಂಡಿಕ್ಕಿ ಕೊಂದು ಬಿಡುತ್ತಿದ್ದೆ.' ರಾಜ್ಯದ್ರೋಹಿಗಳನ್ನು ಕೊಲ್ಲದೆ ಮತ್ತೇನು ಮಾಡ್ಬೇಕು ?'

ಸುಂದರನ್ ಭಯದ ಛಾಯೆಯ ಕಣ್ಣುಗಳಿಂದ ಕೂಡಿಕೊಂಡು ಅವರ ಅಂಗಚೇಷ್ಟೆಗಳನ್ನು ಗಮನಿಸುತ್ತ ಕುಳಿತ. ಆಗಲೆ ಅಡುಗೆಯವ ಒಂದು ಟ್ರೇಯಲ್ಲಿ ಬಿಸಿ ಚಹಾ, ಫಲಾಹಾರಗಳನ್ನು ತೆಗೆದುಕೊಂಡು ಬಂದ.

'ಮಾಸ್ಟರಿಗೆ ಈ ಫಲಾಹಾರಗಳೆಲ್ಲ ಇಷ್ಟ ಆಗ್ಲಿಕ್ಕಿಲ್ಲ. ವಡೆ, ಸುಕ್ರುಂಡೆ ಇದೆಲ್ಲ ಊರಿನ ಫಲಾಹಾರಗಳು. ಮಾಸ್ಟರಿಗೆ ಕೇಕು ಕೊಡ್ಬೇಕಿತ್ತು. ಇಲ್ಲಿ ಕೇಕು ಮಾಡೋದಿಲ್ಲ. ಅದಕ್ಕೆ ಕೋಳಿ ಮೊಟ್ಟೆ ಹಾಕ್ಬೇಕಲ್ಲಾ' ಅಡುಗೆಯವ ಹೇಳಿದ.

'ಊರ ಫಲಾಹಾರಗಳೇ ಸಾಕು. ಎಡೆಗೊಮ್ಮೆ ಊರ ಫಲಾಹಾರಗಳನ್ನೂ ತಿನ್ಬೇಕಲ್ಲ. ಕೇಕು ತಿಂದು ಸಾಕಾಯ್ತು! ನನ್ನ ಮನೆಯಲ್ಲಿ ಯಾವತ್ತೂ ಕೇಕಿರ್ತದೆ. ವಿವಿಧ ನಮೂನೆಯ ಕೇಕುಗಳು' ಮಾಷ್ಟ್ರು ಒಂದೊಂದೇ ತೆಗೆದು ತಿನ್ನುವುದರೆಡೆಗೆ ಅಡುಗೆಯವ ಅದೇ ತಟ್ಟೆಯಿಂದ ತಾನೂ ತೆಗೆದು ತಿನ್ನುತ್ತಿದ್ದ. ಅದನ್ನು ನೋಡಿ ನಾವು ನಗುತ್ತಿದ್ದೆವು. ಸುಂದರನ ಮುಖ ಇನ್ನಷ್ಟು ಬಿಳಿಚುತ್ತಿತ್ತು. -

'ಇವರ್ಯಾರ್ಕೆ ಯಾವಾಗ್ಲೂ ನಗೋದು ? ಇವರಿಗೆ ಹೇಗೆ ನಡ್ಕೋಬೇಕೂಂತ ಚೂರೂ ಗೊತ್ತಿಲ್ಲಾಂತ ತೋರ್ತದೆ' ಮಾಷ್ಟ್ರು ಗೊಣಗಿದರು.

ಅಡುಗೆಯವನ ಮುಖ ತಾವರೆಯ ಹಾಗೆ ಅರಳಿತು.

'ನಿಜ ಸಾಯೇಬ್ರೆ. ಇವ್ರು ಊರಲ್ಲಿ ಬೆಳ್ದೋರು. ವರ್ತನೆಯೆಲ್ಲ ಕಾಡುಮನ್ಷರ ಹಾಗೆ. ಪುನ್ನಯೂರ್‌ಕುಳಾಂತ ಕೇಳಿದ್ದೀರಾ ಸಾಯೇಬ್ರ ? ಒಂದು ಕುಗ್ರಾಮ. ಇವ್ರು ಅಲ್ಲಿ ಬೆಳ್ದೋರು. ನೀವು ಅವ್ರಿಗೆ ಸಂಸ್ಕಾರ ಕಲ್ಸಿಕೊಟ್ರೆ ಕಲ್ತಾರು.

ನೀವು ಇವ್ರ ಬಗ್ಗೆ ಕೂಡ ಗಮ್ನಿಸ್ಬೇಕು ಸಾಯೇಬ್ರೆ.'

'ನಾ ಬರೋದು ಅವ್ರಿಗೆ ಕಲಿಸ್ಲಿಕ್ಕಲ್ಲ. ಶ್ಯಾಂಸುಂದರನಿಗೆ ಕಲಿಸ್ಲಿಕ್ಕೆ. ನಲುವತ್ತು ರೂಪ್ಯಾಗೆ ಎಲ್ಲ ಕಲಿಸ್ತೇನೇಂತ ಒಪ್ಪಿದ್ದೇನೆ. ಶ್ಯಾಂಸುಂದರ ಒಳ್ಳೇ ಹುಡುಗ.'

ಅಡುಗೆಯವ ನಮ್ಮನ್ನು ಆಕ್ಷೇಪಿಸಿದ್ದನ್ನು ನಾನು ಅಮ್ಮನಿಗೆ ಹೇಳಿದೆ.

ಆದರೆ ಅವನನ್ನು ಬೈಯುವ ಧೈರ್ಯ ಅಮ್ಮನಿಗೂ ಇರಲಿಲ್ಲ. ಕ್ರಿಸ್‌ಮಸ್‌ಗೆ ಒಂದು ವಾರ ಮೊದಲೆ ಅನೇಕರು ಭಕ್ಷ್ಯಪದಾರ್ಥಗಳು ತುಂಬಿದ ಬುಟ್ಟಿಗಳನ್ನು ತಂದೆಯವರಿಗೆ ಉಡುಗೊರೆಯಾಗಿ ಕೊಡುತ್ತಿದ್ದರು. ಹಲವೊಮ್ಮೆ ಮದ್ಯದ ಶೀಷೆಗಳೂ ಆ ಉಡುಗೊರೆಯಲ್ಲಿ ಸೇರಿ ಬಿಡುತ್ತಿದ್ದುವು. ತಂದೆ ಆ ಶೀಷೆಗಳನ್ನು ಸುಂದರನ ಮಾಷ್ಟರಿಗೆ ಕೊಡುತ್ತಿದ್ದರು. ಅಡುಗೆಯವನಿಗೂ ಅದರಲ್ಲಿ ಆಸಕ್ತಿಯಿತ್ತು. ಆದ್ದರಿಂದ ಒಮ್ಮೆ ಒಂದು ವಿಸ್ಕಿ ಬಾಟ್ಲಿ ತೆರೆದು ಅದರಲ್ಲಿದ್ದ ವಿಸ್ಕಿಯನ್ನು ಬರಿದುಗೊಳಿಸಿ ಅದರಲ್ಲಿ ಕರಿಮೆಣಸಿನ ರಸವನ್ನು ತುಂಬಿಸಿ ಆತ ಬುಟ್ಟಿಯಲ್ಲೇ ಇರಿಸಿದ್ದ. ಲಂಬೋದರ ಮಾಷ್ಟ್ರು ತನ್ನ ಮನೆಗೆ ಹೋದ ಮೇಲಷ್ಟೆ ಆ ಮೋಸವನ್ನು ಗಮನಿಸಿದ್ದು. ಮಾರನೆಯ ದಿವಸ ಅವರು ಹೇಳಿದರು:

'ಪಾಪ ಮಿಸ್ಟರ್ ನಾಯರ್. ಅವರನ್ನು ಕೆಲವರು ಮೋಸ ಮಾಡುತ್ತಿದ್ದಾರೆಂಬುದು ಕೂಡ ಅವರಿಗೆ ಅರಿವಾಗುವುದಿಲ್ಲ. ವಿಸ್ಕೀಂತ ಕೆಲವರು ಬರಿಯ ಕರಿಮೆಣಸಿನ ರಸವನ್ನು ಬಾಟ್ಲಿಯಲ್ಲಿ ತುಂಬಿಸಿಕೊಡ್ತಾರೆ! ಸೀಲು ಒಡೆದದ್ದು ಕಂಡಾಗಲೇ ನನಗೆ ಸಂಶಯ ಬಂತು.'

ಅಡುಗೆಯವ ವಡೆ ಚಹಾವನ್ನು ಮೇಜಿನ ಮೇಲಿಟ್ಟಾಗ ಮಾಷ್ಟ್ರು ಅವನ ಮುಖವನ್ನೊಮ್ಮೆ ನೋಡಿದರು. ಕಣ್ಣು ಕೆಂಪಡರಿತ್ತು. ತುಟಿಗಳು ವಿಕಾರ ನಗು ನಿಮಿತ್ತವಾಗಿ ಓರೆಯಾಗಿತ್ತು. ಅಡುಗೆಯವ ತನಗೆ ಮೋಸ ಮಾಡಿದ್ದೆಂದು ಮಾಷ್ಟ್ರಿಗೆ ತಿಳಿದುಹೋಯಿತು.

'ನೀನೊಮ್ಮೆ ಬಾಯಿತೆರಿ' ಮಾಷ್ಟ್ರು ಹೇಳಿದರು.

ಅಡುಗೆಯವ ಮತ್ತಷ್ಟು ನಗಾಡಿದ.

'ವಾಸನೆಯುಂಟು' ಮಾಷ್ಟ್ರು ಹೇಳಿದರು.

ಅಂದು ತಂದೆಯವರೊಂದಿಗೆ ಎರಡು ನಿಮಿಷಗಳ ಕಾಲ ಮಾಷ್ಟ್ರು ಗುಪ್ತ ಸಂಭಾಷಣೆ ನಡೆಸಿದರು. ಸಂಜೆ ಅಡುಗೆಯವ ಅಡುಗೆ ಮನೆಯ ಮೆಟ್ಟಿಲಿನಲ್ಲಿ ಕುಳಿತು ಬೀಡಿಸೇದುತ್ತ ವಿಶ್ರಮಿಸುತ್ತಿರುವಾಗ ನನ್ನೊಂದಿಗೆ ಹೇಳಿದ:

'ಈ ಬೊಡ್ಡಸಾಯೇಬ ಚಾಡಿ ಹೇಳಿಕೊಟ್ಟು ನನ್ನ ಕೆಲ್ಸ ಇಲ್ಲಾಗೆ ಮಾಡ್ತಾನೇಂತ ತೋರ್ತದೆ! ನಿಮ್ಮಪ್ಪನಿಗೆ ಎಲ್ಲಿಂದ ಸಿಗ್ತು ಇಂಥ ಬಿಕನಾಸಿ ಸಾಯೇಬ್ನನ್ನು? ಆ ಜನ ಕಲ್ಸೆ ನಮ್ಮ ಮಗು ಒಳ್ಳೇದಾಗ್ಲಿಕ್ಕಿಲ್ಲ. ಅದು ಕಂಡಿತ. ಆ ಜನದ ಒಳಗೂ ಹೊರಗೂ ಕಪ್ಪು, ದುಷ್ಟ, ನಲ್ವತ್ರೂಪ್ಯಾ ಕೊಟ್ರೆ ಬಿಳಿ ಸಾಯೇಬ್ರೇ ಸಿಗ್ಲಿಕ್ಕಿಲ್ವಾ ಮಕ್ಕಿಗೆ ಕಲಿಸ್ಲಿಕ್ಕೆ?'

ಆ ಸಂದರ್ಭದಲ್ಲೆ ನನಗೆ ಮಣಿಪುರಿ ಕಲಿಸಲು ಬ್ರಜಭಾಷಿ ಎಂಬ ಗುರುವೂ ಹಿಂದಿ ಕಲಿಸಲು ಮಿಶ್ರಾ ಎಂಬುವರೂ ಮನೆಗೆ ಬರತೊಡಗಿದ್ದು. ದಿವಾನಖಾನೆಯ ರತ್ನಗಂಬಳಿಯನ್ನು ಸುರುಳಿ ಸುತ್ತಿಟ್ಟು ನಾನು ನೃತ್ಯ ಕಲಿಯುತ್ತಿದ್ದೆ. ಭೋಜನ

ಕೊಠಡಿಯ ಬಾಗಿಲು ಮುಚ್ಚಿರುತ್ತಿತ್ತು. ಹಾಗಿದ್ರೂ ಕುಪಿತನಾದ ಲಂಬೋದರ ಮಾಷ್ಟ್ರು ಎಡಗಡೆಗೆ ತನ್ನ ಬೆತ್ತದಿಂದ ಬಾಗಿಲಿಗೆ ಹತ್ತು ಹನ್ನೆರಡು ಸಲ ಬಡಿದು ಹೇಳುತ್ತಾರೆ:

'ನಿಲ್ಲಿ, ಈ ಶಬ್ದ ಕೋಲಾಹಲ. ಶ್ಯಾಂಸುಂದರನಿಗೆ ಪರೀಕ್ಷೆ, ಮುಂದಿನ ತಿಂಗಳು. ಈ ಮಗೂ ಫೇಲಾಗ್ಬೇಕೂಂತ ನಿಮ್ಗೆ ಹಠವುಂಟಾ ?'

ಡಾನ್ಸ್ ಮಾಸ್ಟರ್ ನಗಾಡಿದರು.

'ತಮ್ಮನಿಗೆ ಪಾಠ ಹೇಳುವ ಮುದ್ಕನಿಗೆ ಹುಚ್ಚಾ ?' ಅವರು ನನ್ನನ್ನು ಕೇಳಿದರು.

'ಗೊತ್ತಿಲ್ಲ.'

'ನೃತ್ಯದಲ್ಲೂ ಸಂಗೀತದಲ್ಲೂ ಆಸಕ್ತಿಯಿಲ್ಲದ ಅರಸಿಕ. ಕಾಡು ಪ್ರಾಣಿ.'

ಡಾನ್ಸ್ ಮಾಸ್ಟರ್ ಅಡುಗೆಯವ ಸಿದ್ಧಪಡಿಸಿದ ಫಲಾಹಾರವನ್ನು ಹೊಗಳಿದರು. ತನ್ನ ವೀಳ್ಯದೆಲೆ, ಹೊಗೆಸೊಪ್ಪು ಇತ್ಯಾದಿಗಳನ್ನು ಅವನೊಂದಿಗೆ ಪ್ರೀತಿಪೂರ್ವಕ ಹಂಚಿಕೊಂಡರು.

'ಈ ಆಂಗ್ಲೋ ಇಂಡ್ಯನರನ್ನು ಮನೆಗೆ ಸೇರಿಸೋದು ಅಪಾಯಕಾರಿ. ಮಕ್ಕಳ ಸಂಸ್ಕಾರವನ್ನೇ ಹಾಳು ಮಾಡಿಯಾರು. ಆ ಹುಡ್ಗ ಶ್ಯಾಂಸುಂದರ ಪಾಪ, ಒಂದು ವರ್ಷ ಈ ಅರೆ ಇಂಗ್ಲಿಷನಿಂದ ಪಾಠ ಹೇಳಿಸ್ಕೊಂಡ್ರೆ ಅವ್ನೂ ಸರಿಯಾದ ಅರೆ ಇಂಗ್ಲಿಷರವನೇ ಆಗಿ ಬಿಡ್ತಾನೆ. ಆಮೇಲೆ ಕಕ್ಕಸಕ್ಕೆ ಹೋದ್ರೂ ನೀರು ಉಪಯೋಗಿಸ್ಲಿಕ್ಕಿಲ್ಲ.' ಡಾನ್ಸ್ ಮಾಸ್ಟ್ರು ಹೇಳಿದರು.

'ನಾವು ಹಿಂದೂಗಳಲ್ವೆ. ನೀರಿಲ್ಲದೆ ನಮಗೆ ಒಂದು ದಿನ ಕೂಡಾ ಬದುಕೋದಕ್ಕೆ ಸಾಧ್ಯವಿಲ್ಲ.' ಅಡುಗೆಯವ ಹೇಳಿದ.

'ನೀವು ಬ್ರಾಹ್ಮಣರಲ್ವ ?' ಬ್ರಜಭಾಷಿ ಕೇಳಿದರು.

'ಅಲ್ಲ. ನಾಯರ್ ಅಡುಗೆಯವ ಹೇಳಿದ.

'ಎಂದರೆ, ಕ್ಷತ್ರಿಯರಾಗಿರಬೇಕು. ಅದಕ್ಕಿಂತಲೂ ಕೆಳಗಿನವರಾಗುವ ಸಾಧ್ಯತೆಯಿಲ್ಲ. ನೋಡಿದ್ರೆ ಮೇಲ್ಜಾತಿಯವನ ಹಾಗೆ ಕಾಣ್ತೀರಿ.'

ಇಬ್ಬರು ಮಾಷ್ಟ್ರುಗಳು ಹೋದ ಬಳಿಕ ಸಂಜೆಯ ಮೊದಲ ನಕ್ಷತ್ರ ಬಾನಲ್ಲಿ ಕಾಣಿಸಬೇಕಿದ್ದರೆ ಹಿಂದಿ ಮಾಸ್ಟರ್ ಪ್ರವೇಶಿಸುತ್ತಾರೆ. ಲಜ್ಜೆಯಿಂದ ಕೂಡಿದವರಾಗಿ ತನ್ನ ಕಾಲುಗಳ ಕಡೆಗೆ ಮಾತ್ರ ದೃಷ್ಟಿ ಬೀರುತ್ತ ಅವರು ಭೋಜನ ಕೋಣೆಯನ್ನು ಪ್ರವೇಶಿಸುತ್ತಾರೆ. ನಡೆಯುವಾಗ ಅವರ ಕಾಲಬೆರಳುಗಳಲ್ಲಿ ಟಿಕ್‌ಟಿಕ್ ಎಂಬ ಶಬ್ದವುಂಟಾಗುತ್ತದೆ. ಯಾರೋ ಅವುಗಳನ್ನು ಮಡಚಿ ನಟಿಕೆ ಮುರಿದ ಹಾಗೆ.

ಅವರಿಗೂ ಅಡುಗೆಯವ ಫಲಾಹಾರ ತಂದಿತ್ತ. ಅಡುಗೆಯವನೊಂದಿಗೆ ಮಾತನಾಡುವ ಆಸಕ್ತಿಯನ್ನೇನೂ ಮಿಶ್ರಾ ಪ್ರಕಟಪಡಿಸಲಿಲ್ಲ.

ಅಡುಗೆಯವನ ಹಿಂದೂಸ್ತಾನಿ ಏನೇನೂ ಚೆನ್ನಾಗಿಲ್ಲವೆಂದು ಮಾಷ್ಟ್ರು ನನ್ನಲ್ಲಿ ಹೇಳಿದರು. ವ್ಯಾಕರಣವಷ್ಟೇ ಅಲ್ಲ, ಉಚ್ಚಾರಣೆಯೂ ಸಾಕಷ್ಟು ಕೆಟ್ಟದ್ದಿದೆ.

'ನೀನು ಆತನೊಂದಿಗೆ ಹಿಂದಿಯಲ್ಲಿ ಮಾತನಾಡಕೂಡದು ಕಮಲ.'

'ಇಲ್ಲ ಸಾರ್.'

'ಹಿಂದೀಂತಲ್ಲ. ಯಾವ ಭಾಷೆಯಲ್ಲಾದ್ರೂ ಆತನೊಂದಿಗೆ ಹೆಚ್ಚು

ಮಾತಾಡ್ಬೇಕಾದ ಅಗತ್ಯವಿಲ್ಲ. ಕೆಲಸದೋರನ್ನು ಕೆಲಸದೋರಾಗಿಯೇ ನೋಡ್ಬೇಕು.'

'ಸರಿ ಸರ್.'

ಹಿಂದಿ ಮಾಷ್ಟ್ರ ವಿರೋಧೀ ಭಾವನೆ ಅಡುಗೆಯವನನ್ನು ದಿಗ್ಭ್ರಮೆಗೊಳಿಸಿತು.

'ಈ ಜನಕ್ಕೇನು ನನ್ನನ್ನು ಕಂಡಾಗ ಮುಖ ಕಪ್ಪಾಗೋದು ? ಮುಖ ಯಾವಾಗ ನೋಡಿದ್ರೂ ನರಿ ಹೂಸು ಬಿಟ್ಟ ಹಾಗೆ. ಎಲ್ಲಿಂದ ಸಿಕ್ತು ಹೀಗೊಂದು ಹಿಂದೀ ಮಾಷು ? ಬಸ್ರಾ ಮಿಶ್ರ ! ಹೆಸ್ರು ಕೇಳಿದ್ರೇ ವಾಕರಿಕೆ ಬರ್ತದೆ.'

'ನಿಮ್ಗೆ ಆ ಜನವನ್ನು ಕಂಡಾಗ ಅಸೂಯೆ' ಕೆಲಸದವಳು ಹೇಳಿದಳು.

'ನಂಗೋ ? ಅಸೂಯೆಯೋ ? ಆ ಜನವನ್ನು ಕಂಡಾಗಲೂ ?' ಅಡುಗೆಯವನ ಮುಖ ಸಿಟ್ಟಿನಿಂದ ಸಿಡಿಮಿಡಿಯಾಯಿತು.

'ಆತ ನನ್ನ ನೋಡೋದು ನಿಮ್ಗಿಷ್ಟಾಗೋದಿಲ್ಲ.'

'ಅದೀಗ ಚೆನ್ನಾಯ್ತು ! ಯಾವ್ದೋ ಹಳ್ಳಿಗಾಡಿನಿಂದ ಬಂದ ಒಬ್ಳು ಕೆಲ್ಸದೋಳನ್ನು ಯಾರೋ ನೋಡಿದ್ರೂಂತ ನಂಗ್ಯಾಕೆ ಅಸೂಯೆ ? ನೋಡ್ಲಿ. ಬೇಕಾದ್ರೆ ಮದ್ವೆನೂ ಮಾಡ್ಲಿ. ನಂಗೇನು ನಷ್ಟ ?'

ಅಂದು ಕೆಲಸದವಳು ಸ್ವಲ್ಪ ಹೊತ್ತು ಅತ್ತಳು. ಆದರೆ ಅವಳನ್ನು ಸಮಾಧಾನ ಪಡಿಸಲಿಕ್ಕೆ ಅಡುಗೆಯವ ಮುಂದೆ ಬರಲಿಲ್ಲ. ಆತ ಒಂದು ಕಟ್ಟ ಬೀಡಿ ಸೇದಿ ಮುಗಿಸಿದ, ಊಟದ ಹೊತ್ತಾಗಬೇಕಿದ್ದರೆ.

ಅಂದೆಲ್ಲ ಸರಿಯಾಗಿ ಒಂಬತ್ತು ಗಂಟೆಗೆ ತಂದೆತಾಯಿಯರ ಮಾಳಿಗೆ ಮೆಟ್ಟಲಿಳಿದು ರಾತ್ರಿಯ ಊಟಕ್ಕೆ ಬರುತ್ತಿದ್ದರು.

ಎರಡನೆಯ ಲೋಕಮಹಾಯುದ್ಧದ ಕೊನೆಯ ಘಟ್ಟ. ನಾವು 18, Lansdowne Road - ನಲ್ಲಿದ್ದ ಮಾಳಿಗೆಯಲ್ಲಿ ವಾಸವಾಗಿದ್ದ ಸಮಯ.

ತಂದೆಯವರಿಗೆ ಟಪ್ಪಾಲಿನಲ್ಲಿ Daily Mirror ಎಂಬ ಬ್ರಿಟಿಷ್ ಪೀತಪತ್ರಿಕೆಯೂ ಅಮೇರಿಕನ್ ವಾರಪತ್ರಿಕೆಯಾದ Saturday Evening Post - ಊ ಬಂದು ತಲುಪುತ್ತಿದ್ದ ಸಮಯ. 'ಮಿರರ್' ಬುದ್ಧಿಜೀವಿಗಳಿಗೆ ಹೇಳಿದ್ದಲ್ಲವಾದ ಕಾರಣ ನಾನು ಮಾತ್ರ ಅದನ್ನು ಓದುತ್ತಿದ್ದೆ. ಅದರಲ್ಲಿ ಮಿಲಿಟರಿಯವರನ್ನು ಉತ್ಸಾಹ ಭರಿತರನ್ನಾಗಿಸುವುದಕ್ಕಾಗಿ Jane ಎಂಬ ಶಿರೋನಾಮೆಯುಳ್ಳ ಒಂದು ಚಿತ್ರಕತೆ ಎಲ್ಲಾ ದಿವಸವೂ ಪ್ರಕಟಗೊಳ್ಳುತ್ತಿತ್ತು. ಲಾವಣ್ಯವತಿಯಾದ Jane ಮರೆವು ನಿಮಿತ್ತವಾಗಿಯೇ ಇರಬೇಕು, ವಸ್ತ್ರಧರಿಸದೆಯೇ ಹಲವು ಪುಟಗಳಲ್ಲಿ ಕಾಣಿಸಿಕೊಳ್ಳುತ್ತಿದ್ದುದು. ವಿಶೇಷವಾಗಿ ಯಾವುದೇ ವಸ್ತುವಿಲ್ಲದ ಕತೆ. ಅವಳ ಮಾದಕ ಸುಂದರ ಶರೀರವೇ ವಸ್ತು. ಯುದ್ಧ ಮಾಡುವಾಗಲೂ ಮಿಲಿಟರಿಯವರು ಜೇನ್ ಎಂಬ ಆ ತರುಣಿಯ ಬಗ್ಗೆ ನೆನಪು ಮಾಡಿಕೊಳ್ಳುತ್ತಿದ್ದರು. ಯುದ್ಧ ಗೆದ್ದುದರ ಒಂದು ಕಾರಣವೂ ಜೇನ್ ಆಗಿದ್ದಳೆಂದೂ ಕೆಲವರು ಆಮೇಲೆ ಪ್ರಸ್ತಾಪಿಸುತ್ತಿದ್ದುದಾಗಿ ನಾನು ಓದಿದ್ದೆ. Post ಎಂಬ ವಾರಪತ್ರಿಕೆಯಲ್ಲಿ ಸಣ್ಣ ಕತೆಗಳೂ Tugboat Annie ಮೊದಲಾದ ಧಾರಾವಾಹಿಗಳೂ ಪ್ರಕಟಗೊಳ್ಳುತ್ತಿದ್ದವು.

ನಾಲಪ್ಪಾಟ್ಟಿನಲ್ಲಿ ವಾಸಿಸುತ್ತಿದ್ದಾಗ ಮಾತೃಭೂಮಿ ವಾರಪತ್ರಿಕೆಗೆ ನನ್ನ ಜೀವನದಲ್ಲಿ ಕೊಟ್ಟಿದ್ದ ಅಮೂಲ್ಯ ಪ್ರಾಧಾನ್ಯವನ್ನು ಕಲ್ಕತ್ತೆಯಲ್ಲಿ ಆ ಅಮೇರಿಕನ್ ವಾರಪತ್ರಿಕೆ ನನ್ನಿಂದ ಕಸಿದುಕೊಂಡಿತು. ಅಂಚೆಪೇದೆಯನ್ನು ಕಾದು ನಿಲ್ಲುತ್ತಿದ್ದ ನನಗೆ ಆ ವಾರಪತ್ರಿಕೆ ಒಂದು ಅಮೂಲ್ಯ ನಿಧಿಯಾಗಿತ್ತು. NormalRockwellಎಂಬ ಚಿತ್ರಕಾರ ಬಿಡಿಸಿದ ಮುಖಚಿತ್ರಗಳು ನನಗೆ ಹಿಡಿಸಿದವು. ಕುಟುಂಬದ ಕಲ್ಪನೆಗೊಪ್ಪುವ ಆಲೋಚನೆಗಳನ್ನು ಆತ ಬಿಂಬಿಸುತ್ತಿದ್ದ. ತಂದೆ, ತಾಯಿ, ಅಜ್ಜ, ಅಜ್ಜಿ, ಹುಡುಗ, ಹುಡುಗಿ, ಮಗು, ನಾಯಿ, ಬೆಕ್ಕು, ಕುದುರೆ, ಗಿಳಿ..... ಮೊದಲಾದ ಎಲ್ಲವನ್ನೂ ಆತ ಕೆಲವೊಮ್ಮೆ ಒಂದೇ ಚಿತ್ರದಲ್ಲಿ ಪೋಣಿಸುತ್ತಿದ್ದ. ಅಮೇರಿಕನ್ ಕುಟುಂಬಗಳ ಶಕ್ತಿಯನ್ನೂ ಭದ್ರತೆಯನ್ನೂ ಪ್ರಕಟಪಡಿಸುವುದಕ್ಕೆ ಆತ ನಿರಂತರ ಪ್ರಯತ್ನಿಸುತ್ತಿದ್ದ. ಅಮೇರಿಕನ್ ಕುಟುಂಬಗಳು ಲೈಂಗಿಕ ಅರಾಜಕತ್ವ ನಿಮಿತ್ತವಾಗಿ ಕುಸಿದು ಧೂಳೀಪಟವಾಗುತ್ತಿವೆ ಎಂದು ಅಂದು ಯಾರೂ ಹೇಳುತ್ತಿರಲಿಲ್ಲ. ಲೈಂಗಿಕ ಅರಾಜಕತ್ವದ ಬಗ್ಗೆ ವಿರೂಪಿಗಳಾದ ಪುರುಷರೂ ಸ್ತ್ರೀಯರೂ ಚರ್ಚೆ ನಡೆಸುತ್ತಿರಲಿಲ್ಲ. ಅಮೇರಿಕದವರೂ ಇಂಗ್ಲೀಷರೂ ಜಪಾನೀಯರೂ ಜರ್ಮನರೂ ಇಂಡಿಯಾದವರೂ ಎಲ್ಲರೂ ಒಂದೇ ಕುಟುಂಬಕ್ಕೆ ಸೇರಿದವರೆಂದು ನಾನು ತಿಳಿದಿದ್ದೆ. ಅಂದು ರಾಜಕೀಯ ನನಗೆ ಅಪರಿಚಿತ ವಿಷಯವಾಗಿತ್ತು. ರಾಜಕೀಯದ ಸಂಹಾರ ಶಕ್ತಿ ಕೂಡ.

ನಮ್ಮ ನೆರಮನೆಯವರ ಅತಿಥಿಗಳಾಗಿ ಬಂದಿದ್ದ ಅಮೇರಿಕನ್ ಮಕ್ಕಳು ನಮ್ಮೊಂದಿಗೆ ಸೇರಿ ಆಡಿಕೊಂಡರು. ಆಹಾರ ಪದ್ಧತಿಯಲ್ಲಿ ಮಾತ್ರ ಅವರು ನಮಗಿಂತ ಭಿನ್ನರಾಗಿ ಕಂಡರು. ಅವರು ಮಲಗುತ್ತಿದ್ದ ಕೋಣೆಯನ್ನು ನಮ್ಮ ಕಿಟಕಿಯೆಡೆಯಿಂದ ನೋಡಬಹುದಾಗಿತ್ತು. ರಾತ್ರಿ ನಮ್ಮ ಅಮ್ಮನ ಎರಡೂ ಪಕ್ಕದಲ್ಲಿ ಮಲಗಿ ಕಥೆಗಳನ್ನು ಕೇಳುತ್ತಿದ್ದುದು ಅವರಿಗೆ ಹವ್ಯಾಸವಾಗಿಬಿಟ್ಟಿತ್ತು. ನಾನೂ ನನ್ನ ಅಣ್ಣನೂ ಎಷ್ಟೋ ಸಲ ನಮ್ಮ ಅಮ್ಮನ ಕತೆಗಳನ್ನು ಕೇಳುತ್ತ ನಿದ್ರಿಸಿದ್ದೆವು. ಆ ಕಾಲ ಮತ್ತೆ ನನ್ನ ನೆನಪಿಗೆ ಬಂತು. ಆ ನಡುವೆಯೇ ಇರಬೇಕು, ನಮ್ಮ ಮನೆಗೆ ಅತಿಥಿಗಳು ಬಂದದ್ದು. ಪ್ರೊಫೆಸರ್ ಶಂಕರನ್ ನಂಬ್ಯಾರರ ಮಗಳು ಸರಳ ಎಂಬ ಸರಳಕ್ಕ, ಗಂಡನಾದ ಕೊಚ್ಚಿತಂಬುರಾನೂ ಮಗ ಮೋಹನನೂ ನಮ್ಮ ಮನೆಗೆ ಬಂದರು. ಮನೆ ಸಿಕ್ಕುವ ತನಕ ನಮ್ಮಲ್ಲಿಯೇ ತಂಗಬಹುದೆಂದು ತಂದೆ ತಂಬುರಾನರಿಗೆ ಹೇಳಿದರು. ಸರಳಕ್ಕನಂಥ ಓರ್ವ ಪರಿಷ್ಕೃತ ಮಲಯಾಳಿ ಮಹಿಳೆಯನ್ನು ನಾನು ಅದೇ ಮೊದಲ ಬಾರಿಗೆ ನೋಡಿದ್ದು. ಪುನ್ನಯೂರ್‌ಕುಳದಲ್ಲಿದ್ದ ಹೆಂಗಸರು-ಅವರು ಸಿರಿವಂತರಾದರೂ ಸರಿಯೆ, ಬಡವರಾದರೂ ಸರಿಯೆ-ತಮ್ಮ ಕೈಬೆರಳುಗಳನ್ನು ಶುಚಿಗೊಳಿಸುವುದಕ್ಕೆ ಶ್ರಮಪಟ್ಟಿರಲಿಲ್ಲ. ಉಗುರಿನೆಡೆಯ ಮಣ್ಣೂ ತಲೆಯ ಹೇನೂ ಅವರ ನಡುವಿನ ಸಾಮಾನ್ಯ ವಿಷಯವಾಗಿತ್ತು. ಸರಳಕ್ಕ ಸುಂದರಿಯೂ ಪರಿಷ್ಕಾರವುಳ್ಳವರೂ ಆಗಿದ್ದರು. ಹೊತ್ತು ಕಳೆಯುವ ಮಾತುಗಳನ್ನು ಧಾರಾಳವಾಗಿ ಆಡುವುದಕ್ಕೂ ನಗುವುದಕ್ಕೂ ನಗಿಸುವುದಕ್ಕೂ ಅವರು ಉತ್ಸಾಹ ತೋರುತ್ತಿದ್ದರು. ಚಿನ್ನಾಭರಣಗಳಿಗೆ ಹೊರತಾಗಿ ಸ್ಫಟಿಕಮಣಿಗಳಿಂದ ನಿರ್ಮಿಸಿದ ಒಂದು ಮಾಲೆಯನ್ನೂ ಅವರು ಧರಿಸುತ್ತಿದ್ದರು.

ಅವರೂ ಯಾವತ್ತೂ ಗುನುಗುನು ಹಾಡುತ್ತಲೇ ಇರುತ್ತಿದ್ದರು. ಮೇಲಿನ ಕೋಣೆಗಳಿಗೆ ಅವರು ಸಂಗೀತ ತಂದರು.

ನನ್ನ ತಂದೆ ತಾಯಿಯರು ಹೆಚ್ಚು ಹೊತ್ತು ತಮ್ಮ ಮಕ್ಕಳೊಂದಿಗೆ ಮಾತಾಡಿ ಕಳೆಯುವುದನ್ನು ಇಷ್ಟಪಡುತ್ತಿರಲಿಲ್ಲ. ಆದ್ದರಿಂದಲೇ ಇರಬೇಕು, ಸರಳಕ್ಕ ನನ್ನೊಂದಿಗೆ ಶಾಲೆಯ ಸಂಗತಿಗಳನ್ನು ಕೇಳಿದಾಗ ನನಗೆ ಅತಿಯಾದ ಸಂತೋಷವಾದದ್ದು. ಅನುಕರಿಸುವುದಕ್ಕೆ ಯೋಗ್ಯವಾದ ಓರ್ವ ಮಾದರಿ ವ್ಯಕ್ತಿಯನ್ನು ನಾನು ಹುಡುಕುತ್ತಿದ್ದೆ. ಅಂಥ ಮಾದರಿವ್ಯಕ್ತಿ ಸರಳಕ್ಕನ ರೂಪದಲ್ಲಿ ನನಗೆ ಕಾಣಸಿಕ್ಕಿದರು.

'ನಾನು ಯಾವತ್ತಾದರೂ ಸರಳಕ್ಕನ ಹಾಗೆ ಸುಂದರಿಯಾದೇನಾ?' ನಾನು ಕಲ್ಲೂವಿನಲ್ಲಿ ಕೇಳಿದೆ.

'ಇಲ್ಲ' ಅವಳು ಹೇಳಿದಳು.

'ಅದ್ಯಾಕೆ ಹಾಗೆ?'

'ನಿಮ್ಗೆ ಈ ಜನ್ಮದಲ್ಲಿ ಆ ಬಣ್ಣ ಸಿಗ್ಲಿಕ್ಕಿಲ್ಲ'

'ಬಣ್ಣ ಇಲ್ದಿದ್ರೆ ಸುಂದರಿಯಾಗ್ಲಿಕ್ಕಿಲ್ವೆ?'

'ಇಲ್ಲ ಮಗೂ. ನೀವು ಚಂದ ಆಗ್ತೀರಿ. ಆದ್ರೆ ಸರಳಮ್ಮನ ಹಾಗೆ ಸುಂದರಿಯಾಗ್ಲಿಕ್ಕಿಲ್ಲ. ಅದನ್ನು ಆಸೆ ಪಟ್ಟು ಫಲವಿಲ್ಲ.'

'ನಂಗೆ ಅಂಥ ಆಸೇನೂ ಇಲ್ಲ.'

'ಆಸೆ ಇಲ್ದಿದ್ರೆ ಕೇಳಿದ್ಯಾಕೆ?'

'ಸುಮ್ನೆ ಕೇಳಿದ್ದು.'

ಕಲ್ಲೂ ಗಟ್ಟಿಯಾಗಿ ನಕ್ಕಳು. ಅವಳು ನನ್ನ ಬಗ್ಗೆ ಇನ್ನೂ ಏನೇನೂ ತನ್ನ ಗಂಡನಾದ ಅಡುಗೆಯವನೊಂದಿಗೆ ಹೇಳಿ ನಗುತ್ತಿದ್ದಳು. ಅವಳು ನನ್ನ ತಂಗಿಯ ಸೇವೆಗೆ ಮಾತ್ರ ನಿಯುಕ್ತಳಾದವಳಾಗಿದ್ದಳು. ನನಗೆ ಬೇರೆಯೇ ಒಬ್ಬ ಕೆಲಸದವಳಿರಲಿಲ್ಲ. ನೆಲ ಒರಸುವ ತ್ರಿಪುರಾ, ರಾತ್ರಿಯಲ್ಲಿ ನನ್ನ ನೆರವಿಗಾಗಿ, ಮಂಚದ ಕೆಳಗೆ ಚಾಪೆ ಹಾಸಿ ಮಲಗುತ್ತಿದ್ದಳು. ಅವಳು ನನಗೆ ಹಲವಾರು ಕತೆಗಳನ್ನು ಹೇಳಿಕೊಟ್ಟಿದ್ದಳು. ಅದರಲ್ಲಿ ನೆನಪಿರುವುದು ಮಂಗನ ಕತೆ ಮಾತ್ರ.

ಮಂಗನ ಯಜಮಾನಿ ಓರ್ವ ಜಮೀನ್ದಾರ ಹೆಂಗಸಾಗಿದ್ದಳು. ಓರ್ವ ದೊರೆಸಾನಿ. ಅವಳಿಗೆ ಆಭರಣಗಳೆಂದರೆ ಇಷ್ಟ. ರತ್ನ ಖಚಿತವಾದ ಆಭರಣಗಳನ್ನು ಒಂದೊಂದಾಗಿ ಧರಿಸುವುದನ್ನು ನೋಡಿದ ಮಂಗನಿಗೆ ಅಸೂಯೆಯಾಯಿತು. ಅದು ಒಂದೊಂದೇ ಆಭರಣವನ್ನು ಮೆಲ್ಲ ಮೆಲ್ಲ ಕದ್ದು ಹಟ್ಟಿಗೆ ಕೊಂಡುಹೋಗಿ ಅಡಗಿಸಿಟ್ಟಿತು. ಅದು ಕಾಣದಿರಲಿಕ್ಕೆಂದು ಅದರ ಮೇಲೆ ಮಲವಿಸರ್ಜನೆ ಮಾಡಿತು. ಆಭರಣಗಳನ್ನು ಕಂಡು ಹಿಡಿಯುವುದಕ್ಕೆ ದೊರೆಸಾನಿಗೆ ಸಾಧ್ಯವಾಗಲಿಲ್ಲ. ಕೊನೆಗೊಮ್ಮೆ ಮಳೆಗಾಲ ಬಂತು. ಮಳೆ ಬಂದಾಗ ಮಲಹರಿದುಹೋಯಿತು. ಆಭರಣಗಳು ಬೆಳಕಿಗೆ ಬಂದುವು. ಮಂಗನ ಚೇಷ್ಟೆಯನ್ನು ಅರಿತುಕೊಂಡ ದೊರೆಸಾನಿ ಅದನ್ನು ಹಿಡಿದು ಒಬ್ಬ ಕೊರವನಿಗೆ ಎರಡು ರೂಪಾಯಿಗೆ ಮಾರಿದಳು. ಈ ಕಥೆಗೇಂತಲ್ಲ, ತ್ರಿಪುರಾಳ ಎಲ್ಲ ಕತೆಗೂ ಒಂದು ನೀತಿ ಪಾಠವಿರುತ್ತಿತ್ತು. ಈ ಕತೆ ಕೇಳಿ ಆದ ಮೇಲೆ ನಾನು

ಒಂದು ತೀರ್ಮಾನಕ್ಕೆ ಬಂದೆ. ನಾನು ಯಾವತ್ತೂ ಮಂಗನನ್ನು ಮನೆಯಲ್ಲಿ ಸಾಕಲಾರೆನೆಂದು.

ನನ್ನ ಹನ್ನೊಂದನೆಯ ಹುಟ್ಟಿದ ಹಬ್ಬ ಕಳೆದು ಸ್ವಲ್ಪ ದಿನದಲ್ಲೆ ಬೇಸಿಗೆ ರಜೆ ಬಂತು. ನಾನು ನಾಲಪ್ಪಾಟ್ಟು ಮನೆಗೆ ಬಂದೆ. ಅಜ್ಜಿ ತನ್ನ ಕಣ್ಣುಗಳ ಮೂಲಕ ನನ್ನನ್ನು ಸೂಕ್ಷ್ಮ ಪರಿಶೋಧನೆಗೆ ಒಳಪಡಿಸಿದ ನಂತರ ಒಂದು ಮುಗುಳ್ನಗೆಯೊಂದಿಗೆ ಹೇಳಿದರು:

'ಮುಂದಿನ ಸೋಮವಾರ ನಾನು ನಿನಗೆ ಒಳಕಚ್ಚೆಪಂಚೆ ಉಡುವುದಕ್ಕೆ ಕಲಿಸುತ್ತೇನೆ.'

ಅದನ್ನು ಕೇಳಿ ನನಗೆ ಸಂತೋಷವಾಯಿತು. ಆದಷ್ಟು ಬೇಗ ಬಾಲ್ಯ ಕಳೆದು ಓರ್ವ ಯುವತಿಯಾಗಿ ಬದಲಾಗಬೇಕೆಂದು ನಾನೂ ಬಯಸಿದ್ದೆ.

ಮಾರನೆಯ ದಿವಸವೆ ಅಜ್ಜಿ ಅಗಲ ಕಡಿಮೆಯ ಮಲ್ಲ್ ಬಟ್ಟೆ ಖರೀದಿಸಿ ಐದುಮೊಳ ಉದ್ದಕ್ಕೆ ಕತ್ತರಿಸಿ ನಾಲ್ಕು ಒಳದಟ್ಟಿಗಳನ್ನು ಮಾಡಿದರು. ಹೊಲಿಗೆಯ ಕುಮಾರನ್ ಬದಿಗಳನ್ನು ಹೊಲಿದುಕೊಟ್ಟ. ಲಕ್ಷ್ಮಿಕುಟ್ಟಿ ಹೊಸಬಟ್ಟೆ ಒಗೆದು ಬಿಳಿ ಮಾಡಿದಳು. ನನ್ನ ಗೆಳತಿಯಾದ ಅಂಬಾಳತ್ತಿನ ಮಾಲತಿಕುಟ್ಟಿಯೂ - ಉಡುವುದು ಕಲಿಯಲೆಂದು - ಸೋಮವಾರ ಮುಂಜಾನೆ ಸ್ನಾನ ಮಾಡಿ ನಾಲಪ್ಪಾಟ್ಟಿನ ತೆಂಕಮೂಲೆಗೆ ಬಂದು ತಲುಪಿದಳು. ಅಜ್ಜಿ ನನಗಾಗಿ ಒಂದು ಗುಲಾಬಿ ಬಣ್ಣದ ರವಿಕೆಯನ್ನೂ ಸಪೂರ ಅಂಚಿನ ಮುಂಡನ್ನೂ ಮರದ ಪೆಟ್ಟಿಗೆಯಿಂದ ಹೊರತೆಗೆದರು. ಕೆಲಸದವರು ಕಾಣದಿರಲೆಂದು ಅಜ್ಜಿ ನಮ್ಮನ್ನು ತೆಂಕಕೋಣೆಗೆ ಕರೆದೊಯ್ದರು. ಮುಂಡು ಕಟ್ಟುವುದಕ್ಕೂ ನೆರಿಗೆ ಹಿಡಿಯುವುದಕ್ಕೂ ಕಲಿತಾದ ಮೇಲೆ ನಾನೂ ಮಾಲತಿಯೂ ಪರಸ್ಪರ ಸಹಕರಿಸಿ ಒಳಕಚ್ಚೆ ಉಟ್ಟೆವು.

'ಎಲ್ಲರೂ ಒಳಕಚ್ಚೆ ಉಡ್ತಾರಾ ?' ನಾನು ಕೇಳಿದೆ.

'ನಾಯರಾಗಿ ಹುಟ್ಟಿದರೆ ಒಳಕಚ್ಚೆ ಉಡ್ತಾರೆ. ಸೊಂಟ ಒಪ್ಪವಾಗ್ಲಿಕ್ಕೆ. ಉಡದಿದ್ರೆ ಚಂದ ಇರೋದಿಲ್ಲ.'

ಉಡದಿದ್ದ ಚಂದದ ಕಲ್ಕತ್ತದ ನಾರಿಯರನ್ನು ನಾನು ನೆನೆಸಿಕೊಂಡೆ. ಆದರೆ ಅಜ್ಜಿಯೊಂದಿಗೆ ವಾದ ಮಾಡಲಿಕ್ಕೆ ನಾನು ಸಿದ್ಧಳಾಗಲಿಲ್ಲ.

'ಶಾಲೆಗೆ ಹೋಗ್ವಾಗ ಇದೆಲ್ಲ ಆಗ್ಲಿಕ್ಕಿಲ್ಲ' ನಾನು ಹೇಳಿದೆ: ಫ್ರಾಕಿನ ಅಡಿಯಿಂದ ಕಂಡ್ರೆ ? ಎಲ್ಲ ಮಕ್ಳೂ ಸೇರಿ ನನ್ನ ಗೇಲಿ ಮಾಡ್ತಾರು.'

'ಒಳಕಚ್ಚೆ ಉಡದಿದ್ರೇ ಗೇಲಿಮಾಡೋದು. ಪ್ರಾಯಕ್ಕೆ ಬಂದ ಹುಡುಗೇರು ಒಳಕಚ್ಚೆ ಉಡದೆ ನಡೆದ್ರೆ ಗೊತ್ತಾಗಿ ಜನ್ರು ಗೇಲಿ ಮಾಡ್ತಾರೆ' ಅಜ್ಜಿ ಹೇಳಿದರು.

ರಜಾಕಾಲ ಮುಗಿಯುವವರೆಗೆ ನಾನು ಒಳಕಚ್ಚೆಯನ್ನೂ ಮುಂಡನ್ನೂ ಉಟ್ಟು ನಾಲಪ್ಪಾಟ್ಟಿನ ಮನೆಯಲ್ಲೂ ಹಿತ್ತಲಿನಲ್ಲೂ ಅಂಗಳದಲ್ಲೂ ನಡೆದಾಡಿದೆ. ಶಾಲಾ ವಿದ್ಯಾಭ್ಯಾಸ ಮುಗಿಸಿ ಅಜ್ಜಿಯ ಹಾಗೆ ಕೌಮಾರ್ಯ ದೆಸೆಯಲ್ಲೇ ವೈವಾಹಿಕ ಜೀವನ ಆರಂಭಿಸಬೇಕೆಂದು ನಾನು ಬಯಸಿದೆ. ನಾಲಪ್ಪಾಟ್ಟಿನ ಮನೆಯಲ್ಲೇ ವಾಸಮಾಡಬೇಕೆಂದು ನನಗೆ ಆಸೆಯಿತ್ತು. ಎಣ್ಣೆ ಹಚ್ಚಿ ಸ್ನಾನಮಾಡಲಿಕ್ಕೂ ಕೊಳದಲ್ಲಿ

ಈಜಲಿಕ್ಕೂ ಮಧ್ಯಾಹ್ನ ಮೇಲೆ ಉತ್ತರದ ಕೋಣೆಯಲ್ಲಿ ಮಲಗಿ ನಿದ್ರಿಸಲಿಕ್ಕೂ ನಾನು ಬಯಸಿದೆ. ನಾಲಪ್ಪಾಟ್ಟಿನಲ್ಲಿ ವಾಸವಾಗಿದ್ದ ಕಾಲದಲ್ಲಿ ಕಲ್ಕತ್ತ ಒಂದು ಹಳೆಯ ಕನಸಿನ ಹಾಗೆ ಕಣ್ಣಂಚಿನಿಂದ ನಿಧಾನವಾಗಿ ಮರೆಯಾಗುತ್ತಿತ್ತು. ಕಲ್ಕತ್ತೆ ನಿಜವಲ್ಲ. ನಾಲಪ್ಪಾಟ್ಟೇ ನಿಜ ಎಂಬುದಾಗಿ ಅಂದೆಲ್ಲ ನಾನು ಭಾವಿಸಿದ್ದೆ.

ಉತ್ಸವದ ಚೆಂಡೆಪೆಟ್ಟೂ ದರ್ಶನದವನ ಗರ್ಜನೆಯೂ ಪರಯನ್‌ಕಾಳಿಯ ಹಾಡೂ ನನ್ನ ಬದುಕಿನ ವಾಸ್ತವತೆಗಳಾದುವು. ಕಲ್ಕತ್ತೆಯಲ್ಲಿ ಬೆಳೆದಿದ್ದ ಕಮಲ-ಇಂಗ್ಲೀಷೂ ಬಂಗಾಳಿಯೂ ಮಾತನಾಡುತ್ತಿದ್ದವಳು - ಸ್ವಪ್ನದಲ್ಲಿ ಮಾತ್ರ ಬದುಕಿದವಳಾದಳು. ಹೇಳಿಕೇಳಿದ ಕತೆಗಳಲ್ಲಿನ ಕಥಾನಾಯಕಿ. ಮೂಕಿ ಮಡಂದಳಂತಿರುವ ಹುಡುಗಿ.

ಮತ್ತೆ ಕಲ್ಕತ್ತಾಕ್ಕೆ ಹಿಂದಿರುಗಬೇಕಾಗಿ ಬಂದಾಗ ಉಗಿಬಂಡಿಯಲ್ಲಿ ಕುಳಿತು ಅಳು ನುಂಗಿದೆ. ಅಂದು ಫಸ್ಟ್‌ಕ್ಲಾಸ್ ಕಂಪಾರ್ಟ್‌ಮೆಂಟಿನಲ್ಲಿ ನಾಲ್ವರಿಗೆ ಮಾತ್ರ ಸೀಟಿರುತ್ತಿತ್ತು. ತಂದೆ ತಾಯಿ ನಾನು ಅಣ್ಣ ತಮ್ಮ ತಂಗಿ ಎಲ್ಲರೂ ಸೇರಿ ಪ್ರಯಾಣಿಸುವಾಗ ನೆಲದಲ್ಲಿ ಬಟ್ಟೆ ಹಾಸಿ ಅದರಲ್ಲಿ ಮಲಗುವಂತೆ ತಂದೆ ನನಗೆ ಹೇಳುತ್ತಿದ್ದರು. ಉಗಿ ಬಂಡಿ ಜೋರಾಗಿ ಅಲುಗಾಡುವಾಗ ನನ್ನ ತಲೆಯ ಹಿಂಭಾಗ ನೆಲಕ್ಕೆ ಬಡಿದು ತುಂಬ ನೋವನುಭವಿಸುತ್ತಿದ್ದೆ. ಒಮ್ಮೆ ನಾನೆದ್ದು ಕಿಟಕಿಯ ಬಳಿಕುಳಿತು ಹೊರಕ್ಕೆ ನೋಡಿದೆ. ಮುಂಜಾನೆ ಯಾವುದೋ ಸ್ಟೇಷನ್‌ನಲ್ಲಿ ಬಂಡಿ ನಿಂತಾಗ ಒಬ್ಬಳು ಹುಚ್ಚಿ ನನ್ನೆದುರಿಗೆ ಕೈ ಚಾಚುತ್ತ ಓಡಿ ಬಂದಳು. ಅವಳ ಹಲ್ಲುಗಳ ಅಂಚುಹುಡಿಯಾಗಿದ್ದುವು. ಆ ವಿಕಾರವಾದ ನಗೆ ಆಮೇಲೆ ಕನಸಿನಲ್ಲೂ ಕಾಣಿಸಿ ನಾನೆಷ್ಟೋ ಸಲ ಭೀತಿಯಿಂದೆದ್ದು ಅತ್ತದ್ದುಂಟು.

'ಮೇರಿ ಬೇಟಿ' ಎಂಬುದಾಗಿ ಹುಚ್ಚಿ ನನ್ನನ್ನು ಕರೆದಿದ್ದಳು. ಹಾಗೆ ಕರೆದದ್ದೂ ನನ್ನನ್ನು ಭಯವಿಹ್ವಲೆಯನ್ನಾಗಿ ಮಾಡಿತು, ಅಧೀರಳನ್ನಾಗಿಸಿತು. ನಾನು ಆಲೋಚನೆ ಮಾಡದೆ ಏನಾದರೂ ಹೇಳಿಬಿಟ್ಟರೆ ಕೂಡಲೆ 'ಕಮಲೆಗೆ ಹುಚ್ಚು' ಎಂದು ಅಜ್ಜಿ ಹೇಳುತ್ತಿದ್ದರು. ನಿಜವಾಗಿಯೂ ನಾನು ಅಂದು ಕಂಡ ಹುಚ್ಚಿಯ ಮಗಳಾಗಿದ್ದೆನೋ ಎಂಬುದಾಗಿ ಎಡೆಗಡೆಗೆ ಸಂದೇಹಿಸಿದೆ.

ತಂದೆಯ ಕಂಪೆನಿಯಲ್ಲಿ ಪೇದೆಯಾಗಿದ್ದ ಕುಞಾತ್ತು ನಮ್ಮ ಮನೆಯಲ್ಲಿ ವಾಸವಾಗಿದ್ದ. ಲಾಂಡ್ಸ್‌ಡೌನ್ ರಸ್ತೆಯ ಹದಿನೆಂಟನೆಯ ನಂಬರಿನ ಮನೆಯಲ್ಲಿ ಆರು ಮಲಗುವ ಕೋಣೆಗಳೂ ಒಂದು ದಿವಾನಖಾನೆಯೂ ಒಂದು ಊಟದ ಕೋಣೆಯೂ ಇದ್ದುವು. ಆದರೂ ಅಡುಗೆ ಮನೆಯ ಇದ್ದಿಲು ಕೋಣೆಯ ಓಂಬದಿಯ ಇಳಿಸಿ ಕಟ್ಟಿದ ಜಾಗದಲ್ಲಿ ಅರುವತ್ತನಾಲ್ಕು ವಯಸ್ಸಿನ ಕುಞಾತ್ತು ವಾಸವಾಗಿದ್ದ. ಆತ ತನ್ನ ಸುಂದರಿಯಾದ ಮಗಳ ಬಗ್ಗೆ ಹಲವೊಮ್ಮೆ ನನ್ನಲ್ಲಿ ಹೇಳಿದ್ದುಂಟು.

'ನಿಮ್ಗಿಂತ ಎರಡು ವರ್ಷ ದೊಡ್ಡೋಳು ಚೆರುಚ್ಚಿ. ನಿಮ್ಗಿಂತ ಬಣ್ಣವೂ ಉಂಟಾಯ್ತಾ. ತೋರ ತೋರಾಗಿ, ಟೊಮೇಟೋದಾಗ.'

'ಚೆರುಚ್ಚಿ ಶಾಲೆಗೆ ಹೋಗ್ಲಿಲ್ವ ?'

'ಬರೇ ಸೋಮಾರಿ ಅವ್ಳು. ಹಸಿ ಕಡ್ಡಿಂದ ಎರಡು ಬಿಗಿದರೆ ಸ್ಲೇಟು ತಕ್ಕೊಂಡು ಕೊಟ್ಟಪ್ಪಡಿ ಶಾಲೆಗೆ ಹೋಗ್ತಿದ್ಳು.'

ಕೆಲಸದವರ ಕಕ್ಕಸಿನಲ್ಲಿ ಒಮ್ಮೆ ಒಬ್ಬಾಕೆ ನೇಣು ಹಾಕಿ ಸತ್ತಳೆಂದು ತ್ರಿಪುರಾ ಹೇಳಿ ನಮಗೆಲ್ಲ ಗೊತ್ತಾಯ್ತು. ರಾತ್ರಿ ಮೂತ್ರ ಮಾಡೋದಕ್ಕೆ ಅಲ್ಲಿಗೆ ಹೋಗಲು ಕುಞಾತ್ತುವಿಗೆ ಹೆದರಿಕೆಯಾಗುತ್ತಿತ್ತು. ಆದ್ದರಿಂದ ಆತ ಇದ್ದಿಲ ಕೋಣೆಯಲ್ಲಿ ಮೂತ್ರ ಮಾಡಿ ಅಲ್ಲೆಲ್ಲ ದುರ್ಗಂಧ ಹರಡಿ ಬಿಟ್ಟಿದ್ದ.

ಕೆಲಸದವಳೂ ಅಡುಗೆಯವನೂ ಆ ಮೂತ್ರವಾಸನೆಯ ಬಗ್ಗೆ ಗೊಣಗಿದಾಗ ಕುಞಾತ್ತು ಹೇಳಿದ: ಇಲ್ಲಿಗೆ ಒಂದು ಬೆಕ್ಕು ಬರ್ತದೆ. ಬಿಳಿಯ ಒಂದು ಕಾಡು ಬೆಕ್ಕು. ವ್ಯ್ಯಾಂವ್ ವ್ಯ್ಯಾಂವ್ ಅನ್ನೋದು ಕೇಳಿ ನಂಗೆ ಎಚ್ಚರಾಗ್ತಿತ್ತು. ಅದರ ಕೆಲ್ಸ ಅಲ್ಲಿ ಮೂತ್ರ ಮಾಡೋದು. ಬೆಕ್ಕು ಮೂತ್ರ ಮಾಡಿದ್ರೆ ನನ್ನನ್ನೇಳಿದ್ರೆ ಹೇಗೆ?

ಅಡುಗೆಯವ ಕೆಲಸದವಳನ್ನು ಮದುವೆಯಾಗುವ ತನಕ ತರಕಾರಿ ಕೋಣೆಯ ಮೇಲಿನ ಕೋಣೆಯಲ್ಲಿ ಕುಞಾತ್ತು ಮಲಗುತ್ತಿದ್ದ. 'ನಾನು ಕಲ್ಲೂವನ್ನು ಪ್ರೀತಿಸ್ತೇನೆ' ಎಂದೊಂದು ಸಂದೇಶವನ್ನು ಅಡುಗೆಯವ ಕಾಗದದಲ್ಲಿ ಬರೆದು ಅಮ್ಮನ ಎದುರಿಗೆ ಚಾಚಿದ. ಅಮ್ಮ ಕಲ್ಲೂವನ್ನು ಕರೆದು ಅವಳ ಅಭಿಪ್ರಾಯ ಕೇಳಿದರು. ಅವಳಿಗೂ ಪ್ರೀತಿಯೆ. ಆದ್ದರಿಂದ ಸಮಯ ಕಳೆಯದೆ ಅಮ್ಮ ಅವರನ್ನು ದೇವರ ಕೋಣೆಗೆ ಕೊಂಡುಹೋಗಿ ಮದುವೆ ಮಾಡಿಸಿದರು. ಅವರಿಗೆ ಮಲಗುವುದಕ್ಕಾಗಿ ಕೋಣೆಯನ್ನು ತೆರವು ಮಾಡಿಕೊಡುವಂತೆ ಅಮ್ಮ ಕುಞಾತ್ತುವಿಗೆ ಹೇಳಿದರು.

'ಮರ್ಯಾದೆಯಿಲ್ಲದೋಳ್ದೊಂದು ಮದ್ವೆ. ಇಲ್ಲಿಯ ಬಾಲಾಮಣಿಯಮ್ಮೆಯಲ್ದೆ ಬೇರೆ ಯಾರಾದ್ರೂ ಆಗಿರ್ತಿದ್ರೆ ಎರಡನ್ನೂ ಹಿಡ್ದು ಮೆಟ್ಲಾಚೆ ದೂಡಿ ಬಾಗಿಲು ಹಾಕಿಬಿಡ್ತಿದ್ರು.'

ಮುದುಕ ತನ್ನ ಪೆಟ್ಟಿಗೆಯನ್ನೂ ಬಟ್ಟೆ ಒಣಗಿಸುವ ಹಗ್ಗವನ್ನೂ ಖಾಕಿ ಪ್ಯಾಂಟುಗಳನ್ನೂ ತೆಗೆದುಕೊಂಡು ಮೆಟ್ಟಲಿಳಿಯುವಾಗ ಗೊಣಗಿದ.

'ನಾಯೆಷ್ಟೇಳಿದೆ ಗೊತ್ತುಂಟಾ, ಬಾಲಾಮಣಿಯಮ್ಮೆತ್ರ. ಊರಿಂದ ಹುಡುಗೇರನ್ನು ತರ್ಬೇಡಿಂತ? ನಂಗಿವುಗಳನ್ನೆಲ್ಲ ಗೊತ್ತು. ಬ್ಯಾವರ್ಸಿಗಳು, ಸೂಳೇರು, ಮನೇಸೇರಿಸ್ಲಿಕ್ಕೆ ಯೋಗ್ಯರಲ್ಲ.'

ತಂಗಿಯ ಪರಿಚಾರಿಕೆ ಕಲ್ಲೂ ಎಂಬ ಯುವತಿ ತನ್ನ ಗಂಡನೊಂದಿಗೆ ಸಲ್ಲಪಿಸುತ್ತಿದ್ದಾಗ ನಾನು ಕೇಳಿದೆ.

'ಕಲ್ಲೂ ಸೂಳೆಯಾ?'

'ಇದ್ಯಾರು ಹೇಳಿದ್ದು? ಆ ಮುದುಕನೇ? ಬೇರ್ಯಾರೂ ನನ್ನ ಬಗ್ಗೆ ಬೇಡದ್ದು ಹೇಳಿಕ್ಕಿಲ್ಲ. ನಿಜ ಹೇಳಿ, ಯಾರು ನಿಮಗೆ ಈ ಮಾತು ಹೇಳಿಕೊಟ್ಟದ್ದು?'

ನಾನು ಕುಞಾತ್ತುವಿನ ಹೆಸರು ಹೇಳಲು ಇಷ್ಟಪಡಲಿಲ್ಲ. ಆತ ನನಗೆ ಹಳೆಯ ಕತೆಗಳನ್ನು ಹೇಳಿಕೊಡುತ್ತಿದ್ದ. ಆತ ಕಲ್ಲಿಕೋಟೆಯಲ್ಲಿ ಎ.ಆರ್.ಪಿ. ಎಂಬ ಸೈನ್ಯ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದನೆಂದೂ ಆಮೇಲೆ ಓಬ್ರಿ ಮೆನೋನ್‌ರ ತಂದೆತಾಯಿಯರ ಮನೆಯಲ್ಲಿ ಬಟ್ಲರಾಗಿದ್ದನೆಂದೂ ಒಮ್ಮೆ ಮೇಡಂ ಅನನಾಸಿನ ಹೆಸರು ಕೇಳಿದಾಗ ಮೇಡಂ ದಾಟೀಸ್ ಆಸ್‌ಫ್ರೂಟ್ ಎಂದು ಹೇಳಿದನೆಂದೂ ಇತ್ಯಾದಿ ವಿಷಯಗಳನ್ನು ಆ ಮುದುಕ ನನಗೆ ಹೇಳುತ್ತಿದ್ದ. ಒಂದು ದಿವಸ ತಂದೆಯ ತಮ್ಮ ಅಪ್ಪು ಚಿಕ್ಕಪ್ಪ ಎಲ್ಲ ಮಕ್ಕಳನ್ನೂ ಕುಞಾತ್ತುವನ್ನೂ 'ಬಂಧನ್' ಎಂಬ ಹೆಸರಿನ

ಒಂದು ಹಿಂದಿ ಸಿನಮಾಕ್ಕೆ ಕರೆದುಕೊಂಡು ಹೋದರು. ತನ್ನ ಟಿಕೇಟಿಗೆ ಆರಾಣೆ ಖರ್ಚಾಯಿತೆಂದು ತಿಳಿದ ಕುಞಾತ್ತು ಹಿಂದಿರುಗುವಾಗ ಅದನ್ನೇ ಹೇಳುತ್ತ ಎದೆಹೊಡೆದುಕೊಳ್ಳುತ್ತಿದ್ದ. ಅಷ್ಟು ಹಣಕ್ಕೆ ಎಪ್ಪತ್ತೆರಡು ಬೀಡಿ ಕೊಳ್ಳಬಹುದಾಗಿತ್ತೆಂದು ಕುಞಾತ್ತು ಹೇಳಿದ. 'ಆರು ಚಾದ ದುಡ್ಡಾಯ್ತು. ಚಾಯಷ್ಟೇ ಅಲ್ಲ, ಮೇಲೆ ಒಂದರ್ಧ ಚಾಯವೂ ಒಂದು ರೊಟ್ಟಿಯೂ..... ಬಾಲನ್ನಾಯರೇ, ಇನ್ನು ನನ್ನ್ನು ಇಂದಿ ಸಿನಿಮಾ ನೋಡ್ಲಿಕ್ಕೆ ಎಳ್ಕೊಂಡೋಗ್ಬೇಡ್ಯಾಯ್ತಾ. ಬದ್ಲಿಗೆ ಅದ್ರ ದುಡ್ಡು ಕೊಟ್ರೆ ಸಾಕು.'

ಕುಞಾತ್ತುವಿನ ಹಾಗೆ ಓರ್ವ ಅರಸಿಕನನ್ನು ತಾನದುವರೆಗೆ ಕಂಡಿರಲಿಲ್ಲವೆಂದು ಅಪ್ಪುಚಿಕ್ಕಪ್ಪ ನಮ್ಮೊಂದಿಗೆ ಹೇಳಿದರು:

'ಓರ್ವ ಕಲಾಪ್ರೇಮಿ ಎಂದು ಭಾವಿಸಿದ್ದೆ ನಾನು.'

ಕುಟ್ಟಿಯಕ್ಕ ಎಂಬ ಕರೆಯುವ ಹೆಸರುಳ್ಳ ನಮ್ಮ ಅತ್ತೆ ಲಕನೌದಿಂದ ವರ್ಷಕ್ಕೊಮ್ಮೆ ಟಪ್ಪಾಲಿನಲ್ಲಿ ತರಿಸುತ್ತಿದ್ದ 'ಓಟೊದಿಲ್‌ಬಹಾರ್'ನ ಒಂದು ಖಾಲಿ ಕುಪ್ಪಿ ತನ್ನ ಕೈಗೆ ಸಿಕ್ಕಿದ್ದಕ್ಕೇ ಇರಬೇಕು ನನ್ನ ಅಣ್ಣ ಪರಿಮಳದ ದ್ರವ್ಯಗಳನ್ನು ಸಿದ್ಧಗೊಳಿಸುವುದಕ್ಕೆ ತೀರ್ಮಾನಿಸಿದ್ದು. ತನ್ನ ಪ್ರಯೋಗಗಳು ಯಶಸ್ವಿಯಾದಲ್ಲಿ ಸೆಂಟ್ ನಿರ್ಮಿಸುವುದನ್ನು ದೊಡ್ಡ ಉದ್ಯೋಗವನ್ನಾಗಿ ಪರಿವರ್ತಿಸಬಹುದೆಂದು ಅಣ್ಣ ಹೇಳಿದ. ಯಾವ ವಸ್ತುವಿನಿಂದ ಸೆಂಟ್ ಉಂಟುಮಾಡಲು ಬಯಸುತ್ತಿ ಎಂದು ಕೇಳಿದಾಗ ಆ ರಹಸ್ಯವನ್ನು ನಾನು ಯಾರೊಂದಿಗೂ ಹಂಚಿಕೊಳ್ಳಲು ಸಿದ್ಧನಿಲ್ಲ ಎಂಬುದಾಗಿ ಅಣ್ಣ ಹೇಳಿದ. ನನಗೆ ಅಳು ಬಂತು. ಕೊನೆಗೆ ಅಜ್ಜಿಯ ಶಿಫಾರಸಿನ ಬಳಿಕ ಅಣ್ಣ ಆ ರಹಸ್ಯವನ್ನು ನನ್ನೊಂದಿಗೆ ಹಂಚಿಕೊಂಡ.

ನಾಲಪ್ಪಾಟ್ಟಿನಿಂದ ಬತ್ತದ ಹುಣೆಯಿಂದಲಾಗಿ ಆಚಾರಿಹಿತ್ತಲಿನ ಕಡೆ ನಡೆಯುವಾಗ ಚೆರುವತ್ತೂರಿನವರ ಬೇಲಿಯಲ್ಲಿ ಕಾಣುವ ಹೊನ್ನೆ ಮರದ ಹೂಗಳು ಕಾಯಿಗಳು ನೆಲದಲ್ಲಿ ಬಿದ್ದಿರುವುದು ಗೋಚರಿಸುತ್ತವೆ. ನನ್ನ ಅಣ್ಣ ಗೋಲಿ ಆಡುವುದಕ್ಕಾಗಿ ಹೊನ್ನೆಕಾಯಿಗಳನ್ನು ಸಂಗ್ರಹಿಸುತ್ತಿದ್ದ. ಹಸಿರು ಬಣ್ಣದ ಹೊರಸಿಪ್ಪೆಯನ್ನು ಕೆರೆದು ಅವುಗಳನ್ನು ಬಿಸಿಲಲ್ಲಿಟ್ಟು ಒಣಗಿಸಿದರೆ ಅವುಗಳು ಗೋಲಿಗಳಾಗಿ ಮಾರ್ಪಡುತ್ತಿದ್ದುವು. ಕೆಂಪು ಕಪ್ಪು ಬಣ್ಣದ ಮರದ ಪೆಟ್ಟಿಗೆಗಳಲ್ಲಿ ಅಣ್ಣ ತನ್ನ ಹೊಳೆಯುವ ಗೋಲಿಗಳನ್ನೂ ಹೊನ್ನೆಕಾಯಿ ಗೋಲಿಗಳನ್ನೂ ಶೇಖರಿಸಿಡುತ್ತಿದ್ದ. ಅವು ಯಾವತ್ತಾದರೊಮ್ಮೆ ಪ್ರಯೋಜನಕ್ಕೆ ಬೀಳುತ್ತವೆ ಎಂದು ಅಣ್ಣ ನನ್ನೊಂದಿಗೆ ಹೇಳುತ್ತಿದ್ದ.

'ಹೊನ್ನೆಕಾಯಿಂದ ಸೆಂಟು ಮಾಡ್ತೋದು' ಅಣ್ಣ ಹೇಳಿದ.

'ಅದು ವಾಸ್ನೆ ಬರ್ಲಿಕ್ಕಿಲ್ವ ?' ನಾನು ಕೇಳಿದೆ. ನನ್ನ ದಡ್ಡತನವನ್ನು ನೆನೆದೋ ಎಂಬಂತೆ ಅಣ್ಣ ಅಪಹಾಸ್ಯದ ನಗೆ ನಕ್ಕ.

'ವಾಸ್ನೆ ಬರ್ಲಿಕ್ಕಿಲ್ಲ. ಪರಿಮಳ ಬರ್ತದೆ. ಬಾಟ್ಲಿಗೆ ಹಾಕಿ ಒಂದೊಂದು ರೂಪ್ಯಾಗೆ ಮಾರ್ಬೋದು.'

'ಕೊಳ್ಳೋರ್ಯಾರು ?'

'ಕುಟ್ಟಿಯಕ್ಕ ಕೊಂಡಾರು. ಕುಟ್ಟಿಯಕ್ಕ ಅದನ್ನು ಹಚ್ಚಿದರೆ ಬಾಕಿದ್ದೋರೆಲ್ಲ ಕೊಂಡುಕೊಂಡು ಹಚ್ಯಾರು.'

ಅಂದು ರವಿವಾರವಾಗಿತ್ತು. ಸಮಯ ನಷ್ಟ ಮಾಡದೆ ಸೆಂಟ್ ನಿರ್ಮಾಣ ಪ್ರಾರಂಭಿಸಿ ಬಿಡುವುದಕ್ಕೆ ಅಣ್ಣ ನಿಶ್ಚಯಿಸಿದ. ಮಾರಾತ್ತಾಟ್ಟಿನ ತಮ್ಮ ಆಡಲು ಬರುವುದಕ್ಕೆ ಮೊದಲೇ ಹೊನ್ನೆಕಾಯಿಗಳನ್ನು ಹೆಕ್ಕಿ ತರಲು ಅಣ್ಣ ನನಗೆ ಹೇಳಿದ.

'ಯಾರೂ ಕಾಣಬಾರ್ದು.'

ನಾನು ಬಗ್ಗಿ ಬಗ್ಗಿ ಹೊನ್ನೆಕಾಯಿಗಳನ್ನು ಹೆಕ್ಕುವುದು ಚೆರುವತ್ತೂರಿನ ಕೇಶವನ್ ನಾಯರ್ ಕಂಡರು.

'ಯಾಕೆ ಮಗೂ ಹೊನ್ನೆಕಾಯಿ ಹೆಕ್ಕೋದು? ಹುಡುಗೇರೂ ಗೋಲಿ ಆಡ್ತಾರಾ ?' ಅವರು ನಗುತ್ತಾ ಕೇಳಿದರು.

'ನನಗೂ ಗೋಲಿಯಾಡೋದಕ್ಕೆ ಗೊತ್ತು' ನಾನು ಹೇಳಿದೆ.

'ಮಣ್ಣಿನಲ್ಲಿ ಗೋಲಿ ಆಡಿದರೆ ಕೈಯಲ್ಲಿ ತುರಿಕೆ ಕಜ್ಜಿ ಬರುತ್ತಾಯ್ತಾ? ಜಾಗ್ರತೆ. ಈಗ ಅಂಬಾಳತ್ತಿನ ಉಣ್ಣಿಯ ಸ್ಥಿತಿ ನೋಡ್ಲಿಲ್ವಾ ? ಮೈಯಲ್ಲಿಡೀ ಕಜ್ಜಿ. ಮಣ್ಣಾನ್ನ ಮದ್ದು. ಗಂದಕ ಹಚ್ಚಿ ಮುಂಡನ್ನು ಕುತ್ತಿಗೆಗೆ ಕಟ್ಟಿ ನಡೆಯೋದು ಕಾಣ್ಲಿಲ್ವೆ ? ಹಾಗೇ ನಿಂಗೂ ಮದ್ದು ಹಚ್ಚಿ ಮುಂಡು ಕುತ್ತಿಗೆಗೆ ಕಟ್ಟಿ ನಡೀಬೇಕೂಂತ ಆಸೆಯಾ ?'

'ಇಲ್ಲ' ನಾನು ಹೇಳಿದೆ.

'ಹುಡುಗೇರು ಗೋಲಿ ಆಡ್ಬಾರ್ದು. ಹುಡುಗೇರು ಮಣ್ಣು ಬಾಚಿ ಆಡೋದು ಒಳ್ಳೇದಲ್ಲ. ಕೈಯಲ್ಲೆಲ್ಲ ಮಣ್ಣಾಗ್ತದೆ. ಮತ್ತೆ ತುರಿಕೆಕಜ್ಜಿ ಆಗ್ತದೆ. ಮತ್ತೆ ನೋಡ್ಲಿಕ್ಕೂ ಗಲೀಜು. ಕಜ್ಜಿ ಆದಲ್ಲೆಲ್ಲ ಕಪ್ಪು ಕಲೆ ನಿಲ್ತದೆ. ನಿಂಗೊತ್ತಿಲ್ವಾ ಮಗೂ ಅದೆಲ್ಲ ?'

ನಾನು ಏನೂ ಹೇಳಲಿಲ್ಲ. ಹನ್ನೆರಡು ಹೊನ್ನೆಕಾಯಿಗಳನ್ನು ನಾನು ನನ್ನ ಫ್ರಾಕಿನಲ್ಲಿ ಹಾಕಿ ಮಡಚಿ ನಾಲಪ್ಪಾಟ್ಟಿಗೆ ಓಡಿಬಂದೆ. ಅಣ್ಣ ಬಡಗು ಮೂಲೆಯ ಬಚ್ಚಲು ಕೋಣೆಯಿಂದ ಕರೆದು ಹೇಳಿದ:

'ನಾನು ಇಲ್ಲಿದ್ದೇನೆ.'

ಬಡಗು ಕೋಣೆಯಲ್ಲಿ ರಾತ್ರಿ ಕೆಲಸದವರು ಮಾತ್ರ ನಿದ್ರಿಸುತ್ತಿದ್ದರು. ಅವರು ಬಚ್ಚಲು ಮನೆಯಲ್ಲಿ ಯಾವತ್ತೂ ಮೂತ್ರ ವಿಸರ್ಜನೆ ಮಾಡುತ್ತಿರಲಿಲ್ಲ. ಬಚ್ಚಲು ಮನೆಯ ಕಿಟಕಿಯ ದಾರಂದದ ಮೇಲೆ ಫ್ರೇಮಿಲ್ಲದ ಒಂದು ಕನ್ನಡಿಯ ತುಂಡೂ ಕಾಡಿಗೆಯ ಕರಡಿಗೆಯೂ ಕೆಂಪು ನೇರಳೆ ಬಣ್ಣಗಳ ಕುಂಕುಮದ ಎರಡು ಕಾಗದದ ಕಟ್ಟುಗಳೂ ಇದ್ದುವು. ಗೋಡೆಯ ಮೇಲೆ ಕಾಡಿಗೆಯ ಕಪ್ಪೂ ಕುಂಕುಮದ ಕೆಂಪೂ ಕಲೆಗಳಾಗಿ ಉಳಿದುಕೊಂಡಿದ್ದವು. ಆ ಕಿಟಕಿಯ ದಾರಂದದ ಮೇಲೆ ನೀರು ತುಂಬಿದ ಎರಡು ಜಾಮ್‌ನ ಕುಪ್ಪಿಗಳನ್ನು ನಾನು ಕಂಡೆ. ಅಣ್ಣನ ಕೈಯಲ್ಲಿ ಕೋಣನ ಕೊಂಬಿನ ಹಿಡಿಯುಳ್ಳ ಒಂದು ಚೂರಿಯಿತ್ತು.

'ಸೆಂಟ್ ಮಾಡೋದಕ್ಕೆ ಪ್ರಾರಂಭಿಸುವ' ಅಣ್ಣ ಹೇಳಿದ.

'ಈಗ್ಲಾ ?'

'ಆ ಬಾಗಿಲನ್ನು ಮುಚ್ಚಿ ಚಿಲಕಹಾಕುವ. ಯಾರೂ ಕಾಣೋದು ಬೇಡ.' ಅಣ್ಣ

ಹೊನ್ನೆಯ ಸಿಪ್ಪೆ ಒಡೆದು ಕಾಯಿಗಳನ್ನು ಹೊರತೆಗೆದ. ಅವನ್ನು ಜಜ್ಜಿ ನೀರಿಗೆ ಹಾಕಿದ. ಸ್ವಲ್ಪ ಉಪ್ಪನ್ನೂ ಆ ನೀರಿಗೆ ಸೇರಿಸಿ ತುಂಬ ಹೊತ್ತು ಆ ನೀರನ್ನು ಕುಲುಕಿದ.

'ಇದು ದೊಡ್ಡ ವ್ಯಾಪಾರವಾಗ್ಬಹುದು. ಲಕ್ನೋದ ಓಟೋದಿಲ್‌ಬಹಾರಿನ ವ್ಯಾಪಾರಿಗಳ ಹಾಗೆ ನಾವೂ ದೊಡ್ಡ ವ್ಯಾಪಾರಿಗಳಾಗ್ಬೋದು.'

'ಈ ಸೆಂಟ್ ಓಟೋದಿಲ್‌ಬಹಾರ್ ಆಗಿಬರ್ತೋದಾ ?'

ಅಣ್ಣಾ ನಕ್ಕ.

'ಇದರ ಹೆಸರು ಓಟೋದಿಲ್‌ಬಹಾರ್ ಎಂದಲ್ಲ. ಇದರ ಹೆಸರು ಮೋಹನ್‌ದಾಸ್ ಸೆಂಟ್.'

'ಅಲ್ಲಿ ನನ್ನ ಹೆಸ್ರಿಲ್ಲ, ಅಲ್ವೆ ?' ನಾನು ನಿರಾಶೆಯೊಂದಿಗೆ ಕೇಳಿದೆ.

'ಈಗ ನಿನ್ನ ಹೆಸರಿಡೋದಿಲ್ಲ ಅಮ್ಮಿ. ಎರಡನೇ ಸೆಂಟಿಗೆ ನಿನ್ನ ಹೆಸರಿಡುವ.'

ಸೆಂಟ್‌ತುಂಬಿಸಿದ ಕುಪ್ಪಿಗಳನ್ನು ಬಚ್ಚಲು ಕೋಣೆಯಲ್ಲಿಟ್ಟು ಅವಕ್ಕೆ ಒಂದು ಬುಟ್ಟಿಮುಚ್ಚಿ ನಾವು ಆಡುವುದಕ್ಕೆ ಅಂಗಳಕ್ಕೆ ಹೋದೆವು. ನಾಗಬನದ ದಿಣ್ಣೆಯ ಮೇಲೆ ಮಾರಾತ್ತಾಟ್ಟಿನ ತಮ್ಮನೂ ತಂಗಂಳೂ ಕುಳಿತಿದ್ದರು.

'ಸೆಂಟು ತಯಾರಿಸೋ ಕೆಲ್ಸ ಎಲ್ಲೀವರೆಗೆ ಬಂತು ?' ತಮ್ಮ ಕೇಳಿದ.

ನಾನೂ ಅಣ್ಣನೂ ದಿಗ್ಭ್ರಮೆಗೊಂಡವರಂತೆ ನಿಶ್ಚಲರಾಗಿ ನಿಂತೆವು.

'ಹೊನ್ನೆಕಾಯಿಯನ್ನು ನೀರಲ್ಲಿ ಹಾಕಿದ್ರೆ ಅದು ವಾಸ್ನೆ ಬರ್ಲಿಕ್ಕಿಲ್ವಾ ? ವಾಸ್ನೆ ಇರೋ ಸೆಂಟನ್ನು ಯಾರಾದ್ರೂ ಕೊಳ್ತಾರಾ ?' ತಮ್ಮ ನಗುತ್ತಾ ಕೇಳಿದ.

'ನಿಂಗೆ ಹೇಗೆ ಗೊತ್ತಾಯ್ತು ? ನಾನು ಸೆಂಟ್ ಮಾಡ್ತಿದ್ದೇನೆಂತ' ಅಣ್ಣಾ ಕೇಳಿದ.

'ನಾವು ಕಿಟಕಿಯ ಹೊರಗೆ ಗೊಬ್ಬರದ ಗುಂಡಿ ಹತ್ರ ಅಡಗಿ ನಿಂತು ನಿನ್ನ ಮಾತುಗಳನ್ನು ಕೇಳ್ತಿದ್ದೆವಾಯ್ತಾ ? ಈ ವ್ಯಾಪಾರ ಯಾವ ಪ್ರೇಜನಕ್ಕೂ ಇಲ್ಲ. ದುರ್ನಾತ ಬರೋ ಸೆಂಟು ಯಾರು ಕೊಳ್ತಾರೆ ?'

'ದುರ್ನಾತ ಬರದಿರ್ಲಿಕ್ಕೆ ನಾನು ಒಂದು ವಸ್ತುವನ್ನು ಕುಪ್ಪೀಲಿ ಹಾಕಿದ್ದೇನೆ' ಅಣ್ಣಾ ಹೇಳಿದ.

'ನಿಜವಾ. ದುರ್ನಾತ ಬರದಿರ್ಲಿಕ್ಕೆ ಒಂದು ವಸ್ತುವನ್ನು ಕುಪ್ಪಿಯಲ್ಲಿ ಹಾಕಿದ್ದೇವೆ.' ನಾನು ಕುಣಿದಾಡುತ್ತಾ ಹೇಳಿದೆ.

'ಹೊನ್ನೆಕಾಯಿಂದ ಸೆಂಟ್ ಮಾಡ್ತೇವೇಂತ ಇಷ್ಟು ಜಂಬೆಲ್ಲ ಬೇಡಾಮ್ಮಿ' ತಂಗಂ ಮ್ಲಾನವದನೆಯಾಗಿ ಹೇಳಿದಳು.

'ಸರಿಯಾದ ಸೆಂಟು ನಾನು ಮಾಡಿಕೊಡ್ತೇನ ಮೋಹನಾ' ತಮ್ಮ ಹೇಳಿದ.

'ನಿನ್ನ ಸೆಂಟನ್ನು ನೀನೇ ಮಾಡ್ಕೊ' ಅಣ್ಣಾ ಹೇಳಿದ.

'ನಾಪಿಬ್ರೂ ಸೇರ್ಕೊಂಡು ವ್ಯಾಪಾರ ಪ್ರಾರಂಭಿಸುವ. ನನಗೆ ಹೂಗಳಿಂದ ಸೆಂಟು ಮಾಡ್ಲಿಕ್ಕೆ ಗೊತ್ತುಂಟು. ಸ್ವಲ್ಪ ಪಾರಿಜಾತವನ್ನೂ ಸ್ವಲ್ಪ ಮಲ್ಲಿಗೆಯನ್ನೂ ಸ್ವಲ್ಪ ಸಂಪಿಗೆಯನ್ನೂ ಸೇರ್ಸಿ ಮಿಶ್ರ ಮಾಡಿ ಎಣ್ಣೆಗೆ ಹಾಕ್ಬೇಕು. ಆಮೇಲೆ ಬಿಸ್ಲಲ್ಲಿಡ್ಬೇಕು. ಮೂರ್ನಾಕು ದಿವ್ಸ ಕಳ್ದು ಸೋಸ್ಬೇಕು. ಆಗ ಒಳ್ಳೆ ಪರಿಮಳದ ಸೆಂಟಾಗ್ತದೆ.'

'ನೀನು ಪರೀಕ್ಷೆ ಮಾಡಿ ನೋಡಿದ್ದೀಯಾ ?'

'ಇಲ್ಲ. ಆ ತ್ಯಾಗಾನಂದನ್ ನಂಗೆ ಹೇಳಿಕೊಟ್ಟದ್ದು.'

'ಯಾವ ತ್ಯಾಗಾನಂದನ್?'

'ಕೋಟ್ಟಯಂದಿಂದ ಮದ್ದೆ ಮಾಡಿದ ತ್ಯಾಗಾನಂದನ್. ಅವ ಒಮ್ಮೆ ಮಾಡಿದ್ದಾನಂತೆ.'

'ಆ ಸೆಂಟನ್ನು ನೀನೇ ಮಾಡಾಯ್ತಾ. ನನ್ನ ಸೆಂಟನ್ನು ನಾನೇ ಮಾಡ್ತೇನೆ.'

ತಮ್ಮನೂ ತಂಗಿಯೂ ಅಂದು ಆಟ್ಟಿಕ್ಕೆ ಸೇರಲಿಲ್ಲ. ಅವಮಾನಿತರಾದವರಂತೆ ಸ್ವಲ್ಪ ಹೊತ್ತು ಮಾತನಾಡದೆ ಕುಳಿತರು. ಆಮೇಲೆ ಮೌನವನ್ನು ಜೀರ್ಣಸಲಾಗದೆ ಮಾರಾತ್ತಾಟ್ಟಿಗೆ ಹಿಂದಿರುಗಿದರು.

'ಹೂವ್ನಲ್ಲಿ ಮಾಡೋ ಸೆಂಟನ್ನು ಯಾರು ಬೇಕಾದ್ರೂ ಮಾಡ್ಬೋದು. ಎಲ್ಲಾ ಅಂಗಡೀಲೂ ಅದಿರ್ತದೆ. ನಮ್ಮ ಸೆಂಟು ಎಲ್ಲೂ ಸಿಗ್ಲಿಕ್ಕಿಲ್ಲ. ನಮ್ಮ ಸೆಂಟ್ ಸಿಗ್ಬೇಕಿದ್ರೆ ನಮ್ಮ ಹತ್ರಕ್ಕೆ ಬರ್ಬೇಕು. ಅಲ್ವೆ?' ಅಣ್ಣ ನನ್ನೊಂದಿಗೆ ಹೇಳಿದ.

ನಾನು ತಲೆ ಕುಲುಕಿದೆ.

ಎರಡೋ ಮೂರೋ ದಿವಸ ಕಳೆಯಬೇಕಿದ್ದರೆ ದೇವಕಿ ಬಡಗು ಮೂಲೆಯ ಕತ್ತಲೆಯಲ್ಲಿ ನಿಂತುಕೊಂಡು ಗಟ್ಟಿಯಾಗಿ ಕೂಗಿ ಹೇಳಿದಳು:

'ಅಯ್ಯೋ ನನ್ನಮ್ಮೋ ವಾಸ್ನೇಲಿ ಕೂಡ್ಪಪ್ಪೋ.'

ಉಣ್ಣಿಮಾಯ, ಶಂಕರನ್ ಮೊದಲಾದವರು ಬಡಗು ಮೂಲೆಯ ಕಡೆಗೆ ತಲೆಯೆತ್ತಿ ನೋಡಿದರು.

'ಇಲಿ ಸತ್ತೋಯ್ತೂಂತ ತೋರ್ತದೆ' ಉಣ್ಣಿಮಾಯಿ ಹೇಳಿದಳು.

'ಆ ತೊಟ್ಟೆ ಬುಟ್ಟಿ ಎಲ್ಲ ಅಲ್ಲಿಂದ ತೆಗೆದು ಬಿಸಾಡಿ ಚೆನ್ನಾಗಿ ಒಂದು ಹಿಡಿಸೂಡಿ ತೆಗೆದು ಗುಡ್ಸಿ. ಎಂತ ಸತ್ತು ಬಿದ್ದಿದೆ ಎನ್ನೋದು ಗೊತ್ತಾದೀತಲ್ಲ' ಶಂಕರನ್ ಹೇಳಿದ.

'ಇಲಿ ಸತ್ತ ವಾಸ್ನೆ ಅಲ್ಲ. ಬೇರೇ ಒಂದು ವಾಸ್ನೆ. ನಾಯಿ ಹೇತಿಬರ್ೋದಾಂತ ಸಂಶಯ' ಮುತ್ತಜ್ಜಿ ಬಡಗು ಮೂಲೆಯ ಕಡೆಯಿಂದ ಒಳಬರುತ್ತಾ ಹೇಳಿದರು.

'ಇಲ್ಲಿಗೆ ನಾಯಿಯೇನೂ ಬರ್ಲಿಲ್ಲ' ದೇವಕಿ ಹೇಳಿದಳು.

'ಆ ಮಣ್ಣಾಂತರದ ನಾಯಿಗಳು ಬಂದಿಬರ್ೋದು. ಯಾವಾಲ್ಲೂ ಬಡಗು ದಿಕ್ಕಿನ ಬಾಗಿಲು ತೆರೆದೇ ಇರ್ತದೆ. ನಾ ಹೇಳಿದ್ರೆ ಯಾರು ಕೇಳ್ತಾರೆ?'

ಮುತ್ತಜ್ಜಿ ಹೇಳಿದರು.

'ಇನ್ನು ಆ ನಾಯ್ಗಳು ಈ ಕಡೆ ಅಂಗಳಕ್ಕೆ ಬಂದ್ರೆ ನಾನು ಕಲ್ಲು ಬಿಸಾಡಿ ಅವುಗಳ ಕಾಲು ಮುರ್ದೇನು' ಶಂಕರನ್ ಹೇಳಿದನು.

'ಕಾಲೇನೂ ಮುರಿಬೇಡ. ಮೂಕ ಪ್ರಾಣಿಗಳಿಗೆ ನಾವು ಉಪದ್ರ ಮಾಡಿದ್ರೆ ಅದ್ರ ಫಲ ಈ ಜನ್ಮದಲ್ಲೇ ಅನುಬೋಸ್ಬೇಕಾದೀತು ಶಂಕರಾ.'

'ಇಲ್ಲಿ ನಾಯಿ ಹೇಲೂ ಇಲ್ಲ, ಬೆಕ್ಕಿನ ಹೇಲೂ ಇಲ್ಲ,' ದೇವಕಿ ಹಿಡಿಸೂಡಿಯನ್ನು ಬಿಡಿಸುತ್ತಾ ಹೇಳಿದಳು: 'ಈ ಉರುಳಿಗಳ ಎಡೇಲ್ಲೇನಾದರೂ ಹೆಗ್ಗಣ ಸತ್ತು ಬಿದ್ದಿಬರ್ೋದೋ ನೋಡ್ತೇನೆ'

'ಹೆಗ್ಗಣ ಹೇಗೆ ಬಡಗು ಮೂಲೆಗೆ ಹಿರೋದು ಅಮ್ಮೋರೆ? ಯಾವ್ದಾದ್ರೂ ಸುಂಡಿಲಿ ಸತ್ತು ಬಿದ್ದಿಬರ್ೋದು' ಉಣ್ಣಿಮಾಯ ಹೇಳಿದಳು.

'ಬಡಗು ಕೋಣೆಯ ಕಂಡೇಂದ ವಾಸ್ನೆ ಬರೋದು' ಮುತ್ತಜ್ಜಿ ಹೇಳಿದರು.

ಅಣ್ಣ ದಿಗ್ಭ್ರಾಂತನಾಗಿ ನನ್ನ ಮುಖ ನೋಡಿದ. ನಾನು ಬಚ್ಚಲು ಕೋಣೆಗೆ ಹೋಗಿ ಕುಪ್ಪಿಗಳನ್ನು ಪರಿಶೋಧಿಸಿದೆ. ಅವುಗಳ ಮುಚ್ಚಳ ರಟ್ಟಿ ಹೋಗಿದ್ದವು. ನೀರಿನಲ್ಲಿ ಬಿಳಿಯ ಬೂದಿ ತೇಲುವುದು ಕಾಣಿಸಿತು. ಕೋಳಿಮೊಟ್ಟೆ ಒಡೆದಾಗ ಕೆಲವೊಮ್ಮೆ ಕಾಣಸಿಗುವ ಪೊರೆಯನ್ನು ನಾನು ನೀರಿನಲ್ಲಿ ಕಂಡೆ. ಕುಪ್ಪಿ ತೆಗೆದು ಮೂಸಿ ನೋಡಿದಾಗ ಆ ವಾಸನೆ ನನ್ನ ಸಕಲ ನರನಾಡಿಗಳನ್ನು ದುರ್ಬಲಗೊಳಿಸಿತು.

'ಸಹಿಸ್ಲಿಕ್ಕಾಗೋದಿಲ್ಲಾಯ್ತಾ ?' ನಾನು ಅಣ್ಣನಿಗೆ ಹೇಳಿದೆ.

'ಕೆಲವ್ರಿಗೆ ಈ ರೀತಿಯ ಸೆಂಟೇ ಇಷ್ಟ' ಅಣ್ಣ ಹೇಳಿದ.

'ಮಕ್ಕಿಲ್ಲಿ ಕುಪ್ಪೀಲಿ ಎಂತೋ ಮಾಡಿಟ್ಟಿದ್ದಾರೆ. ಅದ್ರದ್ದೇ ವಾಸ್ನೆ' ಉಣ್ಣೆಮಾಯಿ ಹೇಳಿದಳು. ಅವಳು ಒಂದು ಕುಪ್ಪಿ ತೆಗೆದು ಬೆಳಕಿನಲ್ಲಿ ಪರಿಶೋಧಿಸಿದಳು.

'ಅಯ್ಯೋ, ಇದ್ರೊಳಗೆ ಬಿಳಿ ಹುಳದಾಗೆ ಎಂತೋ ಒಂದು ಕಾಣ್ತಾ ಉಂಟು' ಅವರು ಹೇಳಿದರು. ಎಲ್ಲರೂ ಬಚ್ಚಲು ಮನೆಗೆ ಬಂದಾಗ ಅಣ್ಣ ಕುಪ್ಪಿಗಳನ್ನು ತೆಗೆದು ಹೊರಗಿನ ಗುಂಡಿಗೆ ಸಿಟ್ಟಿನಿಂದ ಬಿಸಾಡಿದ.

'ಸೆಂಟು ಹೋಯ್ತು. ನಾನೆಂದೆ: ನೀವೆಲ್ಲಾ ಸೇರಿ ನಮ್ಮ ಬಿಸ್‌ನೆಸ್ ಇಲ್ಲದಾಗೆ ಮಾಡಿದ್ರಿ.' ಆಮೇಲೆ ಅಣ್ಣ ಹೇಳಿದ: 'ಸೆಂಟ್ ಮಾಡ್ಲಿಕ್ಕೆ ಪ್ರಯತ್ನಪಟ್ಟೆವು. ಸೆಂಟಾಗ್ಲಿಲ್ಲ. ಆದ್ರೆ ಆ ಕುಪ್ಪಿಯಲ್ಲಿ ಜೀವ ನಿರ್ಮಾಣವಾಯಿತಲ್ಲ. ಬಿಳಿಬಿಳಿಯ ಎಂತದೋ ಅದರಲ್ಲಿ ಹೊರಳಾಡೋದನ್ನು ನೋಡ್ಲಿಲ್ವೆ ?

ನಾನು ತಲೆ ಅಲುಗಿಸಿದೆ.

'ಹಾಗೆಯೇ ಜೀವ ನಿರ್ಮಾಣ ಮಾಡೋದು. ಇನ್ನೂ ಸ್ವಲ್ಪ ಪ್ರಯತ್ನಿಸಿದ್ರೆ ಹುಳಕ್ಕೆ ಬದಲಿಗೆ ಮನುಷ್ಯನನ್ನೂ ಮಾಡ್ಬಹುದು. ಕುಪ್ಪಿ ದೊಡ್ಡು ಬೇಕು. ನಾನು ದೊಡ್ಡೋನಾದ್ರೆ ಒಂದು ಲೆಬೋರೇಟ್ರಿ ಪ್ರಾರಂಭ ಮಾಡ್ತೇನೆ. ಒಂದೊಂದೇ ಪ್ರಯೋಗಗಳನ್ನು ಮಾಡ್ಲಿಕ್ಕೆ.'

'ನಾನೂ ಬರ್ತೇನೆ ಸಹಾಯ ಮಾಡ್ಲಿಕ್ಕೆ' ನಾನು ಹೇಳಿದೆ.

'ನಿಂಗದೆಲ್ಲ ಆಗ್ಲಿಕ್ಕಿಲ್ಲಾಮ್ಮಿ. ಲೆಬೋರೇಟರಿಯಲ್ಲಿ ಕೆಲವೊಮ್ಮೆ ಸ್ಫೋಟ ಉಂಟಾದೀತು. ನಿಂಗದೆಲ್ಲ ಕಂಡ್ರೆ ಹೆದ್ರಿಕೆ ಆದೀತು.'

'ಹೊನ್ನೆ ಕಾಯಿ ಹೆಕ್ಕಿ ತರ್ಲಿಕ್ಕೆ ನಾನು ಬೇಡ್ವೆ ?' ನಾನು ಕಣ್ಣೀರೊರಸುತ್ತ ಕೇಳಿದೆ.

'ವಿಜ್ಞಾನಿಗಳಿಗೆ ಹೊನ್ನೆಕಾಯಿ ಯಾಕೆ ?' ಅಣ್ಣ ಗಟ್ಟಿಯಾಗಿ ನಗುತ್ತ ನನ್ನನ್ನು ಪ್ರಶ್ನಿಸಿದ.

ಕಯ್ಯಾವಿಯ ಮುಗುಳ್ನಗೆ ಆಕರ್ಷಕವಾದದ್ದು ಸಾಲು ಮೀರಿ ನಿಂತ ಒಂದು ಆಣೆಹಲ್ಲಿನಿಂದ. ಅವಳು ನಗುವಾಗ ಆ ನಗುವಿನ ಲಾವಣ್ಯ ನೋಡಿ ಆಸ್ವಾದಿಸುವುದಕ್ಕೆ ಹುಡುಗರೂ ಹುಡುಗಿಯರೂ ಮಾತ್ರವಲ್ಲ, ಟೀಚರೂ ಹತ್ತಿರ ಬಂದು ನಿಂತರು. ಕಯ್ಯಾವಿಗೆ ನಗುವುದಕ್ಕೆ ಪ್ರತ್ಯೇಕ ಕಾರಣಗಳೇನೂ ಬೇಕಾಗಿರಲಿಲ್ಲ. ಶಾಲೆಯ ಪಶ್ಚಿಮ ಭಾಗದಲ್ಲಿ ಅಯ್ಯಪ್ಪುವಿನ ಹಿತ್ತಲಿನಲ್ಲಿದ್ದ ಬಾಳೆಯ ಗೊನೆಯ ಮೇಲೆ ಕುಳಿತುಕೊಳ್ಳುವ ಕಾಗೆಯ ಚೇಷ್ಟೆಗಳೂ ಆಕೆಯನ್ನು ನಗಿಸಿದವು.

ಕಾಗೆಯನ್ನವಳು ಕಾಗೆಶ್ಯಾರ್ ಎಂದು ಕರೆದಳು. ಗೋಯಿಶ್ಯಾರ್ ಎಂದು ಕರೆಯುವ ಹಾಗೆ ಕಾಗೆಶ್ಯಾರ್.

ನೋಂಬಿನ ತಿಂಗಳು ಬಂದಾಗ ಕಯ್ಯಾವಿ ಎರಡು ಪೆಟ್ಟಿಗೆ ಕುಪ್ಪಿ ಬಳೆ ಕೊಂಡುಕೊಂಡಳು. ಹಸಿರು, ನೀಲ, ಕೆಂಪು, ಹಳದಿ ಒಂದರೆಡೆಗೊಂದರಂತೆ ಮಿಶ್ರಮಾಡಿ ಕೈಯಲ್ಲಿ ತೊಟ್ಟುಕೊಂಡು ಅವಳು ಶಾಲೆಗೆ ಬಂದಳು.

'ಎಡಗೈಲಿ ಇಪ್ಪತ್ನಾಲ್ಕು ಬಳೆ. ಬಲಗೈಲಿ ಇಪ್ಪತ್ಮೂರು. ತೋಡಿಗೆ ಬಿದ್ದಾಗ ಒಂದು ಒಡೆದು ಹೋಯಿತು' ಅವಳು ತನ್ನ ಉರುಟಾದ ಕೈಗಳನ್ನು ಪ್ರದರ್ಶಿಸುತ್ತಾ ಹೇಳಿದಳು. ಬಾಯಲ್ಲಿ ಜೊಲ್ಲುರಸವಿಟ್ಟುಕೊಂಡು ಮಾತನಾಡುವುದು ಕೈಯಾವಿಯ ಅಭ್ಯಾಸ. ನಡುನಡುವೆ ಅವಳು ಹೊಯ್ಗೆಗೆ ಉಗುಳುತ್ತಿದ್ದಳು. ಮತೇತಿಹಾಸಗಳಲ್ಲಿನ ಹುತಾತ್ಮರುಗಳ ಮುಖಭಾವವನ್ನು ಆ ಘಟ್ಟದಲ್ಲಿ ಅವಳು ವ್ಯಕ್ತಪಡಿಸುತ್ತಿದ್ದಳು.

'ಎಂಜಲು ನುಂಗಬಾರದು' ಅವಳು ಹೇಳಿದಳು.

'ನಿಮ್ಮ ಜಾತ್ಯೋರು ಮನೆ ಹೊರಗೆ ನಿಂತು ಒಳಕ್ಕೆ ಉಗುಳ್ತಾರೇಂತ ಒಬ್ರು ಹೇಳಿದ್ರು. ಅದು ಸರಿಯಾ?' ಮಣಿಕಂಠೇಶ್ವರ ದೇವಸ್ಥಾನದ ಪರಿಸರದಿಂದ ಬರುತ್ತಿದ್ದ ಒಬ್ಬ ಹುಡುಗ ಕೈಯಾವಿಯನ್ನು ಕೇಳಿದ. ಕೈಯಾವಿಯ ಮುಖ ಕೆಂಪಾಯಿತು. ಪ್ರಶ್ನೆ ಕೇಳಿದಾತನ ಹಣೆಯ ಮೇಲಿದ್ದ ಗಂಧದ ತಿಲಕವನ್ನೂ ನೀಲಿ ಹಾಕಿ ಒಗೆದುಟ್ಟಿದ್ದ ಮುಂಡನ್ನೂ ಕೈಯಾವಿ ತಿರಸ್ಕಾರದಿಂದ ನೋಡಿದಳು.

'ನಿನ್ನ ಜಾತಿ ಹೇಲು ತಿನ್ತದೇಂತ ಕೇಳಿದೆ. ಅದು ಶರಿಯಾ?'

'ಯಾರು ಈ ಅಸಂಬದ್ಧ ಹೇಳಿದ್ದು? ನಾಯರ್‌ಗಳನ್ನು ಅವಮಾನಿಸೋದಕ್ಕೆ ಉದ್ದೇಶಪೂರ್ವಕ ಹೇಳಿದ ಸುಳ್ಳು. ಹಾಗೆ ಹೇಳಿದೋರ ಹೆಸ್ರು ಹೇಳ್ಬೋದಾ?'

'ಅದ್ರ ಅನುಭವ ಇರೋ ಒಬ್ಳು ನಾಯರ್‌ಚಿ ಹೇಳಿದ್ದು. ದಿವ್ಸಾಗ್ಲೂ ತಿನ್ತಾರೇಂತ ಹೇಳಿದ್ಳು.'

'ಸುಳ್ಳು, ಖಂಡಿತ ಸುಳ್ಳು. ಹೇಳಿದೋರ ಹೆಸ್ರೇಳ್ಬೋದಾ?'

'ನಂಗೀ ನಾಯರ್‌ಚಿಗಳ ಹೆಶ್ರೆಲ್ಲ ನೆಂಪಲ್ಲಿರೋದಿಲ್ಲ.'

'ಕೈಯಾವಿ ಕುಳೂಸ್ ಬಿಟ್ಟಿದ್ದಾಗಿರ್ಬೋದು, ನಾಯರ್‌ಗಳನ್ನು ಅವಮಾನಿಸೋದಕ್ಕೆ.'

ಕೈಯಾವಿ ಗಟ್ಟಿ ನಕ್ಕಳು.

'ನಾವು ಕೂಳೂಶ್ ಬಿಡ್ಲಿಕ್ಕಿಲ್ಲ ಮನುಷ್ಯಾ' ಅವಳು ಹೇಳಿದಳು.

ಕಯ್ಯಾವಿ ಕೆಲವು ವಿಶೇಷ ದಿವಸಗಳಲ್ಲಿ ಮಾತ್ರ ಶಾಲೆಗೆ ಬರುತ್ತಿದ್ದಳು. ಉಳಿದ ದಿವಸಗಳಲ್ಲಿ ಉಮ್ಮನಿಗೆ ಹಾಗು ಅಕ್ಕನಿಗೆ ಮನೆವಾರ್ತೆಯಲ್ಲಿ ಸಹಾಯ ಮಾಡುತ್ತಿದ್ದಳು. ರೆಂಜೆ ಹೂಗಳನ್ನು ಹೆಕ್ಕಿ ತಂದು ಕಿವಿಗೆ ಹಲ್ಕತ್ತು ಮಾಡುತ್ತಿದ್ದಳು. ಕೇದಗೆಯನ್ನು ಕೊಯ್ದು ತಂದು ಮುಂಡೂ ಬಟ್ಟೆಯೂ ಇರಿಸುವ ಮರದ ಪೆಟ್ಟಿಗೆಯಲ್ಲಿ ಇರಿಸುತ್ತಿದ್ದಳು. ಮದರಂಗಿಗೆ ಸೀತಾದೇವಿ, ಪೀಳ್ಯದೆಲೆ ಸೇರಿಸಿ ರುಬ್ಬಿ ತನ್ನ ಕೈಗಳನ್ನು ಕೆಂಪಾಗಿಸುತ್ತಿದ್ದಳು. ಹಾಗಿದ್ದೂ ಟೀಚರುಗಳು ಆಕೆಯ ಒಳ್ಳೆಯಗುಣವನ್ನೂ ದಯಾಶೀಲತೆಯನ್ನೂ ಹೊಗಳುತ್ತಿದ್ದರು. ಯಾವ ಸಂಕಷ್ಟದಲ್ಲಿದ್ದರೂ ಸಹಾಯಕ್ಕೆ ಬಂದೊದಗುತ್ತಿದ್ದವಳು ಕಯ್ಯಾವಿ ಮಾತ್ರ. ಮಕ್ಕಳ ಅಳು ನಿಲ್ಲಿಸ್ಲಿಕ್ಕೂ ಅವಳಿಗೆ ಪ್ರತ್ಯೇಕ ರೀತಿಯ ಸಾಮರ್ಥ್ಯವಿತ್ತು. ಮಕ್ಕಳು ಅವಳ

ಕೆಂಪು ಮುಂಡನ್ನೂ ಹೂಲೇಸಿನಿಂದ ಕೂಡಿದ ಅಂಚುಳ್ಳ ಬಿಳಿಯ ಕುಪ್ಪಸವನ್ನೂ ತಲೆಯ ಚೌಕವನ್ನೂ ನೋಡಿ ಮುಗುಳ್ನಗೆ ಬೀರುತ್ತಿದ್ದರು. ಕೆಲವೊಮ್ಮೆ ಕಯ್ಯಾವಿ ಸೆಂಟಿನ ಪರಿಮಳದ ಬಟ್ಟೆ ಧರಿಸಿ ಶಾಲೆಗೆ ಬರುತ್ತಿದ್ದಳು. ಕಲಿಯುವಿಕೆಯಲ್ಲಿ ಗಟ್ಟಿಗಳಲ್ಲವಾಗಿದ್ದರೂ ಹೂಲಿಗೆಯಲ್ಲವಳು ಅಸಾಮಾನ್ಯ ನಿಪುಣತೆಯನ್ನು ತೋರಿಸುತ್ತಿದ್ದಳು. ಆದ್ದರಿಂದಲೇ ಇರಬೇಕು, ಎಲಜ್ಬಾರ್ ಟೀಚರ್ ಚಾಕ್‌ಪೀಸ್, ಬೋರ್ಡ್ ಒರಸುವ ಚೀಲ, ಹೂಲಿಗೆ ಪೆಟ್ಟಿಗೆ, ಕತ್ತರಿಯೆಲ್ಲ ಹಿಡಿದುಕೊಂಡು ತನ್ನ ಹಿಂದೆಯೇ ಬರುವುದಕ್ಕೆ ಕಯ್ಯಾವಿಯನ್ನು ಆಯ್ಕೆ ಮಾಡಿದ್ದು. ಟೀಚರುಗಳೊಂದಿಗೆ ತನ್ನ ಮನೆಯ ವಿಚಾರಗಳನ್ನು ಕಯ್ಯಾವಿ ಒಂದೂ ಬಿಡದೆ ಹೇಳುತ್ತಿದ್ದಳು.

'ಅಕ್ಕನಿಗೊಂದು ಆಲೋಚನೆ ಬಂದಿತ್ತು. ನನ್ನ್ನ ಕಂಡಾಗ ಮದ್ವೆ ಉದ್ದ ಹೇಳಿದ, ತಂಗಿ ಶಾಕೂಂತ' ಒಂದು ದಿನ ಅವಳು ಎಲಜ್ಬಾರ್ ಟೀಚರೊಂದಿಗೆ ಹೇಳುವುದು ನಾನು ಕೇಳಿದೆ. ಏಳನೆಯ ಕ್ಲಾಸಾದರೂ ಮುಗಿಯದೆ ಮದುವೆಗೆ ಏನೇ ಆದ್ರೂ ಒಪ್ಪಬಾರದೆಂದು ಟೀಚರ್ ಅವಳಿಗೆ ಹೇಳಿದರು. 'ಉದ್ದನ ಆಶೆ' ಕಯ್ಯಾವಿ ನಗುತ್ತಾ ಹೇಳಿದಳು. ಆಮೇಲೆ ಬಾಯಿಯ ಜೊಲ್ಲನ್ನು ಅಂಗಳಕ್ಕೆ ಉಗುಳಿದಳು.

ಕಯ್ಯಾವಿಯ ಮನೆ ಅಂಬಾಳತ್ತಿನವರ ಹಳೆಯ ಕೊಳದ ಹತ್ತಿರವಿತ್ತು. ಪಶ್ಚಿಮದಲ್ಲೂ ತೆಂಕುದಿಕ್ಕಿನಲ್ಲೂ ಹೊಲಗಳು ಮಾತ್ರ. ಮನೆಯ ಹಿತ್ತಲಿನಲ್ಲಿ ಬಿಳಿಯ ಹೊಯ್ಗೆಮಣ್ಣು ಪೂರ್ವದ ಬೇಲಿಯಲ್ಲಿ ಕೇದಗೆ ಹಿಂಡಿಲುಗಳೂ ಇದ್ದವು. ಒಮ್ಮೆ ಬೇಲಿಯ ಕಡೆಯಿಂದಲಾಗಿ ನಾನು ಕಯ್ಯಾವಿಯ ಮನೆಗೆ ಹೋಗಿದ್ದೆ. ಹೊರಚಾವಡಿಯಲ್ಲಿ ಒಂದು ತಟ್ಟಿ ತೂಗಹಾಕಿದ್ದರು. ಒರಗಿ ಕುಳಿತುಕೊಳ್ಳುವ ಒಂದು ಕುರ್ಚಿ ಮಾತ್ರ ಅಲ್ಲಿತ್ತು. ಕಯ್ಯಾವಿಯ ಅಕ್ಕ ವೀಳ್ಯದ ಕಲೆಗಳುಳ್ಳ ಹಲ್ಲು ಬೆಳಗಿ ನಕ್ಕಳು. ಅವರು ನನಗೆ ತಿನ್ನಲೆಂದು ಒಂದು ರಸಬಾಳೆ ಕೊಟ್ಟರು.

ನಾಲಪ್ಪಾಟ್ಟಿಗೆ ಹಿಂದಿರುಗಬೇಕಿದ್ದರೆ ಹೊತ್ತು ಕತ್ತಲಾಗತೊಡಗಿತ್ತು. ಅಜ್ಜಿ ನನ್ನನ್ನು ಕಾಣದ್ದಕ್ಕೆ ಗೊಂದಲಗೊಂಡಿದ್ದರು. 'ಎಂತಾಟವಾ ಇದು, ಆಟ, ಹೊತ್ತು ಕತ್ತಲಾದ್ದು ಕಾಣ್ಲಿಲ್ವಾ ?'

ಅಜ್ಜಿ ಕೇಳಿದರು. ಅವರು ಮೈ ತೊಳೆಯಲೆಂದು ಕೊಳದ ಕಡೆಗೆ ಹೊರಟು ನಿಂತಿದ್ದರು. ಕೆಂಪು ಸಾಬೂನದ ಪೆಟ್ಟಿಗೆಯೂ ಮೈಯೊರಸುವ ಬಟ್ಟೆಯೂ ಕೈಯಲ್ಲಿತ್ತು.

'ಆಟೆಲ್ಲ ಮುಗ್ದು ಹೊತ್ತೆಷ್ಟಾಯ್ತು. ಮಾಲತಿಕುಟ್ಟಿ ಓದ್ರೋಕೋಣೇಲಿ ಕೂತು ಓದೋದನ್ನು ನೋಡಿದೆ. ನಮ್ಮ ಕೂಸು ಉಮ್ಮಚ್ಚಿಯ ಮನೆಗೆ ಹೋಗೋದನ್ನೂ ನಾನು ನೋಡಿದೆ. ಅಂಬಾಳತ್ತಿನ ಪಡುಗದ್ದೆಯ ಬದೀಲಿರೋ ಉಮ್ಮಚ್ಚಿ ಮನೆಗೆ. ಆ ಕಯ್ಯಾವೀಂತ ಹೆಸ್ರಿರೋ ಉಮ್ಮಚ್ಚಿಕುಟ್ಟಿಲ್ವ ? ಅದ್ರೂಟ್ಟಿಗೆ ಹೋದ್ದು' ದೇವಕಿ ಹೇಳಿದಳು.

'ಯಾರು ಹೇಳಿ ಹೋದ್ದಲ್ಲಿಗೆ' ಅಜ್ಜಿ ನನ್ನನ್ನು ಪ್ರಶ್ನಿಸಿದರು. 'ಅಂಬಾಳತ್ತಿಗೆ ಹೋಗ್ಲಿಕ್ಕೆ ಮಾತ್ರಲ್ವ, ನಾ ಒಪ್ಪಿದ್ದು ? ಒಪ್ಪಿಗೆ ಇಲ್ದೆ ಅಚೀಚ ಸುತ್ತಾಡ್ಬೋದಾ ? ಯಾರಾದ್ರೂ ಹಿಡ್ಕೊಂಡೋದ್ರೆ ?'

'ಎಲ್ಲಾದ್ರೂ ಹೋಗ್ಬೇಕೂಂತಿದ್ರೆ ನಿಮ್ಗೆ ವೆಳಿಯತ್ತಿಗೆ ಹೋಗ್ಬೋದಾಗಿತ್ತಲ್ಲ'

ದೇವಕಿ ಕಣ್ಣುರುಳಿಸುತ್ತ ಕೇಳಿದಳು: 'ಇಲ್ಲಿದ್ರೆ ಮಣ್ಣಾಂತರಕ್ಕೆ ಹೋಗ್ಬೋದಿತ್ತಲ್ಲ ? ನಾಯರ್ ಮನೆಗಳೇ ಎಷ್ಟೊಂದಿವೆ! ಮಾಪಿಳ್ಳೇರ ಮನೆಗೋದ್ಯಾಕೆ ಮಗೂ ?'

'ದೇವಕಿ, ಮಂಡೆಸಮ ಇಲ್ಲೋಳಾಗೆ ಮಾತಾಡ್ಬೇಡ' ಅಜ್ಜಿ ನೀರಸದಿಂದ ಮಾತನಾಡಿದಳು.

'ಈ ಮಗೂಗೇ ಜಾತೀ ಮತಲ್ಲ ಇರ್ಲಿಕ್ಕಿಲ್ಲ. ಅದು ಕಲ್ಕತ್ತೆಯಲ್ಲಿ ಬೆಳೆದದ್ದಲ್ಲವೆ ? ಆದ್ರೆ ಈ ಊರಲ್ಲಿರೋವಾಗ ಸೊಲ್ಪಲ್ಲ ನಾವು ಹೇಳಿಕೊಡದಿದ್ರೆ ಹೇಗೆ ? ಊರೋವ್ರೇನೇಳ್ಯಾರು ?'

ದೇವಕಿ ಅಜ್ಜಿಯನ್ನು ಕೇಳಿದಳು.

'ಆ ಪಾಠೆಲ್ಲ ನೀ ಹೇಳಿಕೊಡ್ಬೇಡ' ಅಜ್ಜಿ ಹೇಳಿದರು.

ನನ್ನ ಮೈಗೆ ಸೋಪು ಹಚ್ಚಿ ಉಜ್ಜುತ್ತ ಅಜ್ಜಿ ಕೇಳಿದರು: 'ಆ ಉಮ್ಮಚ್ಚಿ ಹುಡ್ಗಿ ನಿನ್ನ ಗೆಳತಿಯಾ ?'

'ಹೌದು. ನಂಗೆ ಕಯ್ಯಾವೀಂದ್ರೆ ತುಂಬ ಇಷ್ಟ.'

'ಹಾಗಿದ್ರೆ ಆಡ್ಲಿಕ್ಕೆ ಇಲ್ಲಿ ಬರ್ಲಿಕ್ಕೇಳು. ಅವರ ಮನೇ ಹತ್ರೆಲ್ಲಾ ಕೇದಗೆ ಪೊದೆಗಳೂ ಹಾವೂ ಇರ್ಬೋದು. ಅದಕ್ಕೆ ನೀ ಅಲ್ಲಿಗೋಗ್ಬೇಡಾಂತ ಹೇಳಿದ್ದು. ಅಲ್ದೆ ಜಾತಿ, ಮತ ನೋಡಿ ಅಲ್ಲ. ಗೊತ್ತಾಯ್ತಾ ?'

ನಾನು ತಲೆ ಆಡಿಸಿದೆ. ಅಜ್ಜಿಯ ಕರುಣೆಭರಿತ ಮುಖ ಅತ್ಯಧಿಕ ಸುಂದರವಾಗಿ ನನಗೆ ತೋರಿತು.

'ನಿಂಗೆ ನನ್ನು ಇಷ್ಟವಾ ?'

ಮಾರನೆಯ ದಿವಸ ನನ್ನ ಗೆಳತಿಯನ್ನು ಕೇಳಿದೆ.

'ನಂಗೆ ಶೊಲೂಪ ಇಂಗ್ಲೀಷು ಕಲೀಬೇಕು. ಅದಕ್ಕೆ ನಾನು ಒಟ್ಟಿಗೆ ನಡಿಯೋದು' ಅವಳು ಹೇಳಿದಳು.

ಕಯ್ಯಾವಿಗೆ ಇಂಗ್ಲೀಷ್ ಮಾತುಗಳನ್ನು ಕಲಿಸಿಕೊಡುವುದಕ್ಕೆ ಪ್ರಯತ್ನಿಸಿದಾಗಲೆಲ್ಲ ಅವಳು ನನ್ನ ಗಮನವನ್ನು ಬೇರೆಡೆಗೆ ಸೆಳೆಯುತ್ತಿದ್ದಳು. ಅವಳ ಪ್ರೀತಿಯ ವಿಷಯವೆಂದರೆ ಮದುವೆ. ಒಂದು ಮದುಮಗ ಯಾವ ರೀತಿಯ ಬಟ್ಟೆ ಧರಿಸಬೇಕೆಂಬುದೆಲ್ಲ ಅವಳಿಗೆ ಗೊತ್ತಿತ್ತು. ಆತ ಬಿಳಿಯ ರೇಷ್ಮೆಯ ಅಂಗಿಯನ್ನು ಚೌಕುಳಿ ಮುಂಡನ್ನು ಧರಿಸಬೇಕೆಂದೂ ತಲೆಗೆ ಟೊಪ್ಪಿಯೋ ರೇಷ್ಮೆ ರುಮಾಲೋ ಸುತ್ತಬೇಕೆಂದೂ ಅವಳು ಹೇಳಿದಳು:

'ಯಾವ ಥರದ ಮದುಮಗ ಬೇಕು, ಗೊತ್ತಾ ?'

'ನಂಗೊತ್ತಿಲ್ಲ.'

'ಹಾಗಿದ್ರೆ ಕೇಳು. ಅಪ್ಪಿಗೆ ಹದಕ್ಕೆ ಎತ್ತರವೂ ತೋರವೂ ಇರ್ಬೇಕು. ಬೀಡಿ ಎಳೀಬಾರ್ದು. ಅಪ್ಪಿಗ ಹಾಡ್ಲಿಕ್ಕೆ ಗೊತ್ತಿರ್ಬೇಕು. ಕಾಲಿಗೆ ರಬ್ಬರ್ ಬಾರಿನ ಮೆಟ್ಟು ಹಾಕ್ಬೇಕು. ಕೈಯಲ್ಲಿ ಚಿನ್ನದ ವಾಚಿರ್ಬೇಕು. ಶಾಕಾ ?' ಕಯ್ಯಾವಿ ಕೇಳಿದಳು.

'ಸಾಕು' ನಾನು ಹೇಳಿದೆ.

'ನಾಯರ್‌ಗಳನ್ನು ಮದ್ವೆ ಮಾಡ್ಬೇಡ. ನಾಯರ್‌ಗಳು ನೋಡ್ಲಿಕ್ಕೆ ಚಂದಿರೋದಿಲ್ಲ.'

'ನನ್ನ ಅಣ್ಣ ನೋಡ್ಲಿಕ್ಕೆ ಚಂದಿಲ್ವ ? ನನ್ನಣ್ಣ ಸುಂದರನಲ್ವ ?'

'ಅಣ್ಣನಾ ? ಅಣ್ಣಾನ್ಯಾರು ಮದ್ವೆ ಆಗ್ತಾರೆ ? ಈ ಬೆಪ್ಪು ಇನ್ಯಾರತ್ರವೂ ಹೇಳ್ಬೇಡ. ನೀಯಾರನ್ನು ಮದ್ವೆ ಆಗ್ತೀಂತ ನಾ ಕೇಳಿದ್ದು.'

'ವಿಕ್ರಮಾದಿತ್ಯ.'

'ತಲೆಗೊಂದು ಶುತ್ತು ಕಡಿಮೆಯಾ ? ಆ ಜನ ಶತ್ತು ಕಾಲೆಷ್ಟಾಯ್ತು! ಈಗ ಬದ್ಕಿರೋರನ್ನಲ್ವೆ ಮದ್ವೆ ಮಾಡೋದು ? ಒಂದೆಶ್ರೇಳು.'

'ಒಂದೂ ಹೊಳೆಯೋದಿಲ್ಲ.' ನಾನು ಹೇಳಿದೆ.

'ಶರಿ. ನಾಯರ್‌ಗಳ ನಡೂನಲ್ಲಿ ನೋಡೋದಕ್ಕೆ ಚಂದಿರೋರು ಯಾರೂ ಇಲ್ಲ. ನಮ್ಮೋರಲ್ಲಿ ನೋಡೋದಿಕ್ಕೆ ಚಂದಿರೋರು ಬೇಕಾದಷ್ಟು ಜನ ಇದ್ದಾರೆ. ನೀ ಪೊನ್ನಾನಿಗೋಗಿ ಬುರ್ಖಾ ಹಾಕ್ಕೊಂಬಂದ್ರೆ ಸಾಕು. ಯಾರನ್ನು ಬೇಕಾದ್ರೂ ಮದ್ವೆ ಆಗ್ಬೋದು. ನಿಂಗ್ಯಾರಮೇಲೆ ನಂಬಿಕೆ ? ಗೋಯಿನೋರಿನ ದೈವವನ್ನಾ, ಅಥವಾ ಶರ್ವ ಶಕ್ತನಾದ ಅಲ್ಲಾಹುವನ್ನಾ ? ಆಲೋಚಿಶಿ ಹೇಳ್ಬೇಕು. ಶತ್ಯ ಹೇಳ್ಬೇಕು. ನಾ ಯಾರತ್ರವೂ ಹೇಳ್ಲಿಕ್ಕಿಲ್ಲ.'

'ನಂಗೆ ಎಲ್ರತ್ರವೂ ನಂಬಿಕೆ ಉಂಟು.'

'ಅದಾಗ್ಲಿಕ್ಕಿಲ್ಲ. ಒಬ್ರನ್ನು ಆಯ್ಕೋಬೇಕು. ಒಂದೇ ಹೊತ್ತಿಗೆ ನಾಯರ್‌ಚ್ಚಿಯೂ ಉಮ್ಮಚ್ಚಿಯೂ ಕ್ರಿಷ್ಯಾನಿಚ್ಚಿಯೂ ಆಗ್ಬೇಕೂಂತ ಹೇಳ್ಬಾರ್ದು. ಅದು ಆಗ್ಲಿಕ್ಕಿರೋದಲ್ಲ.'

'ನಂಗೇನೂ ಆಗೋದು ಬೇಡ.'

'ಹಾಗೆ ತಪ್ಪಿಶಿಕೊಳ್ಳಿಕ್ಕೆ ಶಾಧ್ಯವಿಲ್ಲ. ಶರ್ವಶಕ್ತನಾದ ಅಲ್ಲಾಹು ಶಾಕೂಂತಿದ್ರೆ ಅದನ್ನು ಬಿಡಿಶಿ ಹೇಳು.'

ಆ ವಾದ ಪ್ರತಿವಾದ ನನ್ನ ಕಣ್ಣೀರಿನೊಂದಿಗೆ ಅಂತ್ಯಗೊಂಡದ್ದಾಗಿ ನನಗೆ ನೆನಪು. ನನಗೆ ನನ್ನ ಜಾತಿಯ ಬಗ್ಗೆಯೋ ಮತದ ಬಗ್ಗೆಯೋ ವಿಶೇಷವಾದ ಅಭಿಮಾನವೇನೂ ಇರಲಿಲ್ಲ. ಆಗಾಗ್ಗೆ ಶಂಕರನ್ ಹೇಳುತ್ತಿದ್ದ:

'ಮಗೂ, ನಮ್ಮದು ಮೇಲ್ಜಾತಿ. ಅದು ಮರೀಬಾರ್ದು. ನಾನಾ ಜಾತ್ಯೋರೊಟ್ಟಿಗೆ ಅಪ್ಪಿ ಮುದ್ದಾಡಿ ಮನೆಗೆ ತಲುಪಿ ಅಡುಗೆ ಮನೆಗೋಗ್ಬೇಕಿದ್ರೆ ಮುಳುಗುಸ್ನಾನ ಮಾಡ್ಬೇಕು. ಮೈಲಿಗೆ, ಶುದ್ಧ ಇಲ್ದೆ ಬದ್ಕಿದ್ರೆ ದೋಷಲ್ಲ ಕುಟುಂಬಕ್ಕೆ.'

'ನಾನು ಯಾರನ್ನೂ ಅಪ್ಪಿ ಮುದ್ದಾಡೋದಿಲ್ಲ.'

'ನನ್ನ ಕಣ್ಣಲ್ಲೆ ನೋಡಿದ್ನಲ್ಲಾ. ಆ ಉಮ್ಮಚ್ಚಿ ಹುಡುಗೀ ಜೊತೆ ಕೈಹಿಡ್ದು ನಡೆಯೋದು.'

'ಕಯ್ಯಾಪಿ ನಿಮ್ಗಿಂತ ಶುದ್ಧವಾಗಿದ್ದಾಳೆ.'

'ಶುದ್ಧ. ದನ ತಿನ್ನೋರಿಗೆ ಶುದ್ಧ. ನನ್ನತ್ರೇಳ್ಬೇಡ ಅವುಗಳ ಶುದ್ಧ. ನಿಮ್ಗೆ ಬೇರ್ಯಾರೂ ಸಿಗ್ಲಿಲ್ವೆ ಕೈ ಹಿಡ್ಕೊಂಡು ನಡೀಲಿಕ್ಕೆ.'

'ನಿಮ್ಗೆ ಕಯ್ಯಾಪಿ ಮತ್ರ ಸಿಟ್ಟುಂಟು. ಅಲ್ವೆ ?' ನಾನು ಕೇಳಿದೆ.

ಶಂಕರನ್ ಅಡುಗೆ ಮನೆಯಿಂದ ಶಟ್ಟನೆ ಹೊರಕ್ಕೆ ಜಿಗಿದ.

'ನಂಗ್ಯಾರತ್ರವೂ ಸಿಟ್ಟಿಲ್ಲ ಕೂಸೆ. ಆ ಉಮ್ಮಚ್ಚಿ ಹುಡ್ಗಿ ನಂಗೇನೂ ಮಾಡ್ಲಿಲ್ಲ.

ಮತ್ಯಾಕೆ ನಂಗಾ ಹುಡ್ಗೀ ಹತ್ರ ಸಿಟ್ಟು ? ಮತ್ತೆ, ನೋಡ್ಲಿಕ್ಕೆ ಚೆಂದುಂಟಾಂತ ಕೇಳಿದ್ರೆ ಅದು ಕಳ್ಳೀ ಈ ಊರ್ನಲ್ಲಿ ಬೇರೆ ಹುಡುಗೇರು. ಅದ್ರ ನಗ, ಅದು ನಡ್ಕೊ.... ಅದು ನಾಯರ್ ಹುಡುಗ್ಯಾಗಿರ್ತಿದ್ರೆ ಎಷ್ಟು ಒಳ್ಳೇದಿತ್ತು. ಏನು ಮಾಡ್ವಾ ? ಅದು ಬೇರೆ ಜಾತೀದ್ದಾಯ್ತಲ್ಲ ?'

'ನಾಯರ್ ಜಾತೀದ್ದಾಗಿರ್ತಿದ್ರೆ ನೀವಪ್ಪನ್ನು ಮದ್ವೆ ಮಾಡ್ತಿದ್ರೋ ಏನೋ' ದೇವಕಿ ಹೇಳಿದಳು.

'ನಿಜ. ನನ್ನ ಮಗ್ನಾಗೋ ಪ್ರಾಯವೇ ಇರ್ಬೋದು. ಆದ್ರೂ ನಾ ಅದನ್ನು ಮದ್ವೆ ಮಾಡ್ತಿದ್ದೆ.'

'ಹೋಗಿ ಕೆಲ್ಸ ನೋಡಿ. ನಿಮ್ಗೊಂದು ಹುಡ್ಗೀನ ಸಾಕ್ಲಿಕ್ಕೆ ನಿಮ್ಮ ಸಂಬಳದಲ್ಲಿ ಸಾಧ್ಯವುಂಟಾ ? ಸುಮ್ಮನೆ...' ದೇವಕಿ ಕೇಳಿದಳು.

ಶಂಕರನ್ ಮತ್ತೆ ಅಡುಗೆ ಮನೆಯ ಕತ್ತಲೆಯ ಒಳಗೆ ಆಶ್ರಯ ಪಡೆದ.

ಕ್ಷಯರೋಗ ಪೀಡಿತನಾಗಿದ್ದರೂ ಹೆಚ್ಚುಕಡಿಮೆ ಧನಿಕನೇ ಆಗಿದ್ದ ಒಬ್ಬ ಯುವಕನನ್ನು ವಿವಾಹ ಮಾಡಿ ತನ್ನ ಭವಿಷ್ಯತ್ತನ್ನು ಭದ್ರಗೊಳಿಸಲು ಲಕ್ಷ್ಮಿ ನಾಲಾಪ್ಪಾಟ್ಟನ್ನು ಬಿಟ್ಟುಹೋದಾಗ ತೆರವುಗೊಂಡ ಆ ಜಾಗಕ್ಕೆ ಭರ್ತಿಗೊಂಡ ಹೆಂಗಸಿನೊಂದಿಗೆ ಅಜ್ಜಿ ಉದಾಸೀನಳಾಗಿ ಕೇಳಿದರು:

'ಹೆಸರೇಂತ ?'

'ಉಂಜೂಟ್ಟಿ.'

'ಉಂಜೂಟ್ಟೀಂತೊಂದು ಹೆಸ್ರು ನಾ ಕೇಳ್ಳಿಲ್ಲ. ಕುಂಜುಕುಟ್ಟೀಂತಿರ್ಬೇಕು. ಅಲ್ವೆ ?'

'ನೀವೇಂತ ಕರೆದ್ರೂ ನಾ ಓಯೇಳ್ತೇನೆ.' ಅಜ್ಜಿ ಆಗ ಮಾತ್ರ ಅವಳ ಮುಖವನ್ನು ಚೆನ್ನಾಗಿ ನೋಡಿದ್ದು. ನಾನೂ ರೆಪ್ಪೆ ಮುಚ್ಚದೆ ಆ ಹೆಂಗಸನ್ನು ನೋಡಿದೆ.

ಅವಳ ಬಿಳಿಚಿದ ಮುಖ ಬೆವತು ಹೋಗಿತ್ತು. ಮೇಲ್ತುಟಿಯಲ್ಲಿ ತೆಳ್ಳಗಿನ ಮೀಸೆ ಬೆಳೆದಿತ್ತು. ಅವಳು ಕಡಿಮೆ ಎತ್ತರದ, ದಪ್ಪಗಿನ ಸೊಂಟದಿಂದ ಕೂಡಿದವಳಾಗಿದ್ದಳು. ಕಣಕಾಲಿನ ಅರ್ಧವೂ ಕಾಣುವ ಹಾಗೆ ಅವಳು ಮುಂಡನ್ನು ಎತ್ತಿ ಕಟ್ಟಿದ್ದಳು. ಅವಳು ತೊಟ್ಟಿದ್ದ ಕಿತ್ತಳೆ ರವಿಕೆಯ ಕಂಕುಳಭಾಗದಲ್ಲಿ ಬಣ್ಣಮಾಸಿ ಬಿಳಿಯಾಗಿತ್ತು.

ಅವಳು ಯಾವ ಊರಿನವಳೆಂದೂ ಅವಳನ್ನು ನಾಲಪ್ಪಾಟ್ಟಿಗೆ ಯಾರು ಕಳುಹಿಸಿದರೆಂದೂ ಅಜ್ಜಿ ಕೇಳಲಿಲ್ಲ. ಮೂಡುದಿಕ್ಕಿನ ಅಂಗಳದಲ್ಲೂ ಕೋಣೆಯಲ್ಲೂ ಆ ಹೊತ್ತಿಗೆ ತುಂಬ ಜನರಿದ್ದರು. ಕುಂಜು ಆಚಾರಿ, ಬಡೇಕರೆಯಿಂದ ಸಂದೇಶವನ್ನೂ ಚಕ್ಕುಲಿಯನ್ನೂ ಹೊತ್ತು ತಂದ ಬಾಲನ್, ಕುಂಬಳಕಾಯಜ್ಜ ಎಂದು ಕರೆಯಲ್ಪಡುತ್ತಿದ್ದ ಮುದುಕ, ಮಾಂಬುಳಿ ಕೃಷ್ಣ ಹೆಂಡತಿ ವಳ್ಳಿ, ಅಂಚೆಪೇದೆಯಾಗಿ ಕೆಲಸ ಮಾಡುತ್ತಿದ್ದ ರಪ್ಪಾಯಿ, ಕಾವೆ ಕೆಲಸಮಾಡುವ ಕೊಚ್ಚುಕಾಪಿಯ ತಂಗಿ ಮಾಂಜಿರಿ, ಗಾಣ ನಡೆಸುವ ಲಾಸರ್... ಹೀಗೆ ಹಲವರು ಅಲ್ಲಿದ್ದರು. ಅವರ ಲ್ಲೊಬ್ಬರು ಅವಳನ್ನು ಅಲ್ಲಿಗೆ ಕರೆತಂದಿರಬಹುದೆಂದು ಅಜ್ಜಿ ಭಾವಿಸಿದ್ದಿರಬಹುದು.

'ಕೈಯಲ್ಲೇಂತ' ಅಜ್ಜಿ ಅವಳನ್ನು ಕೇಳಿದರು.

'ನನ್ನ ಒಳಕಚ್ಚೆ ಮತ್ತು ಮುಂಡು. ಎರಡು ರಾಪ್ಕೆಯೂ ಉಂಟು.'

'ಅದನ್ನು ಕೊಂಡೋಗಿ ಬಡಗು ಕೋಣೇಲ್ಲಿಡು ದೇವಕಿ' ಅಜ್ಜಿ ಹೇಳಿದರು: ದೇವಕಿ ಕೊಳ ತೋರಿಸ್ಕೊಡ್ತಾಳೆ. ಸ್ನಾನ ಮಾಡಿ ಒಳಗ್ಬಾಯ್ತಾ?'

ದೇವಕಿಯೊಂದಿಗೆ ಕುಂಜುಕುಟ್ಟಿ ಹೊಳೆ ಬದಿಗೆ ಹೋಗುವಾಗ ನಾನೂ ಅವರ ಹಿಂದೆ ಹೋದೆ.

'ತಲೆಗಿಡ್ಲಿಕ್ಕೆ ಎಣ್ಣೆ ಬೇಕಾ?' ದೇವಕಿ ಕೇಳಿದಳು.

'ಬೇಡ. ತುಂಬ ಬಿಸಿಲು ತಾಗಿ ತಲೆ ಬಿಸಿಯಾಗಿದೆ. ಈಗ ಎಣ್ಣೆಯಿಟ್ರೆ ನಂಗೆ ತಲೆನೋವು ಸುರುವಾಗ್ತದೆ'

'ನಿಮ್ಮ ಮನೆ ಎಲ್ಲಿ?'

'ತುಂಬ ದೂರ. ಕಲ್ಲೂರ್‌ಮಾಂತ ಕೇಳ್ಳಿಲ್ವ? ಅದರ ಮೂಡುದಿಕ್ಕಿಗೆ.'

'ಕೇಳಿದೇಂತ ಬೇಸ್ರ ಮಾಡ್ಬಾರ್ದಾಯ್ತಾ. ನೀವು ನಾಯರಲ್ವಾ?'

'ನನ್ನ ನೋಡಿದ್ರೆ ಬಿಲ್ಲವತ್ತೀಂತ ಅನ್ನಿಸ್ತದಾ? ನಿಮ್ಗಿಂತ ಬಣ್ಣಲ್ವ ನಂಗೆ? ಇಗೊಳ್ಳಿ, ರಾಪ್ಕೆ ತೆಗೆದಾಗ ನನ್ನ ಮೈಬಣ್ಣ ನೋಡ್ರಂತೆ, ಬಿಳಿಬಿಳಿಯಾಗಿ. ಕೈಯಲ್ಲ ಕಪ್ಪಾಯ್ತು. ಬಿಸಿಲಲ್ಲಿ ನಡೆದದ್ದಕ್ಕಾಯ್ತಾ. ನಾನು ಸಾಚಾ ನಾಯರೋಳು. ಕಿರಿಯತ್ತಿನ ನಾಯರು. ಮೀನು ಮಾಂಸ ತಿನ್ನದ ಕುಟುಂಬದೋಳು. ಇಲ್ಲಿಯವರೂ ಕಿರಿಯತ್ತಿನ ನಾಯರ್‌ನೋರೂಂತ ಕೇಳಿದ್ದಕ್ಕೆ ನಾ ಬರ್ಲಿಕ್ಕೊಪ್ಪಿದ್ದು. ನಂಗೆ ಜಾತಿಮತಲ್ಲ ಉಂಟಾಯ್ತಾ.'

''ನಿಮ್ಗಿಷ್ಟಾಗ್ಲಿಲ್ಲಲ್ವ. ನಾ ಸುಮ್ನೇ ಕೇಳಿದ್ದಷ್ಟೆ. ಇನ್ನೂ ನನ್ನೊಟ್ಟಿಗೆ ಇರ್ಬೇಕಾದ ಜನಲ್ವ? ಜಾತಿ ಕೇಳಿ ಬಿಡುವಾಂತ ಮಾಡಿದೆ, ಅಷ್ಟೆ.'

'ನಂಗೇನೂ ಬೇಸರಿಲ್ಲ. ನಂಗೆ ಸಿಟ್ಟು ಬರಿಸ್ಲಿಕ್ಕೆ ಯಾರಿಗೂ ಸಾಧ್ಯಯಿಲ್ಲಾಯ್ತಾ. ಇನ್ನು ನೀವು ಸೊಲ್ಪೊತ್ತು ಕೊಳಮನೆಯ ಆಚೆ ಹೋಗಿ ನಿಲ್ಲಿ. ನನ್ನ ಒಳಪಂಚೆ ತೆಗ್ದು ಈ ಕಲ್ಲಿನ್ಮೇಲೆ ಹೊಡ್ದು ಒಗೀಲಿಕ್ಕಾಯ್ತಾ.'

'ನಿಮ್ಗ್ಯಾಕಿಷ್ಟು ನಾಚಿಕೆ? ನೀವೂ ಹೆಣ್ಣು ನಾನೂ ಹೆಣ್ಣು. ನಂಗಿರೋದೇ ನಿಮ್ಗಿರೋದು.'

ಕುಂಜುಕುಟ್ಟಿ ಮಂದಹಾಸ ಬೀರಿದಳು.

'ನೀವು ಹೇಳೋದು ಸರಿ. ಆದ್ರೆ ನಿಮ್ದೂ ನನ್ದೂ ಮೈ ಒಂದೇ ರೀತಿ ಇರ್ಲಿಕ್ಕಿಲ್ಲಾಯ್ತಾ. ಒಂದು ಸೊಲ್ಪಾದ್ರೂ ವೆತ್ಯಾಸಿರ್ತದೆ.'

'ವೆತ್ಯಾಸಿರ್ಲಿಕ್ಕಿಲ್ಲ. ನಿಮ್ಗ ಮದ್ವೆ ಆಗ್ಲಿಲ್ಲ, ಅಲ್ಲ?'

'ಅದ್ಯಾಕೆ ನೀವು ನನ್ನ ಮದ್ವೆ ಸಂಗ್ತಿ ಕೇಳೋದು? ನನ್ನ ನೋಡಿದ್ರೆ ಮದ್ವೆ ಆದಾಗುಂಟಾ?....'

'ಹಾಗೆ ನಂಗನ್ನಿಸ್ತು. ನಿಮ್ಮ ಹೊಟ್ಟೆ, ಕುಂಡೇಲ್ಲ ನೋಡಿದಾಗ ನೀವೆರಡು ಹೆತ್ತಿದ್ದೀರೀಂತವೂ ತೋರಿತು' ದೇವಕಿ ಜೋರು ಜೋರಾಗಿ ನಕ್ಕಳು.

'ನಾ ಹೆರ್ಲಿಲ್ಲ. ಮದ್ವೆಯೂ ಆಗ್ಲಿಲ್ಲ.'

ಕುಂಜುಕುಟ್ಟಿ ಗಂಭೀರವಾಗಿ ನೀರಿಗಿಳಿದು ಸಾಬೂನು ನೊರೆ ಮಾಡಿ ಕೈಕಾಲುಗಳನ್ನು ತಿಕ್ಕಿ ತೊಳೆಯತೊಡಗಿದಳು.

'ಇಲ್ಲಿ ಬನ್ನಿ ಮಗೂ.' ದೇವಕಿ ಕೊಳಮನೆಯಿಂದ ಹೊರಕ್ಕೆ ದಾಟುತ್ತ ನನ್ನನ್ನು ಕರೆದಳು.

'ನಾವು ಹೋಗ್ವ. ಆ ಹೆಂಗ್ಸು ನಾವ್ಯಾರೂ ಕಾಣದಾಗೆ ಮೀಲಿ' ದೇವಕಿ ಹೇಳಿದಳು.

'ನೀಯಾಕೆ ದೇವಕಿ ಕುಂಜುಕುಟ್ಟಿಗೆ ಸಿಟ್ಟು ಬರೋ ಹಾಗೆ ಮಾಡಿದ್ದು?' ನಾನು ಕೇಳಿದೆ.

'ಅದೀಗ ಗಮ್ಮತ್ತಾಯ್ತು. ನಾ ಯಾಕೆ ಮಗೂ ಕಂಡೋರನ್ನೆಲ್ಲ ಸಿಟ್ಟಿಗೆಬ್ಬಿಸ್ಬೇಕು? ನಂಗೇನೂ ಬೇರೆ ಕೆಲ್ಸಿಲ್ವ? ಆ ಹೆಂಗ್ಸಿಗೆ ಮದ್ವೆ ಆಗಿದ್ರ ಅಪ್ರಿಗೇ ಒಳ್ಳೇದು. ನಂಗದ್ರಿಂದ ಎಂತ ಪ್ರೇಜನವೂ ಇಲ್ಲಲ್ಲ? ಇನ್ನು ಮದ್ವೆ ಆಗದಿದ್ರೂ ಅದ್ರಿಂದ ನಂಗೆಂತ ನಷ್ಟ? ಸತ್ಯ ಬಿಚ್ಚಿ ಹೇಳ್ಳಾ? ನಂಗದ್ರ ಮೋರೆ ಓಡಿಸ್ಲಿಲ್ಲಾಯ್ತಾ ಮಗೂ. ಆ ಬಣ್ಣ ನೋಡಿದಾಗ್ಲೇ ನಂಗೊತ್ತಾಯ್ತು. ತಂದೆ ಇಲ್ಲದೇ ಹುಟ್ಟಿದ್ದೂಂತ. ಅಲ್ಲಿದ್ರ ಈ ಬಣ್ಣೆಲ್ಲ ದುಡ್ಡಿಲ್ಲೋರ ಮನೆಯೋರಿಗೆಲ್ಲ ಬರೋದಿಲ್ಲ ಮಗೂ. ಇಗೊಳ್ಳಿ ನನ್ನ ಬಣ್ಣ, ಕಪ್ಪೂ ಅಲ್ಲ ಬಿಳಿಯೂ ಅಲ್ಲ. ಒಂಥರ ಮಿಶ್ರ ಅಲ್ವೆ ಮಗೂ. ನಮ್ಮ ಲಕ್ಷ್ಮಿಯ ಬಣ್ಣವೂ ನನ್ನ ಬಣ್ಣದ ಹಾಗೆಯೆ. ನಮ್ಮನ್ನೆಲ್ಲ ಎಣ್ಣೆಗೆಂಪಿನೋರೂಂತ ಕರೆಯೋದು.'

'ನಿನ್ನ ಯಾರು ಎಣ್ಣೆಗೆಂಪಿನೋಳೂಂತ ಕರೆದದ್ದು?'

ದೇವಕಿ ಹಸನ್ಮುಖಿಯಾಗಿ ಮುಂಡಪ್ಪ ಮಾಪಿನ ಮರಕ್ಕೆ ಒರಗಿ ನಿಂತಳು.

'ಗಂಡಸ್ರೂಂತ. ವಿದ್ಯೆ ಬುದ್ಧಿ ಇರೋ ಗಂಡಸ್ರು. ಅವ್ರು ಹೇಳೋದು, ಇರೋದ್ರಲ್ಲಿ ಒಳ್ಳೆ ಬಣ್ಣ ನನ್ನೂಂತ. ನಾನು ಎಣ್ಣೆಗೆಂಪಿನವಳೂಂತ ಹೇಳಿದ್ರು.'

'ಯಾರು ಹೇಳಿದ್ರು? ಹೇಳಿದೋರಿಗೆ ಹೆಸ್ರಿಲ್ವೆ?'

'ನಾ ಹೇಳ್ಲಿಕ್ಕಿಲ್ಲ. ನೀವ್ಹೋಗಿ ದೊಡ್ಡವ್ರೋರಿಗೆ ಜೋಡಿಸಿಕೊಟ್ರೆ ಬೈಗುಳ ಸಿಕ್ಕೋದು ನಂಗೆ, ನಿಮ್ಗಲ್ಲ. ಗಂಡಸ್ರತ್ರ ಹರ್ಟುತ್ತೇನೇಂತ ಗೊತ್ತಾದ್ರೆ ಆಗ ದೊಡ್ಡವ್ರೋರು ಹಿಡ್ದು ದಬ್ತಾರೆ. ನಂಗಿಲ್ಲೀತನ್ಕ ಒಂದು ಕೆಟ್ಟೆಸ್ರೂ ಸಿಕ್ಕಿಲ್ಲ. ಅದು ಗೊತ್ತುಂಟಾ? ಯಾರತ್ರ ಕೇಳಿದ್ರೂ ಹೇಳ್ತಾರೆ ನನ್ನದು ಒಳ್ಳೇ ಸೊಬಾವಾಂತ. ಲಕ್ಷ್ಮಿಯ ಸೊಬಾವಕ್ಕಿಂತ ಒಳ್ಳೇದು ನನ್ನ ಸೊಬಾವ. ಎಲ್ಲರೂ ನನ್ನ ಸೊಬಾವವೇ ಒಳ್ಳೇದೂಂತ ಹೇಳ್ತಾರೆ.'

'ಲಕ್ಷ್ಮಿಯ ಸ್ವಭಾವ ನಿನ್ನ ಸ್ವಭಾವಕ್ಕಿಂತ ಒಳ್ಳೇದು'

'ನೀವು ಮತ್ತೂ ನಂಗೆ ಬೇಜಾರು ಮಾಡಿಸ್ತೀರಲ್ಲ. ಆ ಲಕ್ಷ್ಮಿ ಇಲ್ಲಿಯೋರಿಗೆಲ್ಲ ಮದ್ದಿಟ್ಟಿದ್ದಾಳೇಂತ ನಂಗೆ ತೋರ್ತದೆ. ಅವ ಬಗ್ಗೆ ಒಂದು ಮಾತು ಹೇಳಿದ್ರೂ ನಿಮ್ಗೆಲ್ಲ ನನ್ನ ಮೇಲೆ ಸಿಟ್ಟು. ಲಕ್ಷ್ಮಿಯ ಸೊಬಾವ ಅಷ್ಟು ಒಳ್ಳೇದಲ್ಲಾಂತ ಹೇಳಿದ್ರ ಆಗ ಸುರುವಾಗ್ತದೆ ನನ್ನ ಕಚ್ಚಿ ತಿನ್ಲಿಕ್ಕೆ. ನಂಗೆ ನಮ್ಮ ಆಮೀನಉಮ್ಮ ಹೇಳಿಕೊಟ್ಟದ್ದು. ಲಕ್ಷ್ಮಿ ಇಲ್ಲಿರೋರಿಗೆಲ್ಲ ಮದ್ದಿಟ್ಟಿದ್ದಾಳೇಂತ. ನಾನಾಗ ನಂಬ್ಲಿಲ್ಲಾಯ್ತಾ. ಈಗ ನಂಗೇ ಗೊತ್ತಾಗ್ತದೆ ಆಮೀನಉಮ್ಮ ಹೇಳಿದ್ದು ಸರೀಂತ.'

'ಯಾರೀ ಆಮೀನಉಮ್ಮ?'

'ಅದೀಗ ಗಮ್ಮತ್ತಾಯ್ತು. ನಿಮ್ಗೆ ನಮ್ಮ ಆಮೀನಉಮ್ಮಯನ್ನು ಗೊತ್ತಿಲ್ವ? ಆಗಾಗ ಇಲ್ಲಿಗೆ ಬಂದು ಹಲ್ಲಿನಣ್ಣುಬೇಕು. ಸೋರ್ಣಗಡ್ಡೆ ಬೇಕೂಂತೆಲ್ಲ ಕೇಳೋದಿಲ್ವೆ

ಒಬ್ಬ ಉಮ್ಮಚ್ಚಿ ? ಬೊಚ್ಚು ಬಾಯ್ಯಾಗಿ ? ಸಪೂರ ಮೈಯಾಗಿ ? ನಿಮ್ಗೆ ನೆಂಪಿಲ್ವೆ ? ಆಮಿನಉಮ್ಮಂಗೆ ಒಳ್ಳೆ ಬುದ್ಯುಂಟಾಯ್ತಾ. ನಿಮ್ಗೆ ಕಣ್ಣು ತಾಗಿದ್ರೆ ಆಗ ಆಮೀನಉಮ್ಮನನ್ನು ಕರ್ದು ಊದಿಸಿದ್ರೆ ಸಾಕು. ಆಮೀನಉಮ್ಮ ದೃಷ್ಟಿ ತಾಗಿಸೋರ ಕಾಲಡಿಯಿಂದ ಮಣ್ಣು ತೆಗೆದು ಸೊಲ್ಪ ಸಾಸಿವೆ, ಉಪ್ಪು, ಮೆಣ್ಸು ಸೇರ್ಸಿ ನಿಮ್ಮ ತಲೇ ಮೇಲಿಂದ ನಿವಾಳಿಸ್ತಾರೆ. ಆಮೇಲದನ್ನು ಒಲೆಗೆ ಹಾಕ್ತಾರೆ. ನಮ್ಮ ಅಡುಗೇಮನೆಗೆ ಉಮ್ಮಗೆ ಬರ್ಲಿಕ್ಕಿಲ್ಲಲ್ಲಾ. ಅದ್ಕೆ ಉಮ್ಮ ಅದನ್ನು ಕೊಂಡೋಗಿ ಅಪ್ರ ಒಲೇಗೆ ಹಾಕ್ತಾರೆ.'

'ಆಮೀನಉಮ್ಮ ನಮ್ಮ ಅಡುಗೆ ಮನೆಗೆ ಯಾಕೆ ಬರೋದಿಲ್ಲ ?'

'ಅದೀಗ ಗಮ್ಮತ್ತಾಯ್ತು. ಇಲ್ಲಿಯ ಅಡುಗೆಮನೆಗೆ ಉಮ್ಮಚ್ಚಿ ಬರೋದಾ ? ಎಂತ ಮಗೂ. ನಿಮ್ಗಿಷ್ಟೂ ಬುದ್ಧಿಲ್ಲಾಂತಾದ್ರೆ ಹೇಗೆ ? ಇಲ್ಲಿಯ ಅಡುಗೆ ಮನೆಗೆ ಬರ್ಬೇಕಾದ್ರೆ ಕೀರಿಯತ್ತಿನ ನಾಯರಾಗ್ಬೇಕು. ಸಾದಾರಣ ಕಾಣುವ ನಾಯರ್‌ನೋರು ಕೂಡ ಇಲ್ಲಿಯ ಅಡುಗೆ ಮನೆಗೆ ಬರ್ಲಿಕ್ಕಿಲ್ಲಾಂತ ಗೊತ್ತಿಲ್ವೆ ? ಅಂಬಾಳತ್ತಿನೋರಿಗೆ ಬೇಕಾದಷ್ಟು ಆಸ್ತಿಯುಂಟು. ಆದ್ರೆ, ಅಪ್ರಿಗೂ ನಮ್ಮ ಅಡುಗೆ ಮನೆಗೆ ಬರ್ಲಿಕ್ಕಿಲ್ಲ. ನಮ್ಮ ಅಡುಗೆ ಮನೆಗೆ ಮಡಿ ಮೈಲಿಗೆ ಎಲ್ಲ ಉಂಟಾಯ್ತಾ.'

'ನಮ್ಮ ಅಡುಗೆ ಮನೆಗೆ ನೀ ಹೋಗೋದಿಲ್ವ ?'

'ಇಲ್ಲ ಮಗೂ. ನಾವು ಪಳ್ಳಿಚ್ಚದವ್ರು. ಪಳ್ಳಿಚ್ಚಾನ್ ನಾಯರ್‌ಂತ ಕೇಳ್ಳಿಲ್ವೆ ? ನೀವು ಕೇಳಿರ್ಬೋದು. ನಿಮ್ಮ ಜಾತಿ ನಮ್ಮ ಜಾತಿಗಿಂತ್ಲೂ ಮೇಲ್ನದ್ದು.'

ಕುಂಜುಕುಟ್ಟಿ ಸ್ನಾನಮುಗಿಸಿ ಹೊರಗಿಳಿದದ್ದು ಒದ್ದೆಬಟ್ಟೆಗಳನ್ನು ಧರಿಸಿ. ಅವಳ ಮೈ ಮಾವಿನ ಚಿಗುರೆಲೆಗಳನ್ನು ನೆನಪಿಗೆ ತಂದಿತು. ದೇವಕಿ ಅವಳನ್ನು ಒಮ್ಮೆಯಷ್ಟೆ ನೋಡಿ ತಟ್ಟನೆ ಹೊಯ್ಗೆ ಮಣ್ಣಲ್ಲಿ ಕ್ಯಾಕರಿಸಿ ಉಗುಳಿದಳು.

'ನೀವೆಷ್ಟು ಹೊತ್ತಾಯ್ತೂಂದು ಮೀಲಿಕ್ಕೆ ಹೊರಟು. ದೊಡ್ಡಮ್ಮೋರು ಬೈದು ಕಣ್ಣು ತೆಗ್ಯೋದು ನನ್ನು ! ಎಣ್ಣೆ ಹಚ್ಚದೆಯೇ ಎರಡು ಗಂಟೆಯಾಯ್ತು ನಿಮ್ಮ ಜಳಕ ಮುಗೀಲಿಕ್ಕೆ. ನೀವೊಂಚೂರು ಎಣ್ಣೆ ತಲೆಗಿಟ್ರೆ ಸ್ಥಿತಿ ಎಂತಾದೀತು ? ನನ್ನ ಪುನ್ನುಸ್ಥಾನದ ಭಗೋತಿ, ಮೀಯೋದೂಂತ ಕೇಳಿದ್ದೇನ, ನೋಡಿದ್ದೇನ, ಹೀಗುಂಟಾ ಒಂದು ಮೀಯಾಟ ?'

'ಮುಂಡಲ್ಲೆಲ್ಲ ಮಣ್ಣಾಗಿತ್ತು. ಕೆಂಪು ಮಣ್ಣು. ಅದೆಲ್ಲ ಒಗ್ದು ಬಿಳಿ ಮಾಡ್ಬೇಕಿದ್ರೆ ಸಮಯ ಹೋದ್ದೇ ಗೊತ್ತಾಗ್ಲಿಲ್ಲ.'

'ಮುಂಡು ಒಗೀಲಿಕ್ಕೆ ನೀವು ಸಾಬೂನು ಕೇಳಿ ತಕ್ಕೊಳ್ಳಿಲ್ಲಲ್ಲ ?'

'ಮುಂಡು ಒಗಿವ ಸಾಬೂನು ನಾ ಹಾಕ್ಲೇ ಇಲ್ಲಾಯ್ತಾ. ಕಲ್ಲಿಗೆ ಹೊಡ್ದೇ ಬಿಳಿ ಮಾಡಿದೆ ಅಷ್ಟೆ. ದುಡ್ಡಿಲ್ಲೋರಿಗೆ ಎಂತ ಸಾಬೂನು ?'

'ನಿಮ್ಮನೇಲಿ ಸಾಬೂನು ಇರ್ಲಿಕ್ಕಿಲ್ವೇನೋ. ಇಲ್ಲಿ ಸಾಬೂನುಂಟು. ಎಣ್ಣೆ ಉಂಟು. ಎಲ್ಲ ಉಂಟು. ಎಂತ ಕೇಳಿದ್ರೂ ದೊಡ್ಡಮ್ಮೋರು ಕೊಡ್ತಾರೆ. ಒಳ್ಳೆ ಸಂಪನ್ನೆಯಾದ ಅವ್ರೋರು. ಶಂಕರನ್ನಾಯರ್ ಹೇಳ್ಳಿಕ್ಕುಂಟು. ಪಾಂಚಾಲಿಯ ಅನ್ನದ ಪಾತ್ರ ನಾಲಪ್ಪಾಟ್ಟಿನ ಅನ್ನದ ಪಾತ್ರೇಂತ. ಅನ್ನ ಮುಗೀಲಿಕ್ಕಿಲ್ಲಾಂತ ಅದರ ಅರ್ಥ. ಯಾರು ಬಂದ್ರೂ ಅನ್ನ ಕೊಡ್ತಾರೆ. ಹೊಟ್ಟೆ ಹಸಿದುಕೊಂಡು ಯಾರೂ ಇಲ್ಲಿಂದ ವಾಪಾಸು

ಹೋಗ್ಬಾದ್ರೂಂತ ದೊಡ್ಡೋವ್ರೋರ ಆಜ್ಞೆ.'

'ನನ್ನ ಭಾಗ್ಯ.'

'ಹೌದೌದು. ನಿಮ್ಮ ಭಾಗ್ಯ. ಎಲ್ಲಾ ಕಡೆ ಇದ್ದಾಗಲ್ಲಾಯ್ತಾ ಇಲ್ಲಿರೋದು. ಬೇರೆ ಎಲ್ಲಿ ಉಳ್ಕೊಳ್ಳಿಕ್ಕೂ ನಮ್ಮ ಮಾವ ನನ್ನ ಕಳಿಸ್ಕೊಡ್ಲಿಕ್ಕಿಲ್ಲ. ಇಲ್ಲಿ ಹುಡುಗ್ಯೇರು ಹಾಳಾಗ್ಲಿಕ್ಕಿಲ್ಲಾಂತ ಕಂಡಿತ. ಸೊಬಾವ ಇನ್ನಷ್ಟು ಒಳ್ಳೇದಾದೀತು. ಹಾಗೇ ಆಗ್ತದೆ, ಅದು ಗೊತ್ತುಂಟೊ? ಇಲ್ಲಿಯ ಅಮ್ಮಿಣ್ಣ್ಯಮ್ಮೋರು ಸಂಜೆ ಹೊತ್ತಿಗ ದೀಪದಡೀಲಿ ಕೂತು ಶ್ಲೋಕ, ಹಾಡೂ ಓದೋದು ಕೇಳ್ಬೇಕು. ನಂಗ ಎಲ್ಲದ್ರ ಅರ್ಥ ಗೊತ್ತಾಗೋದಿಲ್ಲ. ಆದ್ರ ನನ್ನ ಕಣ್ಣಲ್ಲಿ ನೀರು ಬಂದು ಬಿಡ್ತದೆ. ನಂಗೆ ಈ ರಮಣನ ಪದ್ಯ ಕೇಳಿದ್ರ ಕೂಡ್ಲೇ ಆಗ ಸುರುವಾಗ್ತದೆ ಕಣ್ಣೀರು ಪಟಪಟಾಂತ ಉದುರ್ಲಿಕ್ಕೆ! ನೀವದು ಕೇಳ್ಳಿಲ್ವಾ? ರಮಣನ ಕತೆ? ರಮಣನನ್ನು ಚಂದ್ರಿ ಮೋಸ ಮಾಡಿದ್ದು? ಆಜನ ಹೋಗಿ ನೇಣು ಹಾಕಿ ಸತ್ತು ಬಿಟ್ಟದ್ಬಾಯ್ತಾ? ನೋಡ್ಲಿಕ್ಕೆ ಒಳ್ಳೆ ಜನ.'

'ನೀವು ನೋಡಿದ್ರಾ?'

'ನಾನ್ನೋಡ್ಲಿಲ್ಲಾಯ್ತಾ. ಅಮ್ಮಿಣ್ಣಿಯಮ್ಮ ಓದೋದು ಕೇಳಿದ್ದು, ಅಷ್ಟೇಯ.'

'ಕೆಲೋಮ್ಮೆ ಗಂಡಸ್ರೇ ಹೆಂಗಸ್ರನ್ನು ಮೋಸ ಮಾಡ್ತಾರೆ.'

'ಆಗಿಬರ್ರೋದು. ನನ್ನ ಯಾರೂ ಮೋಸ ಮಾಡ್ಲಿಲ್ಲ.'

'ನಿಮ್ಮ ಭಾಗ್ಯ.'

'ನಿಮ್ಮನ್ನು ಮೋಸ ಮಾಡಿದ್ರಾ?'

'ನಾನೊಬ್ಳು ಭಾಗ್ಯ ಇಲ್ಲೋಳು' ಕುಂಜುಕುಟ್ಟಿ ನಿಟ್ಟುಸಿರುಬಿಟ್ಟು ವೇಗವಾಗಿ ನಡೆಯತೊಡಗಿದಳು.

'ನಿಂಗೆ ಒಂದ್ರುಪ್ಯಾ ಬೇಕಾ?' ನಾನು ಕೇಳಿದೆ.

'ಅದೀಗ ಗಮ್ಮತ್ತಾಯ್ತು! ದೇವಕಿ ಕೋಪಗೊಂಡು ಹೇಳಿದಳು: 'ಬಂದು ಒಂದು ದಿನ ಕೂಡಾ ಆಗ್ಲಿಲ್ಲ. ಅಷ್ಟಲ್ಲೇ ಮಗೂನ ನೀವು ಒಳಗೆ ಹಾಕಿಬಿಟ್ರಾ! ನಾ ಈ ಮನೆಗ್ಬಂದು ಕಾಲೆಷ್ಟಾಯ್ತೋ ಗೊತ್ತಿಲ್ಲ. ಈ ಮಗು ನಂಗೆ ಒಂದು ಕಾಸು ಕೂಡಾ ಕೊಡ್ಲಿಲ್ಲ. ನಾನು ಯಾರಿಗೂ ಬೇಡಾಗಿಬರ್ರೋದು. ನಂಗ ಬಣ್ಣಾಯಿಲ್ಲಲ್ಲ. ನಾ ತೋರಯಿಲ್ಲಲ್ಲ. ನನ್ನ ಕಂಡ್ರೆ ಯಾರೂ ಹೇಳ್ಲಿಕ್ಕಿಲ್ಲಲ್ಲ, ಇಗೊಳ್ಳ, ಹೋಗ್ತಿಯಾಳೆ ಒಬ್ಳು ಸುಂದರೀಂತ.'

'ನಿಮ್ಮನ್ನು ಎಣ್ಣೆಗೆಂಪಿನೋಳೂಂತ ಕರ್ದದ್ದ್ಯಾರು?' ನಾನು ಕೇಳಿದೆ.

'ಅದು ನಾನು ನನ್ನ ಕೊಂದ್ರೂ ಹೇಳ್ಕಕ್ಕಿಲ್ಲ ಮಗು. ಅದನ್ನು ನನ್ನ ಬಾಯಿಂದ ಹೇಳಿಸ್ಲಿಕ್ಕೆ ನೋಡ್ಬೇಡಿ.'

'ನಿಮ್ಗೆ ನಾಯರಿದ್ದಾರಾ?' ಕುಂಜಕುಟ್ಟಿ ಕೇಳಿದಳು.

ದೇವಕಿ ತಿರುಗಿ ನಿಂತಳು.

'ನಂಗೆ ನಾಯರಿದ್ರೆ ನಂಗೇ ಒಳ್ಳೇದು. ನಿಮ್ಗಿಲ್ಲಲ್ಲ?'

'ಕೇಳಿದ್ದಷ್ಟೆ. ಉತ್ತರ ಹೇಳ್ಲಿಕ್ಕೆ ಇಷ್ಟಿಲ್ಲಿದ್ರ ಹೇಳ್ಬೇಡಿ.'

'ನಿಮ್ಮ ಪ್ರಶ್ನೆಗ ಕಾಯ್ದು ಉತ್ರ ಹೇಳ್ಲಿಕ್ಕೆ ನಂಗೊತ್ತುಂಟು. ಇವತ್ತು ಬಂದದ್ದಷ್ಟೇ ಅಲ್ವ. ಈಗ್ಲೆ ಮಾತಿಗ ನಿಲ್ಲೋದು ಬೇಡಾಂತ ನಾ ಸುಮ್ನಿದ್ದೇನೆ. ನಿಮ್ಮ ಒಂದೊಂದು

ಕಿಸೆ ಕೇಳೋವಾಗ ನನ್ನ ಹೆಬ್ಬೆರಳಿಗೆ ತುರಿಕೆ ಬರ್ತದೆ. ಕುಂಜೂಟ್ಟ್ಯಮ್ಮ ಕಿಸೆ ಕೆಣ ನಿಮ್ಮ ಕಲ್ಲೂರ್‌ಗೆ ಹೋಗಿ ತೋರ್ಸಿದ್ರೆ ಸಾಕು. ಇಲ್ಲಿ ಬೇಡಾಯ್ತಾ. ಕಿಸ ಹೇಳ್ಳಿಕ್ಕೆ ಸುರುಮಾಡಿದ್ರೆ ನಿಮ್ಗಿಲ್ಲಿ ಉಳಿಗಾಲಿಲ್ಲಾಯ್ತಾ.'

'ನಾನೆಂತ ತಪ್ಪು ಮಾಡಿದ್ದೇನೆ ?' ಕುಂಜುಕುಟ್ಟಿ ದುಃಖದಿಂದ ಕೇಳಿದಳು. ಅವಳ ಕಣ್ಣುಗಳು ತಟ್ಟನೆ ಕಲಕಾದವು.

'ಇನ್ನು ಅಳ್ಳಿಕ್ಕೂ ಗೋಳೊಯ್ಲಿಕ್ಕೂ ಸುರುಮಾಡ್ಬೇಡಿ. ದೊಡ್ಡವ್ರೋರು ನನ್ನ ಬೈದು ಕಣ್ಣು ಕುಕ್ತಾರೆ. ನನ್ನ ಇಲ್ಲಿಂದ ಒಡಿಸ್ಲಿಕ್ಕೆ ನೋಡ್ಬೇಡಿ.'

'ನಾಯಾಕೆ ನಿಮ್ಮನ್ನು ಓಡಿಸ್ಲಿ ? ನೀವೇಳಿದ್ದನ್ನು ದೇವ್ರು ಕೇಳ್ತಾರೆ.'

'ದೇವಕಿ ಕುಂಜುಕುಟ್ಟಿಯನ್ನು ಅಳೋ ಹಾಗೆ ಮಾಡಿದ್ದು' ನಾನು ಮುತ್ತಜ್ಜಿಯೊಂದಿಗೆ ಹೇಳಿದೆ.

'ಕುಂಜುಕುಟ್ಟಿ ಯಾರು ?' ಮುತ್ತಜ್ಜಿ ಕೇಳಿದರು.

'ಇವತ್ತು ಬಂದ ಕೆಲಸದೋಳು. ಕಲ್ಲೂರಿನಿಂದ ಬಂದ ಕುಂಜುಕುಟ್ಟಿ.'

'ನಾನ್ನೋಡ್ಲಿಲ್ಲ' ಮುತ್ತಜ್ಜಿ ಹೇಳಿದರು.

'ದೇವಕಿಯು ಆ ಕುಂಜುಕುಟ್ಟಿಯನ್ನು ಅಳೋ ಹಾಗೆ ಮಾಡಿದ್ದು.'

'ಅಳ್ಬೇಕಾದೋರು ಅಳಿ' ಮುತ್ತಜ್ಜಿ ಮತ್ತೆಯೂ ಬೆರಳುಗಳನ್ನು ಲೆಕ್ಕ ಮಾಡುತ್ತಾ ದೇವರ ನಾಮ ಜಪಿಸತೊಡಗಿದರು.

ಕುಂಜುಕುಟ್ಟಿಯ ಬಗ್ಗೆ ಎಲ್ಲಾ ದಿವಸವೂ ದೇವಕಿ ಆರೋಪಗಳನ್ನು ಎತ್ತುತ್ತಿದ್ದಳು. ಕುಂಜುಕುಟ್ಟಿ ಬಟ್ಟೆ ಬದಲಾಯಿಸಲಿಕ್ಕೆ ಉತ್ತರದ ಕೋಣೆಗೆ ಹೋದರೆ ಕೂಡಲೆ ಬಾಗಿಲು ಹಾಕುತ್ತಾಳೆಂದೂ ಅವಳು ಕೊಳದ ಮನೆಯನ್ನು ಮುಚ್ಚಿಯೇ ಸ್ನಾನಕ್ಕೆ ಹೋಗುವುದೆಂದೂ ದೇವಕಿ ಆಕ್ಷೇಪಿಸುತ್ತಿದ್ದಳು.

'ಒಂದು ಸೋಗಲಾಡಿ ಜಾತಿ' ದೇವಕಿ ಗೊಣಗಿದಳು.

ಒಂದು ದಿನ ಸಂಜೆ ಕುಂಜುಕುಟ್ಟಿ ನೆಲ್ಲಿ ಮರದಡಿಯಲ್ಲಿ ನಿಂತು ಬಿಕ್ಕಿ ಬಿಕ್ಕಿ ಅಳುತ್ತಿದ್ದುದನ್ನು ನಾನು ನೋಡಿದೆ. ದೇವಕಿ ಮಲಮೂತ್ರ ವಿಸರ್ಜನೆಗಾಗಿ ನಾಲಪ್ಪಾಟ್ಟಿನ ಓತ್ತಲಿಗೂ ವೆಳುತ್ತೇಡದ ಓತ್ತಲಿಗೂ ನಡುವಿನಲ್ಲಿರುವ ಕರುವಾನ್‌ನ ಓತ್ತಲು ಎಂಬುದಾಗಿ ಕರೆಯಲ್ಪಡುವ ನಿರ್ಜನ ಪ್ರದೇಶಕ್ಕೆ ಹೋಗಿದ್ದಳು. ನಾಲಪ್ಪಾಟ್ಟಿನ ಹೆಂಗಸರು ತೆಂಕಮೂಲೆಯಲ್ಲಿ ದೇವರನಾಮ ಜಪಿಸುವುದೂ ಮಾಸಪತ್ರಿಕೆಗಳನ್ನು ಓದುವುದೂ ಮಾಡುತ್ತಿದ್ದ ಹೊತ್ತು. ಅಂಚೆಯುವನನ್ನು ಕಾದು ಮಾವ ಮುಖಮನೆಯಲ್ಲಿ ಅತ್ತಿತ್ತ ಶತಪದಿಸುತ್ತಿದ್ದರು. ಕುಂಜುಕುಟ್ಟಿಯ ಬಿಕ್ಕಳಿಸುವಿಕೆ ಕೇಳಿ ನಾನು ಬಡಗುಕೋಣೆಯ ಕಡೆಗೆ ಓಡಿಬಂದೆ. ನೆಲ್ಲಿಮರದ ಅಡಿಯಲ್ಲಿ ಆ ಸಂಜೆಯ ಬೆಳಕಿನಲ್ಲಿ ಅವಳ ಮುಖ ಇನ್ನಷ್ಟು ಬಿಳಚಿಕೊಂಡದ್ದಾಗಿ ನನಗೆ ಕಂಡಿತು.

'ಕುಂಜುಕುಟ್ಟೀ' ನಾನು ಗಟ್ಟಿ ಕೂಗಿದೆ.

ಆಕೆ ಮುಖ ತಿರುಗಿಸಿದಳು.

ನಾನು ಮೆಟ್ಟಲಿಳಿದು ಅವಳ ಹತ್ತಿರಕ್ಕೆ ಹೋದೆ. ಅವಳ ಬಟ್ಟೆಗಳಿಗೆ ಬೆವರಿನ ವಾಸನೆಯಿತ್ತು. ವಾಂತಿಯದ್ದೂ.

'ನೀನು ವಾಂತಿ ಮಾಡಿದ್ದಾ' ನಾನು ಕೇಳಿದೆ.

'ಹೌದು ಮಗೂ. ಹಟ್ಟಿಯ ಹಿಂದುಗಡೆ ವಾಂತಿ ಮಾಡ್ದೆ.'

'ನಿಂಗೆ ಸೌಖ್ಯಯಿಲ್ವ ? ನಿಂಗೆ ಹೊಟ್ಟೆ ನೋವಾಗ್ತದಾ ?'

'ಹೊಟ್ಟೆನೋವಿಲ್ಲ. ತೊಂದ್ರೆಯಿಲ್ಲ ಮಗೂ. ನಾನು ಹಸಿ ಹುಳಿ ತಿಂದದ್ದು. ಅದಕ್ಕೆ ವಾಂತಿಯಾಯ್ತು,

'ನೀಯಾಕೆ ಹಸಿಹುಳಿ ತಿಂದದ್ದು ?'

'ಹಸಿ ಹುಳಿ ಕಂಡ್ರೆ ಅದು ತಿನ್ಬೇಕೂಂತ ಆಸೆ ಆಗ್ತದೆ. ತಿನ್ನೋದು ಬೇಡಾಗಿತ್ತು. ಹಟ್ಟಿ ಹಿಂದೇನೆ ಎಲ್ಲ ವಾಂತಿಯಾಯ್ತು.'

'ನಾನು ಬೆನ್ನುಜ್ಜಿ ಕೊಡ್ಬೇಕಾ ?'

'ಎಂತ ಮಗೂ. ನೀವು ನನ್ನ ಬೆನ್ನುಜ್ಜಿ ಕೊಡೋದಾ ? ದೊಡ್ಡಮ್ಮೋರು ಕಂಡ್ರೆ ನನ್ನ ದಬ್ಯಾರು ಹೊರ್ಗೆ. ನೀವು ಒಳ್ಗೆ ಹೋಗಿ ಮಗೂ. ನಾ ಈಗ ಬರ್ತೇನೆ. ಮೈತೊಳ್ಕೊಂಡು. ನಾವು ಬಳೆ ತುಂಡು ಸೇರ್ಸಿ ಮಾಲೆ ಮಾಡ್ವಾಯ್ತಾ. ನಿಮ್ಗೊತ್ತಿಲ್ವ ಮಗೂ ಬಳೆ ತುಂಡೆಲ್ಲ ಬೆಂಕಿಗಿಡ್ಡು ಬಗ್ಗಿಸ್ಲಿಕ್ಕೆ ? ನಾ ಕಲ್ಸಿ ಕೊಡ್ತೇನಾಯ್ತಾ.'

'ನಾ ತೆಂಕು ಮೂಲೆಗೋಗ್ಲಾ ?'

'ಹೋಗಿ ಮಗೂ. ನಾ ವಾಂತಿ ಮಾಡಿದ್ದೇಂತ ದೊಡ್ಡಮ್ಮೋರತ್ರ ಹೇಳ್ಬೇಡ್ಯಾಯ್ತಾ. ನೀವು ಹೇಳ್ತೀರಾ ಮಗೂ ನಾವಾಂತಿ ಮಾಡ್ದೇಂತ ?'

'ಇಲ್ಲ.'

ಸಂಬಳ ತೆಗದುಕೊಳ್ಳುವ ದಿವಸವಾದ್ರೂ ಕುಂಜುಕುಟ್ಟಿಯ ಸಂಬಂಧಿಕರು ಯಾರಾದ್ರೂ ನಾಲಪ್ಪಾಟ್ಟಿಗೆ ಬರಬಹುದೆಂದು ಅಜ್ಜಿ ನಿರೀಕ್ಷಿಸಿದ್ದರು. ದೇವಕಿಯ ಅಜ್ಜಿ ಅವಳ ಚಿಕ್ಕ ತಮ್ಮನನ್ನೂ ಕರೆದುಕೊಂಡು ಬೆಳಗ್ಗೇನೆ ಬಂದಿದ್ದರು. ಶಂಕರನ ತಂದೆ ಹಿಂದಿನ ದಿನ ಸಂಜೆಗೇ ಬಂದು ಪೂರ್ವದ ಕೋಣೆಯ ಕಣಜದ ಮೇಲೆ ಮಲಗಿ ನಿದ್ರಿಸಿದ್ದರು. ಕುಂಜುಕುಟ್ಟಿಯನ್ನು ಕೇಳಿ ಯಾರೂ ಬರಲಿಲ್ಲ.

'ನಿನ್ನ ಸಂಬಳ ಯಾರಿಗೆ ಕಳಿಸ್ಲಿ ಕುಂಜುಟ್ಟೀ ? ಅದು ತಕ್ಕೊಳ್ಳಿಕ್ಕೆ ಯಾರೂ ಬರ್ಲಿಲ್ಲಲ್ಲ' ಅಜ್ಜಿ ಅವಳನ್ನು ಪ್ರಶ್ನಿಸಿದರು.

'ನನ್ನ ಸಂಬಳ ನನ್ನ ಕೈಗೇ ಕೊಟ್ಟುಬಿಡಿ.'

ಕುಂಜುಕುಟ್ಟಿ ಕೈ ಚಾಚುತ್ತ ಹೇಳಿದಳು.

'ನಿನ್ನ ಮನೆಗೆ ಮನಿಯಾರ್ಡರ್ ಕಳಿಸ್ಬೇಡ್ವ ?'

'ಬೇಡ ದೊಡ್ಡಮ್ಮೋರೆ. ನನ್ನ ಸಂಬಳ ನನ್ನ ಕೈಗೇ ಕೊಟ್ರೆ ಸಾಕು.'

ಅದನ್ನು ಕೇಳಿದ ದೇವಕಿ ಗಟ್ಟಿಯಾಗಿ ಹೂಂಕರಿಸಿದಳು.

'ತಂದೆ ತಾಯಿರತ್ರ ಸರಿಯಲ್ಲೆರ್ಲಿಕ್ಕಿಲ್ಲ' ದೇವಕಿ ಗೊಣಗಿದಳು.

'ಯಾವ ಕೊಂಗ ಇದನ್ನಿಲ್ಲಿಗೆ ತಂದು ಬಿಟ್ನೋ ಏನೋ' ಸ್ವಗತವೆಂಬಂತೆ ಶಂಕರನ್ ಅಡುಗೆ ಮನೆಯಿಂದಲೇ ಕತ್ತಲೆಯಲ್ಲಿ ನಿಂತುಕೊಂಡು ಅಶರೀರವಾಣಿ ಮೊಳಗಿಸಿದ.

ಅಜ್ಜಿ ಐದು ರೂಪಾಯಿಯ ಒಂದು ನೋಟನ್ನು ಕುಂಜುಕುಟ್ಟಿಯ ಕೈಯಲ್ಲಿಟ್ಟರು. ಅವಳು ತನ್ನ ರವಿಕೆಯೊಳಗಡೆ ಜೋಪಾನವಾಗಿರಿಸಿ ಬಳಿಕ ಓಡಿಹೋಡಿ ತೆಗೆದು ನಲಗುಡಿಸತೊಡಗಿದಳು.

ರಾತ್ರಿ ನಾನು ಮಲಗುವುದಕ್ಕೆ ಮುಂಚೆ ಅಜ್ಜಿಯೊಂದಿಗೆ ಕುಂಜುಕುಟ್ಟಿಯು ಅಳಲನ್ನು ಕುರಿತು ಹೇಳುವುದಿತ್ತು.

'ದೇವಕಿ ಯಾವಾಗ್ಲೂ ಕುಂಜುಕುಟ್ಟೀನ್ನು ನೋಯಿಸ್ತಾಳೆ' ನಾನು ಹೇಳಿದೆ.

'ಅದರಲ್ಲೇನಂತ ಆಶ್ಚರ್ಯ ಉಂಟು ?' ಅಜ್ಜಿ ಕೇಳಿದರು. 'ಕುಂಜೂಟ್ಟಿ ಚೆಂದಿದ್ದಾಳೆ. ದೇವಕಿಗೆ ಅದು ನೋಡಿದಾಗ್ಲೆಲ್ಲ ಒಂಥರಾ ಆಗ್ತದೆ. ಅದರಲ್ಲೇನಂತ ಆಶ್ಚರ್ಯವುಂಟು.'

'ಕುಂಜುಕುಟ್ಟಿಯನ್ನು ನೀವು ವಾಪಾಸು ಕಳಿಸ್ಲಿಕ್ಕಿಲ್ಲಲ್ವಾ ?'

'ನಾನು ಕಳಿಸ್ಲಿಕ್ಕಿಲ್ಲ.'

'ದೇವಕಿ ಎಂತ ಸುಳ್ಳೇಳಿದ್ರೂ ಅದನ್ನು ನಂಬಿ ಕುಂಜೂಟ್ಟಿಯನ್ನು ವಾಪಾಸು ಕಳಿಸ್ಬೇಡ್ವ್ಯಾಯ್ತಾ ?'

'ಸರಿ, ನಾ ಅವಳನ್ನು ವಾಪಾಸು ಕಳಿಸೋದಿಲ್ಲ.'

ಮಾರನೆಯ ದಿವಸ ರವಿವಾರವಾದ್ದರಿಂದ ನನಗೆ ಕಲಿಸ್ಲಿಕ್ಕೆ ಚಾಮಿ ಅಯ್ಯರ್ ಮಾಸ್ಟರ್ ಬರಲಿಕ್ಕಿಲ್ಲ. ಆದ್ದರಿಂದಲೇ ಇರಬೇಕು ಅಜ್ಜಿ ನನ್ನನ್ನು ಬೇಗ ಎಬ್ಬಿಸದ್ದು. ನಾನು ಎದ್ದು ಮೆಟ್ಟಲ ಹತ್ತಿರ ಬರಬೇಕಿದ್ದರೆ ಹಲ್ಲು ಉಜ್ಜುವುದಕ್ಕೆ ಉಮಿಕರಿಯನ್ನೂ ಕುಡಿಯುಲಿಕ್ಕೆ ಗೋದಿಯ ಕಾಫಿಯನ್ನೂ ಯಾರೂ ತಂದು ಕೊಡಲಿಲ್ಲ. ಬಡಗುಮೂಲೆಯಲ್ಲಿ ಭಾರೀ ಕೋಲಾಹಲದ ವಾತಾವರಣವಿತ್ತು.

''ಮಗೂನ್ನು ದೂರ ನಿಲ್ಸಿ. ಮಕ್ಳು ನೋಡೋದಲ್ಲ ಇದು.'

ಕಾರುಬಾರಿಯಾದ ಮಾಡಪ್ಪಲಾಯಿ ಶಂಕುಣ್ಣಿ ನಾಯರ್ ಕೂಗಿ ಹೇಳಿದರು. ಆಪತ್ತು ಬಂದಾಗಲೆಲ್ಲ ಅಜ್ಜಿ ಆ ಮುದುಕನನ್ನು ಕರೆಸುತ್ತಿದ್ದರು. ನಾನು ಅವರ ಕೈಯನ್ನು ಕೊಡವಿ ಬಡಗು ಕೋಣೆಯ ಕಡೆಗೆ ನೋಡಿದೆ. ಗೋಡೆಯಲ್ಲಿ ರಕ್ತದ ಕಲೆಯನ್ನು ಕಂಡೆ. ನೆಲದಲ್ಲಿ ರಕ್ತ ಚೆಲ್ಲಿಹೋಗಿತ್ತು. ಕುಂಜುಕುಟ್ಟಿಯ ಚಾಪೆಯಲ್ಲಿ ಕೆಂಪಗೆ ಹೆಪ್ಪಾದ ರಕ್ತ. ಆಕೆ ಹೆದರಿ ಒಂದು ಮೂಲೆಯಲ್ಲಿ ನಿಂತಿದ್ದಳು. ಅವಳ ಕಣ್ಣಿನ ಕೃಷ್ಣಮಣಿಗಳು ಹೊಳೆಯುವ ಗೋಲಿಗಳಂತೆ ಜ್ವಲಿಸಿದವು.

'ಊಂ, ಹೊರಡು. ಈಗ್ಲೇ ನಿನ್ನನ್ನು ಮನೆಗೆ ಕೊಂಡೋಗಿ ಬಿಡುವ, ಓರ್ವ ಗಂಡಸಿನ ಶಬ್ದ ಕೂಗಿ ಹೇಳಿತು. ಅದು ಶಂಕುಣ್ಣಿ ನಾಯರ ಧ್ವನಿಯೋ ಶಂಕರನ ಧ್ವನಿಯೋ ಎಂಬುದು ನನಗೆ ಸ್ಪಷ್ಟವಾಗಲಿಲ್ಲ.

'ಇನ್ನು ದೇವರನ್ನು ಧ್ಯಾನಿಸಿಕೊಂಡು ಮನೆಯಲ್ಲೇ ಇದ್ದು ಬಿಡು. ಇಲ್ಲಿಗೆ ಬರಬೇಡ' ಅಜ್ಜಿ ಹೇಳಿದರು.

'ನನ್ನನ್ನಿಲ್ಲಿಂದ ವಾಪಾಸು ಕಳಿಸ್ತೀರಿ. ಅಲ್ವೆ ?' ಕುಂಜುಕುಟ್ಟಿ ಬಿಕ್ಕಿದಳು.

'ಯಾರು ನಿಂಗೀ ಮದ್ದು ಕೊಟ್ಟೋರು ?'

'ಅದನ್ನು ಬೈಬೇಡಿ ಶಂಕುಣ್ಣಿ ನಾಯ್ರೇ. ಅಳೋ ಹಾಗೆ ಮಾಡಿ ಎಂತ ಲಾಭ ? ಆಗ್ಬೇಕಾದ್ದೆಲ್ಲ ಆಯ್ತು' ಮುತ್ತಜ್ಜಿ ಹೇಳಿದರು.

'ನಾಕ್ನೇ ತಿಂಗಳಲ್ಲಾಗಿರ್ಬೇಕು ಇಲ್ಲಿಗೆ ಬಂದದ್ದು. ನಾ ಆಗ್ಲೇ ಹೇಳಿದ್ದೆ. ಹೊಟ್ಟೆ ನೋಡಿದ್ರೆ ಸಂಶಯಾಗ್ತದೇಂತ. ಆಗ ನನ್ನ ಯಾರೂ ನಂಬ್ಲಿಲ್ಲ' ದೇವಕಿ ಹೇಳಿದಳು.

'ದೋಣಿ ಬಿಡೋದ್ಯಾರು ?' ಅಜ್ಜಿ ಕೃಷ್ಣನನ್ನು ವಿಚಾರಿಸಿದರು.

'ಗೋಂದುವಿರ್ಬೇಕು. ಯಾರೂ ಗೊತ್ತಾಗದಾಗೆ ಅಲ್ಲಿ ಕೊಂಡೋಗಿ ಬಿಡ್ತಾನೆ.'

'ಗೋಂದೂನ ಮೂಲಕ ಈ ಸುದ್ದಿ ಹೊರಗೆ ಹೋಗ್ಬಾರ್ದು.'

'ಮಗೂ. ಉಂಜೂಟ್ಟಿಯನ್ನು ಕಳಿಸ್ಬೇಡೀಂತ ಹೇಳಿ ಮಗೂ' ಕುಂಜುಕುಟ್ಟಿ ನನ್ನ ಕೈ ಹಿಡಿದು ಕೇಳಿದಳು.

'ಮಗೂನ್ನ ಮುಟ್ಟಿ ಮೈಲಿಗೆ ಮಾಡ್ಬೇಡ' ದೇವಕಿ ಹೇಳಿದಳು.

'ದೇವಕಿ, ಇವಳನ್ನಿಲ್ಲಿಂದ ಕೊಂಡೋಗ್ತೀಯಾ ?' ಅಜ್ಜಿ ಸಿಟ್ಟಿನಿಂದ ಹೇಳಿದರು.

ಕುಂಜುಕುಟ್ಟಿ ದೋಣಿ ಏರಲೆಂದು ಪಶ್ಚಿಮದ ಗದ್ದೆಯ ಪಕ್ಕದ ಕಡವಿಗೆ ಕೃಷ್ಣನ್ ಹಾಗೂ ಕುಟ್ಟನೊಂದಿಗೆ ತಲೆತಗ್ಗಿಸಿ ನಡೆದು ಹೋಗುತ್ತಿದ್ದಾಗ ನಾನೂ ಬಿಕ್ಕಿ ಬಿಕ್ಕಿ ಅತ್ತೆ.

'ಕುಂಜುಕುಟ್ಟಿಗೆ ಎಂತ ಅಸೌಖ್ಯ ?' ನಾನು ದೇವಕಿಯನ್ನು ಕೇಳಿದೆ.

'ಅಸೌಖ್ಯವಾ ?'

'ಕುಂಜುಕುಟ್ಟಿಗೆ ಎಂತ ಅಸೌಖ್ಯ. ಕೋಣೆಲೆಲ್ಲ ರಕ್ತಾಗಿತ್ತು.'

'ಅಸೌಖ್ಯಲ್ಲ. ಹಾಂಕಾರ. ಬರೀ ಹಾಂಕಾರ. ನಂಗೆ ಸುರೂವಿಗೆ ಕಂಡಾಗ್ಲೇ ಗೊತ್ತಾಗಿತ್ತು. ಇಲ್ಲಿ ಇಟ್ಟುಕೊಳ್ಳೋ ಜಾತಿ ಅಲ್ಲಾಂತ. ಅದು ಬರೀ ಬ್ಯಾವರ್ಸಿ. ನೀವ್ಯಾರತ್ರವೂ ಹೇಳ್ಬೇಡ್ವಾಯ್ತಾ. ಅದೊಂದು ಸೂಳೆ.'

'ಸೂಳೇಂತಂದ್ರೆಂತಾ ?'

'ಅದೀಗ ಗಮ್ಮತ್ತಾಯ್ತು. ಸೂಳೇಂತಂದ್ರೆ ಎಂತಾಂತ ಕೇಳಿದ್ರೆ ನಾಯೆಂತ ಹೇಳೋದು ? ನಂಗೆ ಸೂಳೇರದ್ದು ಗುರ್ತಿಲ್ಲಲ್ಲಾ. ಇಂತದ್ದೊಂದನ್ನು ಕಾಣೋದು ಇದೇ ಮೊದ್ಲು. ಒಂದು ಜೀವಿಯನ್ನು ಕೊಂದಾಕ್ಲಿಲ್ವ ಅವ್ಳು. ಅದೂ ಈ ಕುಟುಂಬದಲ್ಲಿ. ಅವ್ಳಿಗೆ ದೇವ್ರು ಶಿಕ್ಷೆ ಕೊಟ್ಟಾರು ಮಗು. ಕೊನೇಗವ್ಳು ಸಿಡುಬು ಹಿಡ್ದು ಸಾಯ್ತಾಳೆ. ಅದು ಗೊತ್ತುಂಟೊ ?'

'ಸಿಡುಬೂಂತಂದ್ರೆ ಎಂತ ?'

'ಈ ಮಗು ಒಂದೊಂದೇ ಪ್ರಶ್ನೆ ಕೇಳ್ಳಿಕ್ಕೆ ಸುರುಮಾಡಿದ್ರೆ ನಂಗೆ ಹೆಬ್ಬೆರಳು ತುರಿಸ್ತದೆ. ನೋಡಿ ಮಗು, ನನ್ನತ್ರ ಯಾವಾಗ್ಲೂ ಇಂತ ಪ್ರಶ್ನೆ ಕೇಳ್ಬೇಡಿ. ನಿಮ್ಮ ಮಾಷತ್ರ ಓಗಿ ಕೇಳಿಯಾಯ್ತಾ ? ಎಡ್ಮಾಷತ್ರ ಓಗಿ ಕೇಳ್ಯಾಯ್ತಾ ? ಕೇಳಿದ್ದಕ್ಕೆಲ್ಲ ಉತ್ರ ಹೇಳ್ಳಿಕ್ಕೆ ನಂಗ್ಯಾರೂ ಸಂಬಳ ಕೊಡೋದಿಲ್ಲ. ನೆಲ ಗುಡಿಸ್ಲಿಕ್ಕೂ ಬಟ್ಟೆ ಒಗೀಲಿಕ್ಕೂ ನಾನಿಲ್ಲಿರೋದು. ಅದು ಗೊತ್ತುಂಟೊ ?

ನಾನು ತಲೆ ಆಡಿಸಿದೆ.

'ಕುಂಜುಕುಟ್ಟಿ ಪಾಪ' ನಾನು ಹೇಳಿದೆ.

ದೇವಕಿ ಜೋರಾಗಿ ಕ್ಯಾಕರಿಸಿ ಅಂಗಳಕ್ಕೆ ಉಗುಳಿದಳು:

'ಉಂಜೂಟ್ಟಿ! ಇನ್ನದನ್ನು ಮರ್ತುಬಿಡಿ ಮಗೂ. ಇನ್ನದು ಈ ಮೆಟ್ಲು ಹತ್ತಿಕ್ಕಿಲ್ಲ.'

'ಈ ಮಗೂನ ಹೆಸರೆಂತ ?'

ಸಪೂರವಾಗಿ ಕಪ್ಪಗಿದ್ದ ಮಗುವಿಗೆ ಮೊಲೆ ಕೊಡುತ್ತ ದೇವಸ್ಥಾನದ ಓತ್ತಲಿನಲ್ಲಿ

ಕುಳಿತಿದ್ದ ಓರ್ವ ಹೆಂಗಸಿನಲ್ಲಿ ನಾನು ಕೇಳಿದೆ.

'ಇದ್ರೆಸ್ನ ಏಮಲತ.'

ಮಗು ತಟ್ಟನೆ ಮೊಲೆ ಕುಡಿಯುವುದನ್ನು ನಿಲ್ಲಿಸಿ ನನ್ನ ಕಡೆಗೆ ನೋಡಿತು. ಬಾಯಿಯ ಎಡಮೂಲೆಯಿಂದ ಮೊಲೆಹಾಲು ತೊಟ್ಟಿಕ್ಕುತ್ತಿತ್ತು. ಮಗು ನಕ್ಕಿತು. ಬೊಚ್ಚುಬಾಯಿಯ ಮಂದಹಾಸ.

ಏಮಲತೆಯ ತಲೆ ಬೋಳಾಗಿತ್ತು. ಅವಳ ತಲೆಯೋಡಿನಲ್ಲಿ ಕಪ್ಪು ಗೆರೆಗಳು ಕಾಣುತ್ತಿದ್ದುವು. ಕಾಲುಗಳಲ್ಲಿ ಕಪ್ಪು ಕಲೆಗಳಿದ್ದುವು. ಗಾಯದ ಕಲೆಯಿಂದ ಕೂಡಿ ಒಣಗಿದ್ದ ಕಾಲುಗಳಲ್ಲಿ ಬೆಳ್ಳಿಯ ಕಡಗಗಳಿದ್ದುವು.

'ಈ ಮಗೂನ ತಲೇಲೆಂತ' ನಾನು ಕೇಳಿದೆ.

'ಅದಕ್ಕೆ' ಸೆಕೆ ಬೊಕ್ಕೆ ಆಗಿತ್ತು. ಶಂಕುಣ್ಣಿ ಪಣಿಕ್ಕರ್‌ರ ಮದ್ದಾಯ್ತು. ಈಗ ಅದ್ದಿಲ್ಲ. ವಾಪಾಸು ಸಿಗ್ಲಿಕ್ಕಿಲ್ಲಾಂತ ಗ್ರಯಿಸಿದ್ದು. ಗುರುವಾಯೂರಿಗೆ ಚಿನ್ನದ ಮನ್ನರೂಪ ಅರ್ಕೆ ಒತ್ತದ್ದು.'

'ಮನ್ನರೂಪ ಅಂದ್ರೆ ಎಂತ?' ನಾನು ಕೇಳಿದೆ.

'ಏಮಲತೆಯ ಆಗೆ ಚಿನ್ನದಲ್ಲಿ ರೂಪು ಮಾಡಿ ಗುರುವಾಯೂರಿನ ನಡೆಯಲ್ಲಿ ಸಮರ್ಪಿಸ್ಬೇಕು. ಇದರ ಅಸೌಕ್ಯೆಲ್ಲ ಓಡಿ ಜಿಡ್ತದೆ. ನೀವು ಗುರುವಾಯೂರಿಗೋಗ್ಲಿಲ್ವೆ ಮಗೂ. ಬಾಲಾಮಣ್ಯಮ್ಮ ನಿಮ್ಮನ್ನು ಗುರುವಾಯೂರಿಗೆ ಕರ್ಕೊಂಡೋಗ್ಲಿಲ್ವೆ ?'

'ಬಾಲಾಮಣ್ಯಮ್ಮ ಮಕ್ಕನ್ನು ಗುರುವಾಯೂರಿಗೆ ಕೊಂಡೋಗದಿದ್ರೆ ನಿಮ್ಗೆಂತ ನಷ್ಟ' ದೇವಕಿ ದಡದಡನೆ ನಮ್ಮ ಹತ್ತಿರಕ್ಕೆ ಬರುತ್ತ ಗಟ್ಟಿಯಾಗಿ ಕೇಳಿದಳು.

'ನಂಗೆ ನಷ್ಟೇನೂ ಇಲ್ಲ. ನನ್ನ ಮಕ್ಕಳ ಸಂಗ್ತಿ ಮಾತ್ರ ನಾ ನೋಡ್ಕೊಂಡ್ರೆ ಸಾಕು. ಬಾಕಿದ್ದೋರ ಸಂಗ್ತಿ ಅವರ ಅಮ್ಮಂದಿರು ನೋಡ್ಕೋತಾರೆ' ಏಮಲತೆಯ ಅಮ್ಮ ತನ್ನ ಬೊಟ್ಟದ ರವಿಕೆಯನ್ನು ಕೆಳಗಡೆಗೆ ಎಳೆಯುತ್ತಾ ಹೇಳಿದಳು.

'ನೀವ್ಯಾಕೆ ಮಗೂ ಎಲ್ಲರತ್ರ ಮಾತಾಡ್ಲಿಕ್ಕೋಗೋದು ? ನನ್ನೊಟ್ಟಿಗೆ ದೇವಸ್ಥಾನದ ಒಳಗಡೆಗೆ ಬರ್ಬೋದಿತ್ತಲ್ಲ. ಆಗ ಹೇಳಿದ್ರಿ ದೀಪಸ್ತಂಬ ನೋಡ್ಬೇಕೂಂತ. ದೀಪಸ್ತಂಬ ನೋಡ್ಕೋದೂಂತಲ್ವ ನಾಯೇಳಿದ್ದು. ಕಂಡೋರತ್ರೆಲ್ಲ ಸುಕದುಕ್ಕ ಮಾತಾಡೋದಕ್ಕೆ ನಾಯೇಳಿದ್ನಾ ?' ದೇವಕಿ ತನ್ನ ಸಿಟ್ಟನ್ನು ಇಳಿಸಿಕೊಳ್ಳುವುದಕ್ಕೆ ವೇಗವಾಗಿ ದೇವಸ್ಥಾನಕ್ಕೆ ಪ್ರದಕ್ಷಿಣೆ ಬರತೊಡಗಿದಳು. ನಾನು ಅವಳನ್ನು ಹಿಂಬಾಲಿಸುವುದಕ್ಕೆ ಪ್ರಯತ್ನಿಸಿದೆ. ದೇವಕಿಯ ಹಿಂಗಾಲು ಕಪ್ಪಾಗಿದ್ದುವು. ದೇವಸ್ಥಾನದ ಅಂಗಣದ ಕಪ್ಪು ಕಲ್ಲುಗಳನ್ನು ಮುಟ್ಟದೆ ನಡೆಯಲಿಕ್ಕೆ ಪ್ರಯತ್ನಿಸಿದವು.

'ಎಷ್ಟು ಸಲ ಸುತ್ತು ಬರ್ಬೇಕು ?' ನಾನು ಕೇಳಿದೆ.

ದೇವಕಿ ಹಿಂದಿರುಗಿ ನಿಂತು ತನ್ನ ಮೂಗುಹೊಳ್ಳೆಗಳನ್ನು ಅಗಲಿಸಿದಳು:

'ಪಾಪ ಮುಗಿಯೋತನ್ಕ. ಎಷ್ಟು ಸಲ ಸುತ್ತು ಬರ್ತೀವೋ ಅಷ್ಟು ಪುಣ್ಯ ಸಿಕ್ತದೆ. ಯಾಕೆ ಮಗೂ, ಏದುಸಿರು ಬರ್ತದಾ ?'

'ಇಲ್ಲ.'

'ಏದುಸಿರು ಬಂದೀತು. ಬಾರದಿರ್ಲಿಕ್ಕಿಲ್ಲ. ನಿಮ್ಗೆ ಕೂಡೋದಿಲ್ಲ. ಅದಕ್ಕೆ ಏನಾದ್ರೂ ತಿನ್ಬೇಡ್ವ ? ಬೆಳಿಗ್ಗೆ ಒಂದು ದೋಸಲ್ಲ ತಿಂದ್ರೆ ಬಲಿ ಬರೋದಿಕ್ಕಿರೋ

ಶಕ್ತಿ ಸಿಗ್ಲಿಕ್ಕಿಲ್ಲ ಮಗೂ. ನಾ ಬೆಳಿಗ್ಗೆ ಊಟ ಮಾಡೋದ್ಯಾಕೆ ಗೊತ್ತುಂಟಾ ? ದೇಹಕ್ಕೆ ಶಕ್ತಿ ಸಿಗ್ಲಿಕ್ಕೆ. ಆ ಹಿತ್ತಾಳೆ ಪಾತ್ರೆ ತುಂಬ ತಂಗುಳನ್ನ ನಾ ಊಟ ಮಾಡ್ತೇನೆ. ನಂಗೆ ಅಷ್ಟು ಉಣ್ಣೋದಿಕ್ಕೆ ಮೇಲೋಗ್ರ ಕೂಡ ಬೇಕೂಂತಿಲ್ಲ. ಎರಡು ಮೆಣ್ಸು, ಸ್ವಲ್ಪ ಕಲ್ಲುಪ್ಪು. ಅದನ್ನು ಹುಡಿ ಮಾಡಿ ಸೇರ್ಸಿ ನಾನು ಬೆಳ್ಗಿಗೆ ಅನ್ನ ಹಾಗೇ ಗುಳುಂ ಮಾಡ್ತೇನೆ. ಯಾವಾಗ ? ಬೆಳಿಗ್ಗೆ ಕೋಣೆಗಳನ್ನೆಲ್ಲ ಗುಡ್ಸಿ ಒರ್ಸಿ ಆದ್ಮೇಲೆ. ಆಮೇಲೆ ನಂಗೆ ಹಸಿವಾಗೋದಿಲ್ಲ. ಮಧ್ಯಾಹ್ನ ಎಲೆ ಎಲ್ಲ ತೆಗೆದು ನೆಲ ಒರ್ಸಿ ಆದ ಮೇಲೆ ನಾ ಊಟಕ್ಕೆ ಕೂರೋದು. ಊಟಾಂತಂದ್ರೆ ನೀವು ತಿನ್ನೋ ಹಾಗೆ ಎರಡು ಅನ್ನದ ಅಗುಳು ಬಾಯಿಗೆ ಹಾಕೋದಲ್ಲಾಯ್ತಾ. ಎರಡು ಸೌಟು ಅನ್ನ ಹಾಗೆ ಗುಳುಂ ಮಾಡ್ತೇನೆ. ನಂಗೆ ಇಂತ ಮೇಲೋಗ್ರವೇ ಬೇಕೂಂತಿಲ್ಲ. ಎಂತ ಸಿಕ್ಕಿದ್ರೂ ನಂಗೆ ಕುಸಿಯೆ. ಹುಳಿ ಮೇಲೋಗ್ರ ಸಿಕ್ಕಿದ್ರೆ ಸೊಲೂಪ ಹೆಚ್ಚು ಕುಸಿ. ಕೆಸೂನಗಡ್ಡೆ ಹುಳಿಮೇಲೋಗ್ರ.'

ನಾವು ಮತ್ತೆಯೂ ಏಮಲತಳ ಹತ್ತಿರಕ್ಕೆ ತಲುಪಿದೆವು. ನಾನು ಮಗುವನ್ನು ಕರೆದೆ.

'ಏಮಲತ.'

ಮಗು ಮತ್ತೂ ತನ್ನ ಬೊಚ್ಚುಬಾಯಿ ಪ್ರದರ್ಶಿಸಿ ಮುಗುಳ್ನಕ್ಕಿತ್ತು.

'ಈ ಮಗೂಗೆ ಗಾಂಧಿಯ ರೂಪುಂಟು' ನಾನು ಹೇಳಿದೆ.

'ಅದೀಗ ಗಮ್ಮತ್ತಾಯ್ತು!' ದೇವಕ್ಕಿ ಸಿಟ್ಟಿನಿಂದ ಹೇಳಿದಳು: 'ಎಲ್ಲೋ ಇರೋ ಗಾಂಧಿಯ ರೂಪು ಈ ಮಗೂಗೆ ಹೇಗೆ ಬರೋದು ? ನೀವು ಬಾಯಿಗೆ ಬಂದದ್ದೆಲ್ಲ ಹೇಳ್ಬಾರ್ದು ಮಗು.'

ಏಮಲತೆಯ ಅಮ್ಮನನ್ನು ನೋಡುತ್ತ ದೇವಕಿ ಮುಂದುವರಿಸಿದಳು: 'ಈ ಮಗೂ ಕಲ್ಕತ್ತೇಲಿ ಬೆಳೆದದ್ದು. ಅದಕ್ಕೆ ಏನು ಹೇಳ್ಬೇಕು, ಏನು ಹೇಳ್ಬಾರ್ದೂಂತ ಗೊತ್ತಿಲ್ಲ. ಅದೇನಾದ್ರೂ ಹೇಳಿದ್ರೆ ನೀವು ತಪ್ಪು ತಿಳ್ಕೋಬಾರ್ದು. ಮಗು ಅಲ್ವ. ಅದಕ್ಕೇನೂ ಗೊತ್ತಿಲ್ಲ. ನಾಲಪ್ಪಾಟ್ಟಿಂದ ದೊಡ್ಡವ್ರೋರು ಬಂದ್ಯಾರೆ. ದೇವಸ್ಥಾನದೊಳಗೆ ನಮಸ್ಕರಿಸ್ತಾರೆ. ಪುಷ್ಪಾಂಜಲಿ ಮುಗಿದು ನಾವು ವಾಪಾಸೋಗ್ತೇವೆ. ಮಗು ಹೇಳಿದ್ದು ಕೇಳಿ ಏನೂ ತಿಳ್ಕೋಬಾರ್ದಾಯ್ತಾ.'

ಏಮಲತೆಯ ಅಮ್ಮ ನೆಲದಿಂದ ಎದ್ದು ನಿಂತಳು. ಮತ್ತೆ ಬಾಗಿ ಮಗುವನ್ನು ತನ್ನ ಕೈಗೆ ತೆಗೆದುಕೊಂಡು ಸೊಂಟದಲ್ಲಿಟ್ಟಳು. ಅವಳ ಮುಂಡು ಜಾರಿ ಹೋಗಿದ್ದುದರಿಂದ ಗುಳಿ ಬಿದ್ದ ಹೊಕ್ಕುಳನ್ನು ಅದರ ಸುತ್ತ ಇದ್ದ ಬಿಳಿಯ ಕಲೆಗಳನ್ನೂ ನಾನು ಅಚ್ಚರಿಯಿಂದ ನೋಡಿ ನಿಂತೆ. ಅವಳ ಒಂದಕ್ಕೊಂದು ತಗಲದ ಬೆರಳುಗಳು ತಾಳೆಗರಿಯ ಬೀಸಣಿಗೆಗಳನ್ನು ನೆನಪಿಗೆ ತಂದವು.

'ನೀವೆಲ್ಲಿಂದ ?' ದೇವಕಿ ಕೇಳಿದಳು.

'ನಾ ಕಡಿಕಾಟ್ಟಿಂದ ಬಂದದ್ದು. ನನ್ನ ಅಣ್ಣನ ಮಗೂನ ಉಟ್ಟಿದಬ್ಬ. ಊಟವುಂಟು. ಅದ್ಕೆ ಬಂದದ್ದು. ಅಷ್ಟೂ ಒತ್ತಾಯ ಮಾಡ್ಡ. ಇಲ್ದಿದ್ರೆ ನಾಬರೋಳಲ್ಲ. ನಂಗೆ ಊಟ ಮಾಡ್ತಾ ನಡೀಲಿಕ್ಕೆ ಎಲ್ಲುಂಟು ಸಮಯ. ಇದು ನನ್ನ ಐದ್ನೆ ಮಗು. ದೊಡ್ಡೋನಿಗೆ ಏಳು ವರ್ಸ ಆಯ್ತುಷ್ಟೆ.'

'ಅಂದ್ರೆ ವರ್ಷವರ್ಷ ಹೆರೋದು, ಅಲ್ವೆ ?'

'ಆಂ, ದೇವರು ಕೊಡೋವಾಗ ಬೇಡಾಂತೇಳ್ಳಿಕ್ಕಾಗೋದಿಲ್ಲಲ್ಲಾ.' ಇದು ಮೊದಲ್ನೇ ಎಣ್ಣು ಮಗು. ಏಮಲತ. ಬಾಕಿದ್ದೋರಿಗೆಲ್ಲ ಇದ್ರ ಮಾವ ಎಸ್ರಿಟ್ಟದ್ದು. ರಾಗವನ್, ಪ್ರಭಾಕರನ್, ಗೋಪಾಲನ್, ಗೋವಿಂದನ್... ಇದ್ರ ಎಸ್ರು ಮಾತ್ರ ಮಾವಲ್ಲ ಇಟ್ಟದ್ದು. ಇದ್ರ ಅಪ್ಪನೇ ಏಳಿದ್ದು ಏಮಲತಾಂತ ಎಸ್ರಿಡ್ಲಿಕ್ಕೆ. ಮೊದಲ್ನೆ ಎಣ್ಣು ಮಗು ಅಲ್ವೆ ? ಕುಟುಂಬದ ಸಂತಾನ. ಇವ್ಳು ದೊಡ್ಡೋಳಾಗಿ ಮದ್ವೆ ಆಗಿ ಆಗ್ಬೇಕಲ್ಲ ಈ ಮನೇದ್ವಾದ ಮಕ್ಳಾಗ್ಲಿಕ್ಕೆ ? ಬಾಲಾರಿಷ್ಟಾಯ್ತಾ. ಪಣಿಕ್ಕರತ್ರ ಜಾತಕ ಬರ್ಸಿದೆ. ಅತ್ತು ವಯಸ್ಸಿನವರೆಗೆ ಬಾಲಾರಿಷ್ಟ. ಅದು ಸರೀಯೆ. ಉಟ್ಟಿದವತ್ತಿನಿಂದ ಇಲ್ಲಿವರ್ಗೆ ಇದ್ಕೆ ಸೊಲ್ಪಾನೂ ಸುಕ ಇರ್ಲಿಲ್ಲ. ಕೋಟ್ಲೆ, ಜೊರ, ಹೊಟ್ಟೆನೋವು, ವಾಂತಿ, ಸೆಕೊಬೊಕ್ಕೆ, ಗ್ರಯಿಣಿ ಎಲ್ಲ ಇದಕ್ಕುಂಟು. ಏಮಲತೆಗಾಯ್ತಾ. ಏಮಲತೆಗಿಲ್ಲದ ರೋಗ ಲೋಕದಲ್ಲಿರ್ಲಿಕ್ಕಿಲ್ಲ. ಎಷ್ಟು ದುಡ್ಡು ಕರ್ಚಾಯ್ತು. ಕಷಾಯ, ಕಾಯ್ಸಿದ ಎಣ್ಣೆ ಎಲ್ಲ ಸೇರಿ ಎಷ್ಟು ದುಡ್ಡು ಕರ್ಚಾಯ್ತು ಗೊತ್ತುಂಟಾ ?'

'ಆದ್ರೂ ಮಗು ನಿಮ್ಗೆ ಸಿಕ್ಕಿ ಬಿಡ್ತಲ್ಲ' ದೇವಕಿ ಹೇಳಿದಳು. ಅವಳು ತನ್ನ ತಲೆಯಿಂದ ಒಂದು ಹೇನು ಒಕ್ಕಿ ತೆಗೆದು ಉಗುರುಲ್ಲಿಟ್ಟು ಇನ್ನೊಂದು ಉಗುರಿನಿಂದ ಅದನ್ನು ಜಜ್ಜಿದಳು. ಆಮೇಲೆ ರಕ್ತದ ಕಲೆಯಿಂದ ಕೂಡಿದ ಕೈಯನ್ನು ಮುಂಡಿಗೆ ಒರಸಿದಳು.

'ಅದು ನಿಜ. ಮಗೂ ಸಿಕ್ಕಿ ಬಿಡ್ತಲ್ಲ. ದುಡ್ಡು ಓದ್ರೂ ಏಮಲತ ಸಿಕ್ಕಿಬಿಟ್ಟಲ್ಲ.'

'ನಮ್ಮ ತಂಡಿಯತ್ತಿನಲ್ಲೂ ಇದ್ದಾಳೆ, ಒಬ್ಳು ಏಮಲತ. ಅದಕ್ಕೆ ಹತ್ತು ವಯಸ್ಸಿಬರ್ೋದು' ದೇವಕಿ ಹೇಳಿದಳು.

'ಕಾಳತ್ತಿಂಗಳಿನ ಕೊಚ್ಚುವಮ್ಮೆಯ ಎರಡನೇ ಮಗಳನ್ನು ನಾ ನೋಡಿದೆ. ಮಾಲಿನೀಂತ ಎಸ್ರು. ನೋಡ್ಲಿಕ್ಕೆ ಎಂತ ಚಂದ ಗೊತ್ತುಂಟಾ ? ಕೆಂಪು ಸಿಲ್ಕಿನ ಅಂಗಿಯೂ, ಕಿವಿಯಲ್ಲಿ ಲೋಲಾಕೂ. ಹಣೆಯಲ್ಲಿ ಗಂಧದ ಬೊಟ್ಟೂ....'

'ನಂಗೆ ಅವರ್ನೆಲ್ಲ ಗೊತ್ತಿಲ್ಲ. ನಾಯೆಲ್ಲೂ ಹೋಗೋದಿಲ್ಲ. ಈ ಮಗೂನ್ನ ನೋಡೋದೇ ನನ್ಕೆಲ್ಸ. ನಂಗೆ ಈ ಊರ್ನಲ್ಲಿ ಯಾರ್ದೂ ಗುರ್ತಿಲ್ಲ. ಗುರ್ತು ಮಾಡ್ಲಿಕ್ಕೆ ಆಸೆಯೂ ಇಲ್ಲ. ನಂಗೆ ಮನೆಮನೆ ಹತ್ತೀ ಇಳ್ದು ಪಂಚಾತಿಗೆ ಮಾಡ್ಕೊಂಡು ನಡಿಯೊ ಸೊಬಾವವೂ ಇಲ್ಲ. ನಮ್ಮನ್ಲೇ ಹೆಂಗಸ್ರು ಮನೇಂದ ಹೊರಗೆ ಹೋಗೋದಿಲ್ಲ. ಏನಾದ್ರೂ ಕೆಲ್ಸಿದ್ರೆ ಅದು ಮಾಡೋದು. ಆಮೇಲೆ ಒಂದ್ಕಡೆ ಕೂತ್ಕೊಳ್ಳೋದು. ದೇವರ ನಾಮ ಹೇಳೋದು. ಕೆಲ್ಸಿಲ್ಲಾಂತಿದ್ರೆ ಸೊಲ್ಪ ದೇವ್ರ ನಾಮ ಪೇಳ್ಬೋದಲ್ಲ. ಎಷ್ಟು ದೇವ್ರ ನಾಮ ಜಪಿಸ್ತಾರೊ ಅಷ್ಟು ಪುಣ್ಯ ಸಿಗ್ತದೆ. ಅದು ಗೊತ್ತುಂಟೊ ?'

'ನಿಮ್ಮ ಎಸ್ರೇಂತ ?' ಏಮಲತೆಯ ಅಮ್ಮ ದೇವಕಿಯನ್ನು ಕೇಳಿದಳು.

'ನನ್ನ ಪೆಸ್ರು ದೇವಕೀಂತ. ನನ್ನ ಊರು ನನ್ನಂಪುುಕ್ಕ. ನಿಮ್ಮನ್ನು ನೋಡಿದಾಗ ನಂಗೆ ಕುಷಿಯಾಯ್ತು. ಅದ್ಕೇ ನಾನು ನನ್ನ ಹೆಸ್ರು ಹೇಳಿದ್ದು. ಬೇರೆ ಯಾರಾದ್ರೂ ಪೆಸ್ರು ಕೇಳಿದ್ರೆ ನಾಯೇಳೋದಿಲ್ಲ. ನನ್ನ ಸೊಬಾವವೇ ಹಾಗೆ. ಪೆಸ್ರೇಂತಾಂತ ಕೇಳಿದ್ರೆ ನಾಯೇಳ್ತೀನೆ. ನನ್ನೆಸ್ರು ಪೇರಳೆ ಕಾಯಿ; ನನ್ನೆಸ್ರು ಪೇರಳೆ ಕಾಯಿ.'

ದೇವಕಿ ತನ್ನ ಮಾತಿನಲ್ಲಿ ತಾನೇ ಮುಳುಗಿದಳೋ ಎಂಬಂತೆ ಗಟ್ಟಿಯಾಗಿ ನಕ್ಕಳು. ದೇವಸ್ಥಾನದ ಗೋಪುರದಲ್ಲಿ ದೀಪಸ್ತಂಭದ ಎದುರಿಗೆ ನಮಸ್ಕರಿಸುತ್ತಾ ನಿಂತ ಗಂಡಸರು ಅವಳನ್ನು ನೋಡಿದರು.

'ಅಗೊಳ್ಳಿ, ನಿಮ್ಮನ್ನು ನೋಡ್ತಿಯಾರೆ.' ಪಮಲತೆಯ ಅಮ್ಮ ಹೇಳಿದಳು.

'ಯಾರು ?' ದೇವಕಿ ಕೇಳಿದಳು.

'ಕೈಮುಗೀತಾ ನಿಂತ ಗಂಡಸ್ರು. ನಿಮ್ಮ ನಗೆ ಕೇಳಿ ಅವ್ರು ನಿಮ್ಮನ್ನು ನೋಡಿದ್ದು.'

'ನೋಡೋರೆಲ್ಲ ನೋಡ್ಕೊಳ್ಳಿ. ನಂಗೇನು ನಷ್ಟ ? ಮೈಲೆಲ್ಲ ಕಪ್ಪು ರೋಮ ಬೆಳೆದ ಕೆಲೋರು ಕೈಮುಗೀತ ನಿಂತ್ಕೊಂಡಿದ್ದಾರೇಂತ ನಾ ನಗ್ಬಾರ್ದಾ ? ನನ್ನ ಬಾಯಿ ಮುಚ್ಚಿಸ್ಲಿಕ್ಕೆ ಕೂಡೀತಾ ? ಹೆಣ್ಣಾಡಿಗೇರು ನಗೋದನ್ನು ನೋಡ್ತಾ ನಿಲ್ಲಿಕ್ಕೇ ಕೆಲೋರು ದೇವಸ್ಥಾನಕ್ಕೆ ಬರೋದು. ಗೋಯಿನ್ನೋರದ ದೈವವನ್ನು ನೋಡೋದಕ್ಕೆ ಬಾಕಿರೋರು ಬರೋದು.'

'ಮಾತಾಡ್ದೆ ನಿಂತ್ಕೊಳ್ಳಿ ದೇವಕಿಯಮ್ಮ' ಪಮಲತೆಯ ಅಮ್ಮ ಹೇಳಿದಳು.

'ನನ್ನ ಮಾತು ನಿಮ್ಗೆ ಇಷ್ಟಾಗ್ಲಿಲ್ಲಾಂತಿದ್ರೆ ನೀವು ಮಗೂನ್ನ ತಕ್ಕೊಂಡು ಕಡಿಕ್ಕಾಟ್ಟಿಗೆ ವಾಪಾಸೋಗ್ಬಿಡಿ. ನನ್ನ ಬಾಯಿ ಮುಚ್ಚಿಸ್ಲಿಕ್ಕೆ ಈ ಭೂಮೀಲಿ ಯಾರಿಗೂ ಸಾಧ್ಯವಿಲ್ಲ. ನಂಗೆ ಯಾರ್ದೂ ಹೆದ್ರಿಕಿಲ್ಲ. ದೊಡ್ಡಮ್ಮೋರ ಪೂಜೆ ಮುಗಿದ್ರೆ ನಾವೋಗ್ತೇನೆ. ಅಂಗಿ ಬನಿಯನ್ನು ತೆಗೆದು ರೋಮ ತೋರಿಸ್ತಾ ನಮಸ್ಕರಿಸಿ ನಿಲ್ಲೋ ನಾಯರ್ ಗಂಡಸ್ರನ್ನು ನೋಡೋದಲ್ಲ ನನ್ನ ಕೆಲ್ಸ. ನನ್ನ ಕೆಲ್ಸ ಅಲ್ಲಿ ಹೋದ್ಮೇಲೆ ಸುರುವಾಗ್ತದೆ, ಗೋಪುರದಲ್ಲೂ, ಮೇಲ್ಗಡೇಲೂ, ನಡುಕೋಣೇಲೂ ನೆಲ ಒರ್ಸಿ ಗೊದ್ದಡಿಗಳನ್ನು ಬಿಡಿಸೋದು. ಬಚ್ಚಲು ಮನೇಲಿ ನೀರಿಡೋದು. ಕುಡೀಲಿಕ್ಕೆ ಚುಕ್ಕು ನೀರು ಮಾಡಿಡೋದು. ನಂಗಿಲ್ಲಿ ಮಾತಾಡ್ತಾ ನಿಲ್ಲಿಕ್ಕೆ ಸಮಯವಿಲ್ಲ. ಈ ದೊಡ್ಡಮ್ಮೋರ್ಗೇನಾಯ್ತು ? ಸಮಯ ತುಂಬಾ ಆಯ್ತಲ್ಲ. ನಾವೋಗಿ ನೋಡ್ತೇನೆ. ನೀವಿಲ್ಲಿಂದ ಹೋಗ್ಬೇಡಿ ಮಗೂ. ಯಾರಾದ್ರೂ ಹಿಡ್ಕೊಂಡೋದಾರು. ನಾವೋಗಿ ನೋಡ್ತೇನೆ, ದೊಡ್ಡಮ್ಮೋರೆಂತಮಾಡ್ತಾರೇಂತ.'

ದೇವಕಿ ದೇವಸ್ಥಾನದ ಒಳಗಡೆ ಹೋದಾಗ ಪಮಲತೆಯ ಅಮ್ಮ ನನ್ನಲ್ಲಿ ಕೇಳಿದಳು:

'ನಿಮ್ಮ ಅಮ್ಮನೂ ಅಪ್ಪನೂ ದರ್ಶನಕ್ಕೆ ಯಾಕೆ ಬರ್ಲಿಲ್ಲ.'

'ಅವರು ಇಲ್ಲಿಲ್ಲ. ಕಲ್ಕತ್ತೇಲಿ.'

'ಅದಲ್ಲಿ ?'

'ನಂಗೊತ್ತಿಲ್ಲ.'

ಅಜ್ಜಿಯ ಕೈಹಿಡಿದು ಒಂದು ತೋಡು ದಾರಿಯಲ್ಲಿ ನಾಲಪ್ಪಾಟ್ಟಿಗೆ ಹಿಂದಿರುಗುವಾಗ ನಾನು ಹೇಳಿದೆ. 'ಆ ಮಗೂನ ಹೆಸ್ರು ಪಮಲತೆಯಂತೆ.'

'ಪಮಲತೆಯೊ ? ಹೇಮಲತೇಂತ ಇರ್ಬೇಕು. ಪಮಲತೇಂತ ಹೆಸ್ರಿಲ್ಲ.'

'ನಾನೂ ಕೇಳಿದೆ ದೊಡ್ಡಮ್ಮೋರೆ, ಅದ್ರ ಅಮ್ಮ ಅದನ್ನು ಪಮಲತಾಂತ ಕರೆಯೋದು. ಮಗು ಹೇಳಿದ್ದು ಸತ್ಯ.'

'ಪಮಲತಾಂತ ಒಂದು ಹೆಸ್ರನ್ನು ನಾನು ಇದೇ ಮೊದಲು ಕೇಳಿದ್ದು'

ಅಜ್ಜಿ ನಗುತ್ತಾ ಹೇಳಿದರು.

'ಮಗು ಒಂದು ಕಾಸಿಗೂ ಪ್ರೇಜನಕ್ಕಿಲ್ಲ. ಆದ್ರೆ ಹೆಸ್ರು ಮಾತ್ರ ಒಳ್ಳೆ ಉಂಟು' ದೇವಕಿ ಅಭಿಪ್ರಾಯಪಟ್ಟಳು.

'ಈ ಸರ್ತಿ ಏನೂ ಪ್ರೇಜನ ಇಲ್ಲ' ಮಡಪ್ಪಿಲಾಯಿಯ ಶಂಕುಣ್ಣಿ ನಾಯರ್ ತೆಂಕಮೂಲೆಯ ಕಡೆಗೆ ನೋಡುತ್ತ ಗಟ್ಟಿಯಾಗಿ ಹೇಳಿದರು. ಕುಡಿಕೆಯ ಎದುರು ಕುಳಿತು ಮೊಸರು ಕಡೆಯುತ್ತಿದ್ದ ಅಜ್ಜಿ ಒಮ್ಮೆಲೆ ಬಿಳಚಿದರು. ಅವರು ಎದ್ದು ನಿಂತಾಗ ನಾನೂ ಅವಸರವಾಗಿ ಎದ್ದೆ.

'ಎಷ್ಟು ಕಾಯಿಗಳಿದ್ದುವು ?' ಅಜ್ಜಿ ಕೇಳಿದರು.

ಶಂಕುಣ್ಣಿ ನಾಯರ್ ಬಾಯಲ್ಲಿದ್ದ ತಾಂಬೂಲರಸವನ್ನು ಅಂಗಳಕ್ಕೆ ಉಗುಳಿದರು:

'ಕಳೆದ ಸಲ ಸಿಕ್ಕಿದ್ದರ ಅರ್ಧ' ಅವರು ಹೇಳಿದರು: 'ಮುಕ್ಕಾಲೂ ಬಲಿಯದ್ದು. ತೆಂಗಿನಕಾಯಿ ಇರೋದಾದ್ರೂ ಹೇಗೆ ? ತೆಂಗಿನ ಬುಡ ಅಗೆಯದೆ ಕಾಲೆಷ್ಟಾಯ್ತು ? ಗೊಬ್ರ ಹಾಕಿಸ್ದೆ ಕಾಲೆಷ್ಟಾಯ್ತು ?' ಅಜ್ಜಿಯವರ ಬಗ್ಗೆಯಿರುವ ತಾತ್ಸಾರ ಪ್ರದರ್ಶಿಸಲಿಕ್ಕೇ ಇರಬೇಕು, ಅವರು ತನ್ನ ಕೈಯನ್ನು ಜೋರಾಗಿ ಝಾಡಿಸಿದರು. ಕೈಗಳಿಂದ ನೀರನ್ನು ಝಾಡಿಸಿ ತೆಗೆಯುತ್ತಿರಬೇಕು ಆ ಮುದುಕನೆಂದು ನಾನು ತಪ್ಪಾಗಿ ಭಾವಿಸಿದೆ. ಹತ್ತಿರ ಹೋಗಿ ಅಂಗ್ಯೆಯನ್ನು ಮುಟ್ಟಿನೋಡಿದಾಗ ನೀರಪಸೆಯೇ ಇಲ್ಲದ್ದೂ ಒಣಗಿ ಬರಡಾಗಿದ್ದದ್ದೂ ನನಗೆ ಗೋಚರಿಸಿತು.

'ವಾಕ್ಕೇಲದ ತೋಟಗಳ ಸ್ಥಿತಿ ಹೇಗಿದೆ ?' ಅಜ್ಜಿ ಕೇಳಿದರು.

'ಒಂದು ಚೂರೂ ಚೆನ್ನಾಗಿಲ್ಲ.'

ಅವರು ಮತ್ತೊಮ್ಮೆ ಕೈಗಳನ್ನು ಝಾಡಿಸಿದರು.

'ಚಾನ್ನಾತ್ತೇಲೆಯ ಹಿತ್ಲಲ್ಲೊ ?'

'ಒಂದು ಚೂರೂ ಇಲ್ಲಾಂತ.'

'ಮಡಪ್ಪಿಲಾಯಿ ಹಿತ್ಲಲ್ಲೊ ?'

'ಅಲ್ಲಿ ತುಂಬ ಬೆನ್ನಂಗಾಯಿ ಬಿದ್ದಿದೆ. ಅದೆಲ್ಲ ಹೆಕ್ಕಿತಂದು ಇಲ್ಲಿಯ ಕಟ್ಟಿಗೆ ಮನೇಲಿ ಹಾಕ್ಲಿಕ್ಕೆ ಹೇಳಿದ್ದೇನೆ.'

'ಸರಿ. ಮಾಡೋದೇನು ? ಸಿಕ್ಕಿದ್ದು ಸಿಕ್ತು. ದುಡ್ಡು ಕೊಡಿ' ಅಜ್ಜಿ ಕೈ ಚಾಚಿದರು.

ಕಾರುಭಾರಿ ಸೊಂಟದ ಮಡಿಕೆಯಿಂದ ಮುದುಡಿದ ನೋಟುಗಳನ್ನು ತೆಗೆದು ಅಜ್ಜಿಯ ಕೈಯಲ್ಲಿಟ್ಟರು.

'ಎಲ್ಲ ಸೇರಿ ಎಷ್ಟಿದ್ದೀತು ಶಂಗುಣ್ಣಿನಾಯ್ರೆ ?' ಅಜ್ಜಿ ಕೇಳಿದರು.

'ನಾಯೇಳಿದ್ನಲ್ಲ ? ಕಳೆದ ಸಲ ಸಿಕ್ಕಿದ್ದಕ್ಕಿಂತ ಅರ್ಧ. ಅಷ್ಟೆ.'

ಅಜ್ಜಿ ಎರಡು ಸಲ ದುಡ್ಡು ಲೆಕ್ಕ ಮಾಡಿದರು. ಆಮೇಲೆ ಅದನ್ನು ತೆಗೆದುಕೊಂಡು ಮೇಲ್ಗಡೆಗೆ ಹೋದರು.

ಅಜ್ಜಿ ತನ್ನ ಮುಂಡು ತುಂಬಿಸಿಡುವ ಪೆಟ್ಟಿಗೆಯಲ್ಲಿ ಹಣ ತೆಗದಿರಿಸುವುದನ್ನೂ ಬೀಗದ ಕೈಯನ್ನು ಬಾಗಿಲಿನ ದಾರಂದದಲ್ಲಿ ಅಡಗಿಸುವುದನ್ನೂ ನಾನು ಗಮನಿಸುತ್ತಿದ್ದೆ.

'ಎಂಥ ಬಿಸಿ ಈ ಬಿಸಿಲಿಗೆ. ನಾ ಸ್ವಲ್ಪ ಇಲ್ಲಿ ಕೂತ್ಕೊಳ್ತೀನೆ' ಶಂಕುಣ್ಣಿ ನಾಯರ್ ಹೇಳಿದರು.

ಮಡಪ್ಪಿಲಾಯಿ ಶಂಕುಣ್ಣಿ ನಾಯರಿಗೆ ಹೆಂಗಸರಂತೆ ಮೊಲೆಗಳೂ ದಪ್ಪನೆಯ ಮೊಲೆ ತೊಟ್ಟುಗಳೂ ರೋಮರಹಿತವಾದ ಶರೀರವೂ ಇತ್ತು. ನರೆತ ಕೂದಲಿನ ಜುಟ್ಟು ತಲೆಯ ಎಡಕ್ಕೆ ತೂಗುತ್ತಿತ್ತು. ಮೈಯೊರಸುವ ಬಟ್ಟೆಯನ್ನು ಸೊಂಟಕ್ಕೆ ಕಟ್ಟಿಕೊಂಡು ವೇಗವಾಗಿ ನಡೆದು ಬರುವಾಗ ಆ ಮುದುಕ ಏದುಸಿರು ಬಿಡುತ್ತಿದ್ದರು. ಹಣೆಯಲ್ಲೂ ಎದೆಯ ಮೇಲೂ ತೋಳುಗಳಲ್ಲೂ ಒದ್ದೆ ಭಸ್ಮದ ನಾಮವನ್ನವರು ಬಳಿಯುತ್ತಿದ್ದರು. ಅವರು ಬರುವಾಗಲೆಲ್ಲ ನನ್ನ ಪಾಪದ ಅಜ್ಜಿ ತಾನು ಮಾಡುತ್ತಿದ್ದ ಕೆಲಸವನ್ನು ಪೂರ್ತಿಗೊಳಿಸದೇನೇ ಎದ್ದು ತೆಂಕಮೂಲೆಯ ತೆಂಕಲಾಗೆ ಇರುವ ಬಾಗಿಲ ಬಳಿಗೆ ಓಡಿ ತಲುಪುತ್ತಿದ್ದರು. ತೆಂಗಿನಕಾಯಿ, ಮಡಲು, ಓಲೆ ಇತ್ಯಾದಿ ಮಾರಿಸಿಕ್ಕುವ ಹಣವನ್ನು ಅವರು ಅಜ್ಜಿಯ ಕೈಯಲ್ಲಿ ಕೊಡುತ್ತಿದ್ದರು. ಅದು ಹಾಗೂ ತಂದೆ ಕಲ್ಕತ್ತಾದಿಂದ ನಮ್ಮ ಅಗತ್ಯಕ್ಕಾಗಿ ಕಳುಹಿಸುತ್ತಿದ್ದ ಹಣವನ್ನು ಅಜ್ಜಿ ಮನೆವಾರ್ತೆಗಾಗಿ ಬಳಸುತ್ತಿದ್ದರು.

'ಕರ್ಕಾಟಕ ಮಾಸ ಬರ್ತಾ ಇದೆ. ಸ್ವಲ್ಪ ಖರ್ಚು ಮಾಡಿದ್ರೆ ಮುಂದಿನ ಸಲ ಒಡಿಯುವಾಗ ಒಳ್ಳೆ ಆದಾಯ ಬರ್ತೋದು. ನಾ ಎಷ್ಟು ಸಲಾಂತ ಹೇಳೋದು. ಆ ಏಯನ್ನಾಯರಿಗೆ ಒಂದು ಕಾಗದ ಕಳಿಸಿದ್ರೆ ಸಾಲದಾ ? ದುಡ್ಡಿಲ್ಲಿದ್ರೆ ಕಲ್ಕತ್ತಾದಿಂದ ಕಳಿಸಿ ಕೊಟ್ಟಾರಲ್ಲ. ಇಲ್ಲಿಯ ತೆಂಗು ಕಾಯಿಬಿಟ್ರೆ ಇಲ್ಲಿಯ ಹುಡುಗ್ಯೇರಿಗಲ್ವ ಅದರ ಲಾಭ ?

ಶಂಕುಣ್ಣಿ ನಾಯರ್ ಗೋಡೆಗೆ ಆತು ಕುಳಿತು ಮೈಯೊರೆಸುವ ಬಟ್ಟೆ ಬಿಚ್ಚಿ ಬೀಸತೊಡಗಿದರು.

'ಈ ಮಗೂ ಯಾಕೆ ಹೀಗೆ ಕಂಗಾಲಾದ್ದು ? ಇದಕ್ಕೆ ಗ್ರಹಣ ಉಂಟಾ ?' ಅವರು ದೇವಕಿಯನ್ನು ಕೇಳಿದರು. ದೇವಕಿ ಹಗ್ಗದಲ್ಲಿ ಬಟ್ಟೆಗಳನ್ನು ಒಣಗಲು ಹಾಕುತ್ತಿದ್ದಳು. ಅವಳು ಅನಾಸಕ್ತಿಯಿಂದ ಶಂಕುಣ್ಣಿ ನಾಯರನ್ನು ದುರುಗುಟ್ಟಿ ನೋಡಿದಳು.

'ಹುಳದ ಉಪದ್ರ ಏನಾದ್ರೂ ಇದ್ದೀತು. ಇಲ್ದಿದ್ರೆ ಹೀಗೆ ಕಂಗಾಲಾಗ್ಲಿಕ್ಕಿಲ್ಲ' ಶಂಕುಣ್ಣಿನಾಯರ್ ನನ್ನ ಲಂಗ ಎತ್ತಿ ಹೊಟ್ಟೆನೋಡಿಕೊಂಡು ಹೇಳಿದರು.

'ಅದಕ್ಕೆ ಗ್ರಹಣವೂ ಇಲ್ಲ. ಹುಳದ ಉಪದ್ರವೂ ಇಲ್ಲ' ದೇವಕಿ ಹೇಳಿದಳು.

'ಹುಳದ ಉಪದ್ರ ಇಲ್ವ ಮಕ್ಕೆರ್ತಾರಾ ? ಅದಲ್ಲ ದೊಡ್ಡ ಸಂಗತಿಯಲ್ಲ. ಭದ್ರಮುಷ್ಟಿ ಜಜ್ಜಿ ಆಡಿನ ಹಾಲಿನಲ್ಲಿ ಕೊಟ್ರಾಯ್ತು ?

'ಅದು ದನದ ಹಾಲು ಕೂಡ ಕುಡಿಯೋದಿಲ್ಲ. ಮತ್ತಲ್ವ ಆಡಿನ ಹಾಲು ಕುಡಿಯೋದು ? ಈ ಮಗು ಏನೂ ತಿನ್ನೋದಿಲ್ಲ. ಒಂದು ಸೊಲ್ಪ ಬೆಣ್ಣೆ ಅನ್ನದೊಟ್ಟಿಗೆ ಒಳಗ ಹೋಗ್ಬೇಕಿದ್ರೆ ದೊಡ್ಡವ್ರೋರಿಲ್ಲಿ ಎಂತ ಪಾಡು ಪಡ್ತಾರೆ. ಮಗೂಗ ಬೇರೇನೂ ತೊಂದ್ರೆ ಇಲ್ಲ. ಅದ್ಕೆ ಒಳ್ಳೆ ಬಣ್ಣವೂ ಒಳ್ಳೆ ತೋರವೂ ಇತ್ತು. ಕಲ್ಕತ್ತೆಗೆ ಕೊಂಡೋಗಿ ಎಲ್ಲ ಹಾಳು ಮಾಡಿದ್ರು.

'ಅದು ಸರಿ. ಕಲ್ಕತ್ತೆಗೆ ಕೊಂಡೋಗಿ ಹಾಳು ಮಾಡಿದ್ದು. ಈಗ ಓಂದಿನ ಮಂಗೂಂತಲೇ ತೋರೋದಿಲ್ಲ.'

ಶಂಕರನ್ ಕೋಣೆಯ ಕಡೆಗೆ ಬರುತ್ತ ಹೇಳಿದ.

'ಮಗೂ, ಅಲ್ಲಿ ಇಡಿಯಕ್ಕಿ ಅನ್ನ ಊಟಮಾಡಿದ್ದಾ ಅಲ್ಲ ಹಳೆ ಅಕ್ಕಿಯದ್ದಾ?'

'ಅಲ್ಲಿ ರೇಷನಕ್ಕಿಯಲ್ಲವಾ' ಬಾಲಾಮಣಿಯಮ್ಮ ಹೇಳಿದಳು.

'ಅಲ್ಲಿ ಅಕ್ಕಿ ರೇಷನ್ನಲ್ಲಿ ಸಿಕ್ಕೋದೂಂತ. ಅಲ್ಲಿ ಯುದ್ಧ ನಡೀತಿದೆಯಲ್ಲ' ಶಂಕರನ್ ಹೇಳಿದ.

'ಕಲ್ಕತ್ತೆಯಲ್ಲಿ ಯುದ್ಧವುಂಟಾ?' ಶಂಕುಣ್ಣಿ ನಾಯರ್ ಕೇಳಿದರು.

'ಯುದ್ಧದ ಸಂಗತಿ ಹೇಳೋದು ಬೇಡಾಯ್ತಾ. ನಂಗೆ ಯುದ್ಧದ ಹೆಸರು ಕೇಳಿದ್ರೆ ಹೊಟ್ಟೆ ಒಳಗೆ ಏನೋ ಒಂಥರ ಸಂಕಟ ಪ್ರಾರಂಭ ಆಗ್ತದೆ' ದೇವಕಿ ಹೇಳಿದಳು.

'ಹಾಗಾದ್ರೆ ಯುದ್ಧವೇ ಇಲ್ಲಿಗೆ ಬಂದ್ರೆ?' ಶಂಕರನ್ ಕೇಳಿದ.

'ನೀವು ಕೇಳಿದ ಪ್ರಶ್ನೆಯೀಗ ಗಮ್ಮತ್ತಾಯ್ತು. ಯುದ್ಧ ಇಲ್ಲಿಗ್ಬಂದ್ರೋ? ನಾವಾಗ ಏನು ಮಾಡ್ತಾ?' ಉಣ್ಣಿಮಾಯ ಅಂಗಳದಲ್ಲಿ ನಿಂತುಕೊಂಡು ನಗುತ್ತ ಕೇಳಿದಳು.

'ನಾನ್ನನ್ನ ಮನೆಗೋಗ್ತೇನೆ' ದೇವಕಿ ಹೇಳಿದಳು.

'ಯುದ್ಧ ನನ್ನಂಮುಕ್ಕಕ್ಕೂ ಒರ್ತದೆ. ಸೈನ್ಯದೋರು ನಿಮ್ಮ ಮನೆಗ್ಬಂದು ನಿಮ್ಮನ್ನೂ ವಿಚಾರಣೆ ಮಾಡ್ತಾರೆ' ಶಂಕರನ್ ಹೇಳಿದ.

'ಅಯ್ಯೋ, ನಂಗೆ ಸಾಧ್ಯಯಿಲ್ಲಪ್ಪ. ನನ್ನ ಕಾಲು ನಡುಗ್ತದೆ' ಅವಳು ಕೋಣೆಯಲ್ಲಿ ಕಾಲು ಚಾಚಿ ಕುಳಿತು ನನ್ನನ್ನು ನೋಡಿ ಅಳತೊಡಗಿದಳು.

'ದೇವಕಿ ಅಳ್ಳಿಕ್ಕೆ ಶುರುಮಾಡಿದ್ಲು' ನಾನು ಹೇಳಿದೆ.

'ಈ ಅಮ್ಮೋರ್‌ಗೆ ಯಾವಾಗ್ಲೂ ಅಳೋದು ಗೋಳಿಡೋದೇ ಕೆಲ್ಸ. ಯುದ್ಧ ಬರ್ತದೇಂತ ನೀವೀಗ್ಲೇ ಅಳೋದಕ್ಕೆ ತೊಡಗೋದೆ? ನಾಯೇನು ಹೇಳೋದೂಂತಂದ್ರೆ ನೀವು ಹುಟ್ಟಿದ್ರಿ. ಇನ್ನು ನೀವು ಯಾವಾಗಾದ್ರೂ ಸತ್ತೇ ಸಾಯ್ತೀರಿ. ಸಾಯದವರಿಲ್ವಲ್ಲ? ಮತ್ತು ಈಗ್ಲೇ ಆ ಸಂಗ್ತಿ ಹೇಳಿ ನಿಮ್ಗೇನು ಸಿಕ್ಲಿಕ್ಕಿದೆ ಅಮ್ಮೋರೆ?' ಉಣ್ಣಿಮಾಯ ಕೇಳಿದಳು.

'ಉಣ್ಣಿಮಾಯ ಹೇಳಿದ್ದೇ ಸರಿ' ಶಂಕರನ್ ಎಂದ.

'ಸ್ವಲ್ಪ ಮಜ್ಜಿಗೆ ನೀರು ತರ್ತೀರಾ? ನಂಗೆ ಕಂಡಾಪಟ್ಟೆ ಬಾಯಾರಿಕೆ' ಶಂಕುಣ್ಣಿ ನಾಯರ್ ಕೇಳಿದರು.

'ಮಜ್ಜಿಗೆ ನೀರೆಲ್ಲ ದೊಡ್ಡಮ್ಮೋರು ಛತ್ರಕ್ಕೆ ಕೊಂಡೋದ್ರು. ಇಸ್ಲಿಲ್ಲಿ ಮಜ್ಜಿಗೆ ಅನ್ನಕ್ಕಿಟ್ಟದ್ದು ಮಾತ್ರ ಉಂಟಷ್ಟೆ.'

'ಅಯ್ಯಯ್ಯೊ. ಇಲ್ಲಿರೋರನ್ನು ಅವಾಸ್ತಿಸ್ಬೇಡ.... ಬೇಕಾದಷ್ಟು ಮಜ್ಜಿಗೆ ಹೊರಗಿನ ಮನೇಲಿ ಭರಣೀಲುಂಟು. ನಾನು ತಂದು ಕೊಡ್ತೇನೆ' ಶಂಕರನ್ ಹೇಳಿದ.

'ಶಂಕರನ್ ನಾಯರ್‌ಗೆ ಪಿಟ್ಟಾಸಿತನ ಇಲ್ಲ. ದೇವಕಿ ಅಮ್ಮೋರ್ ಬಾರೀ ಪಿಟ್ಟಾಸಿ' ಉಣ್ಣಿಮಾಯ ಹೇಳಿದಳು.

ಶಂಕುಣ್ಣಿನಾಯರ್ ನನ್ನನ್ನು ಹತ್ತಿರ ಕರೆದು ಕಿವಿಯಲ್ಲಿ ಹೇಳಿದರು; 'ಸ್ವಲ್ಪ ಪರಿಮಳದ ಹೊಗೆಸೊಪ್ಪು ತರ್ತೀಯಾ? ಮಾವನ ಚೀಲದಲ್ಲಿರ್ಬೋದು, ಮಾವ ಕಾಣದಾಗೆ ತಂದು ಕೊಡ್ತೀಯಾ ಮಗೂ.'

'ಇಲ್ಲ' ನಾನು ಹೇಳಿದೆ.

'ನಿಂಗೆ ನನ್ನತ್ರ ಸಿಟ್ಯಾಕೆ ಮಗೂ? ನಾನು ನಿಂಗೆ ಚೆಂಡ್ಲಕಾಯಿಯಲ್ಲಿ ಗಾಡಿ ಮಾಡಿಕೊಡೋದಿಲ್ವೆ? ನಿನ್ನ ಓಲೆ ಪೀಪಿ ಮಾಡಿಕೊಡ್ಲಿಲ್ವಾ? ಜಾಣಮಗು ಅಲ್ವಾ, ಸ್ವಲ್ಪ ಹೊಗೆಸೊಪ್ಪು ತಂದ್ಕೊಡೋಗು.'

'ಇಲ್ಲ.'

'ಒಂದು ತುಂಡು ಹೊಗೆಸೊಪ್ಪು ಚೀಲದಿಂದ ತೆಗ್ದ್ರೆ ಆಕಾಶೇನೂ ಬಿದ್ದೋಗ್ಲಿಕ್ಕಿಲ್ಲ ಮಗೂ.'

'ನಿಮ್ಗೆ ಹೊಗ್ಸೊಪ್ಪು ಬೇಕಿದ್ರೆ ಮಗೂನ್ಯಾಕೆ ಕಿರಿಕಿರಿ ಮಾಡೋದು? ದೊಡ್ಡಮ್ಮನ ಚೀಲದಿಂದ ನಾನು ತೆಗೆದು ಕೊಡ್ತೇನೆ' ದೇವಕಿ ಹೇಳಿದಳು.

'ಅದು ಮಾಮೂಲಿ ಹೊಗ್ಸೊಪ್ಪಲ್ವೆ? ನಂಗೆ ಪರಿಮಳದ ಹೊಗ್ಸೊಪ್ಪು ತಿನ್ಲಿಕ್ಕೊಂದಾಸೆ. ಕೆಲದಿವ್ಸಾಯ್ತು. ನಂಗೆ ಬಾಯೆಲ್ಲ ಒಣಗೋದು. ಗಂಟ್ಲಲ್ಲೂ ನೀರ ಪಸೆಯಿಲ್ಲ. ಬಾಯಲ್ಲಿ ಹೊಯ್ಗೆ ತುಂಬಿದ ಹಾಗೆ ತೋರೋದು. ಇದೊಂಥರಾ ಅಸೌಖ್ಯ. ನಾವೋಗಿ ಶಂಕುಣ್ಣಿ ಪಣಿಕ್ಕರತ್ರ ಹೇಳಿದೆ. ಕಷಾಯಕ್ಕೆ ಬರೆದು ಕೊಟ್ಟಿದ್ದಾರೆ. ಶಂಕುಣ್ಣಿ ಪಣಿಕ್ಕರಿಗೆ ಗೊತ್ತಿಲ್ದ ಮದ್ದಿಲ್ಲ. ಆದ್ರೆ ಎಂತ ಪ್ರೇಜನ? ಹಿಡ್ಯೋದಿಲ್ಲ. ಬೇಡದ ಕಿತಾಪತಿಗಳೇ ಅವರತ್ರಿರೋದು. ಸ್ವಂತ ಗುರುಗಳನ್ನೇ ಅವ್ಮಾನಿಸಿದೋರಲ್ವ. ಅದ್ಕೇ ಅವರ ಮದ್ದು ಹಿಡ್ಯೋದಿಲ್ಲ.

'ಮದ್ದು ಫಲಕೊಡ್ದಿದ್ರೆ ನೀವ್ಯಾಕೆ ಅವರತ್ರ ಹೋಗೋದು?'

'ಹೋಗದಿರ್ಲಿಕ್ಕಾಗ್ತದಾ? ಶಂಕುಣ್ಣಿಪಣಿಕ್ಕರ್ ನಮ್ಮ ಊರೋರಲ್ವಾ? ಅವರ ಕುಟುಂಬದಲ್ಲಿ ಏನಾದ್ರೂ ಕ್ರಿಯೆಗಳಿದ್ರೆ ನನ್ನ ಕರೆಯೋದಿಲ್ವೆ? ನಮ್ಮ ಮನೇಲಿ ಕ್ರಿಯೆಗಳಿರೋವಾಗ ಪಣಿಕ್ಕರ್ ಬಾರದಿರ್ತಾರಾ? ಅಂದ್ರೆ ನಾವು ತಮ್ಮೊಳಗೆ ಅಷ್ಟೂ ಹತ್ರದೋರು. ಶಂಕುಣ್ಣಿ ಪಣಿಕ್ಕರಿಗೆ ಗೊತ್ತಿಲ್ದ ಮದ್ದಿಲ್ಲ. ಜನ ಸ್ವಲ್ಪ ಹಟವಾದಿ. ಅದಕ್ಕೇ ಸ್ವಲ್ಪ ಕುತಂತ್ರೆಲ್ಲ ಸಂಪಾದ್ನೆ ಮಾಡಿಟ್ರು. ಶಂಕುಣ್ಣಿ ಪಣಿಕ್ಕರ್ ಬದುಕಿರುವಾಗ ನಾನು ಬೇರೆಯಾವ್ದಾದ್ರೂ ಊರ್ನಲ್ಲಿರೋ ವೈದ್ಯರನ್ನು ಕಾಣ್ಲಿಕ್ಕೆ ಹೋಗ್ತೇನಾ?'

'ಮದ್ದು ಹಿಡ್ಯೋದಿಲ್ಲಾಂತ ಗೊತ್ತಿದ್ರೂ ನೀವು ಶಂಕುಣ್ಣಿ ಪಣಿಕ್ಕರ ಕಷಾಯ ಕುಡೀತೀರಿ ಅಲ್ವೆ?' ದೇವಕಿ ಕೇಳಿದಳು.

ಅವಳು ಕೊಟ್ಟ ಮಜ್ಜಿಗೆಯನ್ನು ಬೇಗ ಬೇಗ ಕುಡಿದು ಮುಗಿಸಿ ಮೈಯೊರಸೋ ಬಟ್ಟೆಯಿಂದ ಮುಖ ಒರಸಿ ಶಂಕುಣ್ಣಿ ನಾಯರ್ ಮುಗುಳ್ನಕ್ಕರು.

'ನಾ ಈ ಊರಲ್ಲೇ ಹುಟ್ಟಿದ್ದು. ಈ ಊರಿನ ವೈದ್ಯರ ಕಷಾಯವನ್ನೇ ನಾ ಕುಡೀಬೇಕು. ಶಂಕುಣ್ಣಿ ಪಣಿಕ್ಕರನ್ನು ಬೇಸರ ಪಡಿಸ್ಲಿಕ್ಕೆ ನಾ ತಯಾರಿಲ್ಲ. ಈ ಜನ್ಮದಲ್ಲಿ ತಯಾರಿಲ್ಲ. ಅದು ನನ್ನ ಸೊಬಾವ.'

'ಹಾಗಿದ್ರೆ ನೀವು ಸತ್ಕೊಳ್ಳಿ. ಅಸೌಖ್ಯ ಜಾಸ್ತಿಯಾಗಿ ಸತ್ಕೊಳ್ಳಿ'.

'ಶಂಕರನ್ ನಾಯರ್ ಸತ್ರೆ ನಿಮ್ಗೆ ನಷ್ಟಿಲ್ಲ. ಅಲ್ವೆ?' ಶಂಕರನ್ ಹೇಳಿದ.

'ನಂಗ್ಯಾರು ಸತ್ರೂ ನಷ್ಟಿಲ್ಲ.'

'ಯಾರು ಸತ್ರೂ ನಷ್ಟಿಲ್ಲ. ಅಲ್ವೆ?'

'ನನ್ನ ಮನೆಯೋರು ಯಾರಾದ್ರೂ ಸತ್ರೆ ಮಾತ್ರಲ್ವೆ ನಂಗೆ ನಷ್ಟ?

'ಹಾಗಾದ್ರೆ ನೀವೊಬ್ಳು ಚಂದ್ರಿಕೆ. ಅಲ್ವೆ? ರಮಣನನ್ನು ಮೋಸ ಮಾಡಿದ

ಚಂದ್ರಿಕೆಯು ಜಾತಿಯೋರಲ್ವೆ ನೀವು ?'

'ಬಾಯಿಗ್ಬಂದದ್ದು ಹೇಳ್ಬೇಡಿ. ಮಗು ಕೇಳ್ತಾ ನಿಂತಿದೆ.'

ಶಂಕರನ್ ನನ್ನ ಕೂದಲಿನ ಮೇಲೆ ಮೃದುವಾಗಿ ಕೈಯಾಡಿಸಿದ.

'ಇಲ್ಲಿಯು ಅಮ್ಮಿಣ್ಣ್ಯಮ್ಮ ಹಾಡೋ ಹಾಡನ್ನು ಕೇಳ್ಳಿಲ್ವೆ ಮಗೂ ? ರಮಣನ ಹಾಡು. 'ದೇಹವೆರಡಾದರೂ ನಮಗೊಂದೆ ಕರುಳಲ್ವೆ. ನೀನನ್ನ ಜೀವವಲ್ವೆ ?' ಅದು ಬೇಕಾಬಿಟ್ಟೆ ಹಾಡಾ ?'

'ಅದೊಳ್ಳೆ ಹಾಡು' ನಾನು ಶಂಕರನಿಗೆ ಹೇಳಿದೆ.

'ಅಲ್ವೆ ಮತ್ತೆ ?' ಶಂಕರನ್ ದೇವಕಿಯು ಮುಖನೋಡಿ ಹೇಳಿದ. ದೇವಕಿ ತನ್ನ ಒಳಕಚ್ಚೆಯು ಹಿಂಭಾಗದ ಬಾಲವನ್ನು ಎಳೆದು ಸರಿಪಡಿಸಿ ಸಿಕ್ಕಿಸಿದಳು. ಆಮೇಲೆ ಕೂದಲು ಬಿಚ್ಚಿ ಕಟ್ಟಿ 'ಒಳ್ಳೆ ಹಾಡಾಗಿರ್ಬೋದು. ನಂಗೆ ಆ ಹಾಡು ಇಷ್ಟ ಇಲ್ಲಾಂತ ಮಾತ್ರ ನಾಯೇಳಿದ್ದು. ನಂಗೆ ಗಂಡಸ್ರೂ ಹೆಂಗಸ್ರೂ ಪ್ರೀತಿ ಮಾಡೋ ಹಾಡೆಲ್ಲ ಒಳ್ಳೇದಾಗೋದಿಲ್ಲ.'

'ನಿಮ್ಗೆ ಮತ್ತ್ಯಾವ ಹಾಡು ಇಷ್ಟ ?'

'ಕಾರ್ತ್ಯಾಯಿನಿ ಟೀಚರ್ ಕಲಿಸಿದ ಹಾಡು ನಿಮ್ಗಿಷ್ಟ ಅಲ್ವೆ ?' ನಾನು ಕೇಳಿದೆ.

'ಅದ್ಯಾವ ಹಾಡು ?' ಶಂಕುಣ್ಣಿ ನಾಯರ್ ಕೇಳಿದರು.

'ಬಾಲಕೃಷ್ಣನ್ ಚೆಯ್ದು ಲೀಲೆಯು ಪಾರಡಿ ಸಖೀ, ಪಾರಡಿ ಸಖೀ ಅಂದ ಕೂರಡಿ ಸಖೀ' ನಾನು ಹಾಡಿದೆ.

'ಎಂಥೊಂದು ಹೊಲ್ಸು ಹಾಡು ! ಈ ಮಗೂನ್ಯಾಕೆ ಇನ್ನೂ ಇಲ್ಲಿಯು ಶಾಲೆಗೆ ಕಳಿಸೋದು ? ಮಗು ಪೂರ್ತಿ ಹಾಳಾಗ್ಲಿಕ್ಕುಂಟು' ಶಂಕುಣ್ಣಿ ನಾಯರ್ ಗಟ್ಟಿಯಾಗಿ ಹೇಳಿದರು. ಅಜ್ಜಿ ಕೇಳ್ಳಿಂತ ಪಣಿಮೆಟ್ಟಲುಗಳ ಕಡೆಗೆ ಕಣ್ಣು ಹಾಯಿಸುತ್ತಾ ಗಟ್ಟಿಯಾಗಿ ಮಾತಾಡತೊಡಗಿದರು.

ಬೆಂಚಿನ್ಮೇಲೆ ಮಾಪ್ಳೆಯೋರ ಮಧ್ಯದಲ್ಲಿ ಕೂರಿಸ್ಲಿಕ್ಕೆ ಈ ಕುಟುಂಬದ ಮಕ್ಕಳನ್ಯಾಕೆ ಕಳಿಸ್ಬೇಕು ?'

'ಯಾರು ಮಾಪ್ಳೇರೆಂದ್ರೆ ?' ನಾನು ಕೇಳಿದೆ.

'ನಿನ್ನ ಆಚೆ ಈಚೆ ಕೂತುಕೊಳ್ತಾರಲ್ಲ. ಅವು. ಅವು ಮಾಪ್ಳೇರು. ನಾನ್ನನ್ನ ಸೊಂತ ಕಣ್ಣಲ್ಲಿ ಕಂಡದ್ದು. ನಿನ್ನೆ ಬೆಳಗ್ಗೆ ನಾನು ಸೊಲ್ಪ ಮೊಸ್ರು ತಕ್ಕೊಳ್ಳಿಕೇಂತ ಐರತ್ತಿನ ಕುಂಜುನಾಯರ ಮನೆಗೆ ಹೋಗುವಾಗ ಶಾಲೆ ಬೆಲ್ಲುಹೊಡ್ದು ಅಯ್ಯಪ್ಪ ಕಬ್ಬಿಣದ ಕೋಲು ತಕ್ಕೊಂಡು ವಾಪಾಸು ಬರ್ತಿದ್ದ. ಸರೀ ಹತ್ತುಗಂಟೆ. ಆಗ ನಾ ಕಂಡದ್ದು ಈ ಮಗು ನೂಂಬಿಲತ್ತಿನ ದೋಣೀಲಿ ಇಬ್ರು ಮಾಪ್ಳೆಗಳ ಮಧ್ಯೆ ಕೂತ್ಕೊಂಡಿತ್ತು ! ಎಡ ಭಾಗದಲ್ಲಿ ಆ ಬೋಳು ಮಂಡೆಯು ಮೊಯ್ದೀನ್. ಸಮುದ್ರ ಬದಿಯು ಇಸ್ಲಾಮಿಗಳಿಲ್ವೆ ? ಆ ಗುಂಪಿಗೆ ಸೇರಿದವ ಮೊಯ್ದೀನ್. ಬಲಭಾಗದಲ್ಲಿ ಯಾರೂಂತ ಗೊತ್ತುಂಟಾ ? ನಮ್ಮ ತಡತ್ತಿಲದ ಮೂಸೆಯು ಮಗ ಅವ್ವುಣ್ಣಿ. ಮೂಸ ಒಳ್ಳೆ ಜನಾಯ್ತಾ. ಗೌರವಸ್ತರ ಸಾಲಿನವ. ಆದ್ರೆ ಜಾತಿ ನೋಡ್ಬೇಡ್ವಾ ? ಮಕ್ಳಗೆ ಜಾತಿ ಸಂಗ್ತಿಯಲ್ಲ ಗೊತ್ತಿಲ್ದಿರ್ಬೋದು. ಆದ್ರೆ ಮಾಷುಗಳು ಅವರಿಗೆ ತಿಳಿಸಿ ಕೊಡ್ಬೇಡ್ವೆ ? ಈ ಕುಟುಂಬದ ಒಬ್ಳು ಹೆಣ್ಣು ಮಗಳು ಮಾಪಿಳ್ಳೆಗಳ ಹತ್ರ ದೋಣೀಲಿ

ಕೂತ್ಕೊಳ್ಳೋದು. ಓದ್ಲಿಕ್ಕೂ ಬರೀಲಿಕ್ಕೂ ಕಲ್ತಾಯ್ತಲ್ಲ? ಇನ್ನೂ ಸ್ಕೂಲಿಗೆ ಕಳ್ಸೋದು ಯಾಕೆ? ಇನ್ನಾ ಕುಂಜುಣ್ಣಿ ನಂಬೀಶರನ್ನ ಇಲ್ಲಿಗೆ ಕರ್ಸಿ ಸೊಲ್ಪ ಸಂಸ್ಕೃತ ಕಲ್ಸಿ ಕೊಟ್ರೆ ಸಾಲ್ದಾ? ಇಲ್ಲಿರೋರೆಲ್ಲ ಹೊರಗೆ ಹೋಗಿ ಕಲೀಲಿಲ್ಲಲ್ವ. ಹೋಗ್ಲಿ. ಕೆಟ್ಟೆಸ್ರು ಕೇಳ್ಬೇಕಾದೀತು. ನಾ ಹೇಳ್ಲಿಲ್ಲಾಂತ ಬೇಡ.'

'ಈ ಮಗೂಗೆ ಏಳು ವಯಸ್ಸು ಕೂಡ ಆಗ್ಲಿಲ್ಲ. ಈಗ್ಲೆ ಅದಕ್ಕೆ ಕೆಟ್ಟೆಸ್ರು ಬಂದೀತೂಂತ ಎಂತ ತಿಳ್ಕೊಂಡು ನೀವು ಹೇಳೋದು, ಶಂಕುಣ್ಣಿ ನಾಯರೆ?' ಶಂಕರನ್ ಕೇಳಿದ.

'ಶಾಲೆಗೆ ಕಳಿಸ್ತೀರೋದ್ರಿಂದಾಯ್ತಾ. ಮಾಪ್ಳೆಯೋರು ಕ್ರಿಸ್ತ್ಯಾನಿಗಳು ಹೊಲೇರೂ ಎಲ್ಲ ಮಗೂನ್ನ ತಾಗಿ ಕೂತ್ಕೊಳ್ಳಿ. ಇಲ್ಲಿರೋರಿಗೇ ಅದ್ರಿಂದ ತೊಂದ್ರೆಯಿಲ್ದಿದ್ರ ನಂಗೆಂತ ತೊಂದ್ರೆ?

'ಶಂಕುಣ್ಣಿ ನಾಯರ ಮುಖ ಯಾಕೆ ಕೆಂಪಾಗಿದೆ?' ನಾನು ಕೇಳಿದೆ.

'ನಂಗೇನೂ ಕೂಡೋದಿಲ್ಲ ಮಗೂ. ನಂಗೆ ಶಂಕುಣ್ಣಿ ಪಣಿಕ್ಕರನ್ನೊಮ್ಮೆ ಕಾಣ್ಬೇಕು. ಯಾವುದಕ್ಕೂ ನಾನದೇ ಮಾರ್ಗವಾಗಿ ಹೋಗೋದು. ದಾರೀಲ್ಲಿ ಕೃಷ್ಣನ್ ಕುಟ್ಟಿಯ ಅಂಗಡೀಂದ ಎರಡು ದೇಪ್ರಿ ಬೈರಾಸು ತೊಕ್ಕೊಳ್ಬೇಕು. ಅದು ಮುಗಿಸಿ ಶಂಕುಣ್ಣಿ ಪಣಿಕ್ಕರನ್ನು ಕಾಣ್ಬೇಕು. ಎರಡು ದಿವ್ಸದಿಂದ ನಂಗೆ ಜುಲಾಬು ಆಗ್ಲಿಲ್ಲ. ಅದಕ್ಕೇ ತಳಮಳ ಆಗ್ತಾ ಇದೆ. ಹೊಟ್ಟೇ ಒಳ್ಗೆ ಯಾರೋ ಒಂದು ಚೆಂಡಿನಲ್ಲಿ ಬಾರ್ಸೋ ಹಾಗೆ. ನಿನ್ನೆ ನಾಲ್ಕು ಮೈಸೂರು ಬಾಳೆ ತಿಂದೆ. ಎಂತ ಪ್ರೇಜನವೂ ಆಗ್ಲಿಲ್ಲ. ಶಂಕುಣ್ಣಿ ಪಣಿಕ್ಕರ್ ಏನಾದ್ರು ಕಷಾಯಕ್ಕೆ ಬರ್ದುಕೊಟ್ಟಾರು.'

'ನೀವೀಗಲ್ವ ಹೇಳಿದ್ದು ಶಂಕುಣ್ಣಿ ಪಣಿಕ್ಕರ ಮದ್ದು ಫಲಿಸೋದಿಲ್ಲಾಂತ' ದೇವಕಿ ನಗುತ್ತ ಕೇಳಿದಳು.

'ಅಂ ಹೇಳಿದೆ. ಹೇಳಿದ್ದು ಸರಿಯೆ. ಫಲಿಸೋದಿಲ್ಲ. ಬೇಡದ್ದೆಲ್ಲ ಸಂಪಾದ್ನೆ ಮಾಡಿದ ಜನ ಅಲ್ವೆ?'

'ಮತ್ತೆ ಯಾಕೆ ಈ ಬಿಸಿಲಿಗೆ ಶಂಕುಣ್ಣಿ ಪಣಿಕ್ಕರನ್ನು ಕಾಣ್ಲಿಕ್ಕೋಗೋದು.'

ಎರಡು ದಿವ್ಸಾಗಿ ನಂಗೆ ಹೊಟ್ಟೇಂದ ಹೋಗ್ಲಿಲ್ಲ. ಅದಕ್ಕೇ ನಾನು ಶಂಕುಣ್ಣಿ ಪಣಿಕ್ಕರನ್ನು ಕಾಣ್ಲಿಕ್ಕೋಗೋದು.' ಮಡಪ್ಪಿಲಾಯಿಯ ಶಂಕುಣ್ಣಿ ನಾಯರ್ ಮೆಟ್ಟಲಿಳಿಯುತ್ತ ಹೇಳಿದರು.

ಒಂದ ನಾನು ಮಗುವಾಗಿದ್ದಾಗ ಫೋನ್ ತೆಗೆದು ಡಯಲ್ ಮಾಡುವ ಸಂಪ್ರದಾಯ ಇರಲಿಲ್ಲ. ತಂದೆಯ ಆಫೀಸಿಗೆ ಫೋನ್ ಮಾಡಬೇಕಿದ್ದರೆ ಫೋನ್ ಎತ್ತಿದ ಕೂಡಲೆ 'ನಂಬರ್ ಪ್ಲೀಸ್ ಎಂದು ಕೇಳುವ ಸ್ತ್ರೀಧ್ವನಿಗೆ ಪಿ.ಕೆ.ವನ್-ಸಿಕ್ಸ್-ಟು-ಓ-, ಪಿ.ಕೆ. 1620-ಎಂದು ಹೇಳಬೇಕು. ಅನಂತರ ಕನೆಕ್ಷನ್. ಸಿಗುವವರೆಗೆ ಕಾಯಬೇಕು. ತಂದೆಯ ಕಛೇರಿಯ ಟೆಲಿಫೋನ್ ಆಪರೇಟರ್ ಭಟ್ಟಾಚಾರ್ಯ ಎಂಬ ಓರ್ವ ಮಧ್ಯವಯಸ್ಕರಾಗಿದ್ದರು. ಅವರಿಗೆ ಸ್ತ್ರೀ ಧ್ವನಿ ಇತ್ತು. ಅವರೊಂದಿಗೆ ಹೆಂಗಸೆಂಬುದಾಗಿ ತಪ್ಪಾಗಿ ಭಾವಿಸಿ ಕೆಲವು ಪೋಲಿಗಳ ಶೃಂಗಾರ ಸಲ್ಲಾಪ

ಮಾಡುತ್ತಿದ್ದರು ಎಂಬುದಾಗಿ ಅಪ್ಪುಚಿಕ್ಕಪ್ಪ ತನ್ನ ಗೆಳೆಯ ಪಿಚ್ಚೆರಿಕಾಟ್ಟಿನ ಬಾಲನ್‌ನಾಯರ ಹತ್ತಿರ ಹೇಳುತ್ತಿದ್ದುದನ್ನು ನಾನು ಕೇಳಿದೆ. ಅದು ಅಪ್ಪು ಚಿಕ್ಕಪ್ಪನಿಗೂ ಬಾಲನ್ ನಾಯರಿಗೂ ಕೇಕೆ ಹಾಕಿ ನಗುವುದಕ್ಕಿದ್ದ ವಿಷಯವಾಗಿತ್ತು. ಅವರು ಯಾಕೆ ಅಷ್ಟೊಂದು ಕೇಕೆ ಹಾಕಿ ನಗ್ತಾರೆ ಎಂಬುದಾಗಿ, ಅಂದು ನಾನು ಅಮ್ಮನೊಂದಿಗೆ ಕೇಳುತ್ತಿದ್ದೆ. 'ಶೃಂಗಾರ ಸಲ್ಲಾಪ ಎಂದರೇನು?' ನಾನು ಕೇಳಿದೆ.

'ಹೆಂಗಸರೊಂದಿಗೆ ಅವರ ಸೌಂದರ್ಯದ ಬಗ್ಗೆ ಹೊಗಳಿ ಮಾತನಾಡುವುದು, ಶ್ಲೋಕಗಳನ್ನುದ್ಧರಿಸಿ ವರ್ಣಿಸುವುದು. ಅದೆಲ್ಲ ಶೃಂಗಾರ ಸಲ್ಲಾಪವೆ' ಅಮ್ಮ ಹೇಳಿದರು.

ಆ ಮೇಲೊಂದು ದಿವಸ ತಂದೆ ಉಪಾಹಾರಕ್ಕೆ ಕುಳಿತುಕೊಳ್ಳುವಾಗ ನಾನು ಅವರೊಂದಿಗೆ ಕೇಳಿದೆ:

'ನಿಮ್ಮ ಆಫೀಸಿನ ಭಟ್ಟಾಚಾರ್ಯರಿಗೆ ಕೆಲವರು ಶ್ಲೋಕ ಕೇಳಿಸ್ತಿದ್ದಾರೆ.'

'ಭಟ್ಟಾಚಾರ್ಯರಿಗೆ ಶ್ಲೋಕ ಕೇಳ್ಸೋದಾ? ನೀಯೆಂತ ನೋನ್ಸೆನ್ಸು ಹೇಳ್ತಾಯಿದ್ದಿ? ಈ ಮಗೂಗೇನು, ತಲೆಸರಿಯಿಲ್ವೆ?'

'ಪಿಚ್ಚೆರಿಕಾಟ್ಟಿನ ಬಾಲನ್‌ನಾಯರೂ ಅಪ್ಪುಚಿಕ್ಕಪ್ಪನೂ ಹೇಳಿದ್ದು.'

ಅಪ್ಪುಚಿಕ್ಕಪ್ಪನೂ ಬಾಲನ್‌ನಾಯರೂ ದಡದಡನೆ ಮನೆಯಿಂದ ಹೊರಕ್ಕೆ ಹೋದರು. ಇನ್ನು ಮುಂದೆ ನಾವು ಮಾತನಾಡುವಾಗ ಕಿವಿಗೊಡಬಾರದೆಂದೂ ಅಥವಾ ಕೇಳಿದರೂ ಆ ವಿಷಯಗಳನ್ನು ತಂದೆತಾಯಿಯರಿಗೆ ತಿಳಿಸಬಾರದೆಂದೂ ಅಪ್ಪುಚಿಕ್ಕಪ್ಪ ಅಂದು ನನ್ನಲ್ಲಿ ಹೇಳಿದರು.

'ಮಕ್ಕಳು ಕೇಳ್ಳಿಕ್ಕಿರುವ ಮಾತಲ್ಲ ನಮ್ಮ ಮಾತು ಆಯ್ತಾ.'

ಆ ರೀತಿಯ ಮಾತುಗಳು ನನ್ನೊಳಗೆ ಒಂದು ಬಗೆಯ ಕಿರಿಕಿರಿ ಉಂಟುಮಾಡಿದವು. ಅಡುಗೆಮನೆಯಲ್ಲಿ ಅಡುಗೆಯವನೂ ಕೆಲಸದವಳೂ ಸೇರಿ ಗುಣುಗುಣಿಸುತ್ತಿರುವಾಗ ನಾನು ಆ ಕಡೆ ಹೋದರೆ ಅವರಲ್ಲೊಬ್ಬರು ಹೇಳುವರು: 'ನಾವು ಹೇಳೋಕತೆಯೆಲ್ಲ ಮಕ್ಕಿಗೆ ಕೇಳ್ಳಿಕ್ಕಿರೋದಲ್ಲ. ನೀವಾ ಕೋಣೆಗೆ ಹೋಗಿ ಆಡಿಕೊಳ್ಳಿ.'

ಮೇಲ್ಗಡೆ ತಂದೆಯೂ ತಾಯಿಯೂ ಮಾತನಾಡುವಾಗ ನಾನಲ್ಲಿಗೆ ಹೋದರೆ ಕೂಡಲೆ ತಂದೆ ಹೇಳುವರು:

'ಕೆಳಗೆ ಹೋಗಿ ಕಲಿ. ದೊಡ್ಡೋರು ಮಾತಾಡೋದನ್ನು ಕೇಳಿ ನಿಲ್ಬಾರ್ದು. ಪೆಟ್ಟು ಸಿಕ್ಕೀತು.'

ಮಕ್ಕಳಿಗೆ ಕೇಳ್ಳಿಕ್ಕಿರುವ ಮಾತುಗಳನ್ನು ಕುಞಾತ್ತು ಮಾತ್ರ ಹೇಳುತ್ತಿದ್ದ. ಮೂತ್ರವಾಸನೆಯಿದ್ದ ಇದ್ದಲು ಮನೆಯ ಹಗ್ಗದ ಮಂಚದಲ್ಲಿ ಒಂದು ಬಲೆಬಲೆ ಬನಿಯನೂ ಖಾಕಿ ಷಾರ್ಟ್ಸ್ ಹಾಕಿ ಮಲಗಿಕೊಂಡು ಅವರೊಮ್ಮೆ ಹೇಳಿದರು:

'ಸ್ವಲ್ಪ ಸಾಸಿವೆಯೆಣ್ಣೆ ಸಿಕ್ಕಿದ್ರೆ ಕಾಲಿಗೆ ಹಚ್ಚಿ ತಿಕ್ಕಬಹುದಾಗಿತ್ತು. ರಾತ್ರಿ ನಿದ್ರೆ ಮಾಡಿ ಮೂತ್ರಕ್ಕೆ ಏಳ್ಬೇಕಿದ್ರೆ ಕಾಲು ನೆಲದಲ್ಲಿಡ್ಲಿಕ್ಕಾಗೋದಿಲ್ಲ. ಸ್ನಾಯುಸೆಳೆತ. ಹಗ್ಗಕಟ್ಟಿ ಎಳ್ದಹಾಗೆ ಎಳೆಯೋದು. ನಂಗೆ ಸುಸ್ತಾಗಿ ಏನೂ ಕೂಡ್ದು ಮಗೂ. ಸಾಯ್ಲಿಕ್ಕಾಯ್ತೂಂತ ತೋರ್ತದೆ. ನಂಗೆ ಎಪ್ಪತ್ತು ವಯಸ್ಸಾಯ್ತು. ನಾಯೇಳಿದ್ದು

ಅರುವತ್ತೂಂತ. ಪ್ರಾಯಾಗಿದೇಂತ ಏಳಿದ್ರೆ ಆಫೀಸ್ನಿಂದ ವಾಪಾಸ್ಕಳಿಸ್ತಾರೂಂತ ತಿಳ್ಕೊಂಡೆ. ನನ್ನ ದುಡ್ಡಿನಲ್ಲಿ ಕೊಟ್ಟಪ್ಪಡಿಯ ಒಂದು ಕುಟುಂಬ ನಡಿಯೋದು. ಅದು ಗೊತ್ತುಂಟಾ ಮಗೂ?'

ಹಗ್ಗದ ಮಂಚದ ತುದಿಯಲ್ಲಿ ಕುಳಿತುಕೊಳ್ಳುವುದಕ್ಕೆ ನನಗೆ ಕುಂಞಾತ್ತು ಅನುಮತಿ ನೀಡಿದ್ದರು. ಕೋಣೆಯ ಕತ್ತಲೆ ಕ್ರಮೇಣ ಕಡಿಮೆಯಾಗುತ್ತಾ ಬರುತ್ತಿದ್ದುದು ಮೊದಲ ನಾಲ್ಕೈದು ನಿಮಿಷಗಳ ನಂತರ ನನ್ನ ಅನುಭವಕ್ಕೆ ಬಂತು. ಬಳಿಕ ಆ ಕೋಣೆಯ ಸಾಮಗ್ರಿಗಳೆಲ್ಲ ನನ್ನ ಕಣ್ಣಿಗೆ ಕಾಣಿಸತೊಡಗಿದುವು. ಒಂದು ಮೂಲೆಯಲ್ಲಿ ಕಟ್ಟಿದ ಹಗ್ಗದಲ್ಲಿ ನೀಲಗೆರೆಗಳ ಅಂಗಿ, ಖಾಕಿ ಪ್ಯಾಂಟು, ಮಸುಕಾಗುತ್ತಾ ಬಂದ ಮೈಯೊರಸುವ ಬಟ್ಟೆ ಮೊದಲಾದವುಗಳು ತೂಗುತ್ತಿದ್ದವು. ಇನ್ನೊಂದು ಮೂಲೆಯಲ್ಲಿ ಮೂರು ದಪ್ಪನೆಯ ಗುಲಾಬಿ ಹೂಗಳ ಚಿತ್ರವಿದ್ದ ಹಸಿರು ಪೆಟ್ಟಿಗೆ. ಅದರ ಹತ್ತಿರ ಓಡುವುದಕ್ಕೆ ಸಿದ್ಧತೆ ಮಾಡಿನಿಂತ ಬೂಟ್ಸುಗಳು. ಅವುಗಳ ಒಳಗೆ ಸುರುಟಿ ಮಲಗಿದ್ದ ಕೆಂಪು ಸಾಕ್ಸ್‌ಗಳ ವಾಸನೆ ಎಡೆಗಡೆಗೆ ನನ್ನ ಮೂಗಿನ ಹೊಳ್ಳೆಗಳಿಗೆ ಬಡಿಯಿತು. ಮಂಚದ ಕೆಳಗೆ ಖಾಲಿ ತೆಂಗಿನೆಣ್ಣೆಯ ಟಿನ್ನುಗಳು, ಮುಚ್ಚಳವಿಲ್ಲದ ಒಂದು ಮಣ್ಣಿನ ಭರಣಿ, ಬಾರು ತುಂಡಾದ ಒಂದು ಮೆಟ್ಟು ಮೊದಲಾದುವನ್ನು ಹರಡಲಾಗಿತ್ತು.

'ನೀವ್ಯಾಕೆ ಖಾಲಿ ಟಿನ್ನುಗಳನ್ನೆಲ್ಲ ಮಂಚದ ಅಡಿಯಲ್ಲಿ ಇಡೋದು?' ನಾನು ಕೇಳಿದೆ.

'ಇದೆಲ್ಲ ಅಗತ್ಯಕ್ಕೆ ಬರ್ತದೆ ಮಗೂ. ಯಾವಾಗ ಈ ಒಂದೊಂದ್ರದ್ದೂ ಅಗತ್ಯ ಬರ್ತದೇಂತ ಯಾರಿಗ್ಗೊತ್ತು? ನಾನು ಎಂತದನ್ನೂ ಹಾಳು ಮಾಡೋದಿಲ್ಲ ಮಗೂ. ಬಾಕಿದ್ದೋರು ಹಾಳು ಮಾಡೋದನ್ನೆಲ್ಲ ನಾನು ತೆಗೆದಿಡ್ತೇನೆ. ಈ ಪಾತ್ರೇಲೆಲ್ಲ ಅಕ್ಕಿ, ಧಾನ್ಯ ಹಾಕಿಡ್ಲಿಕ್ಕಾಗೋದಿಲ್ವ?'

ನಾನು ತಲೆಯಾಡಿಸಿದೆ: 'ಅದೌದು' ನಾನು ಹೇಳಿದೆ.

'ಕೊಟ್ಟಪ್ಪಡಿಗೆ ರಜೆಯಲ್ಲಿ ಹೋಗುವಾಗ ನಾನಿದನ್ನೆಲ್ಲ ಕೊಂಡೋಗ್ತೇನೆ ಮಗೂ.'

'ಅಪ್ಪನ ತುಂಡಾದ ಮೆಟ್ಟನ್ನೂ ಕೊಂಡೋಗ್ತೀರಿ. ಅಲ್ವೆ?'

'ಮತ್ತೆಯೊ. ಕೊಂಡೋಗದೆ. ನಿಮ್ಮ ತಂದೆ ಓರ್ವ ಮಹಾಪುರುಷ ಮಗೂ. ನಮ್ಮ ಕುಟುಂಬದೋರು ಗಂಜಿನೀರು ಕುಡಿಯೋದು ಅವರ ಒಳ್ಳೇತನದಿಂದ. ಅವರ ಮೆಟ್ಟನ್ನು ನಾನು ದೇವರ ಕೋಣೇಲಿಡ್ತೇನೆ ಮಗೂ. ಮಕ್ಕಳು ಅದಕ್ಕೆ ಮುತ್ತಕೊಡ್ಲಿ. ಹಾಗಾದ್ರೂ ಅವುಗಳಿಗೆ ಸ್ವಲ್ಪ ಶಿಷ್ಟಾಚಾರ ತಿಳೀಲಿ. ಸಂತ ಜೋಸೆಪ್ಪರ ಫೋಟೋ ಇಟ್ಟಲ್ಲಿಯೇ ನಾನು ನಿಮ್ಮ ತಂದೆಯೋರ ಮೆಟ್ಟನ್ನೂ ಇಡ್ತೇನೆ. ನನ್ನ ಎದೆ ಒಡೆದ್ರೆ ಕಂಡೀತು ನಿಮ್ಮ ತಂದೆಯೋರ ರೂಪ. ಅವ್ರು ದೇವ್ರು ಮಗೂ. ನಿಮ್ಮ ತಂದೆ ಯಾರೂಂತ ತಿಳ್ಕೊಂಡಿದ್ದೀರಿ?'

'ನನ್ನ ತಂದೆ ಯಾರು?' ನಾನು ಕೇಳಿದೆ.

'ಇದೀಗ ಒಳ್ಳೆ ಪಂಚಾತಿಗೆ! ನಾ ಹೇಳೋದೊಂದೂ ಮಂಡೆಗೆ ಹತ್ತೋದಿಲ್ವ? ರಾಮಾಯಣ ಪೂರ್ತಿ ಕೇಳಿ ರಾಮನಿಕ್ ಸೀತ ಎಪ್ಪಿಡೀಂತ ಕೇಳಿದ ಬೆಪ್ಪನ ಕತೆ ನೀವು ಕೇಳ್ಳಿಲ್ವೆ? ಹಾಗಾಯ್ತಲ್ಲ ನಿಮ್ಮ ಪ್ರಶ್ನೆ. ನಿಮ್ಮ ತಂದೆಯಾರೂಂತ ನಾ

ಹೇಳಿಕೊಡ್ಬೇಕಾ ? ನಿಮ್ಮ ತಂದೆ ಬಗ್ಗೆ ಗೊತ್ತಿಲ್ದೋರು ಈ ಲೋಕದಲ್ಲಿರ್ಲಿಕ್ಕಿಲ್ಲ. ಯುದ್ಧದಿಂದಾಗಿ ಪೆಟ್ರೋಲ್ ಸಿಗದಿರೋವಾಗ ನಿಮ್ಮ ತಂದೆ ಕಂಡಿಡಿದದ್ದಲ್ವಾ. ಈಗ ಕಾರ್ನಲ್ಲಿ ಲೋರೀಲಿ ಎಲ್ಲ ಇಡ್ಡೋ ಗ್ಯಾಸ್ ಪ್ಲಾಂಟು. ಕಾರಿನ ಹಿಂಭಾಗದಲ್ಲಿ ಒಂದೊಂದು ಗ್ಯಾಸ್ ಪ್ಲಾಂಟು ಕಟ್ಟಿಟ್ರೆ ಮತ್ತೆ ಪೆಟ್ರೋಲ್‌ನ ಅಗತ್ಯ ಇಲ್ಲ. ಈ ಕಂಡು ಹಿಡಿತಕ್ಕೆ ಅಪ್ರಿಗೆ ಕೊಡ್ಬೇಕು ಮಗೂ 'ವೀರಶೃಂಖಲ'. ಹಿಂದೆ ರಾಜರುಗಳು ಪದ್ಯ ಬರೆಯೋರಿಗೂ ಸೈನಿಕರಿಗೆಲ್ಲ ಕೊಡ್ತಿದ್ದ ವೀರಶೃಂಖಲ. ಇಪ್ಪತ್ತೆಂಟು ಪವನಿನ ಚಿನ್ನದಲ್ಲಿ ವೀರಶೃಂಖಲೆಯನ್ನು ತಯಾರಿಸೋದು. ಎಳೆದ್ರೆ ತುಂಡಾಗ್ಲಿಕ್ಕಿಲ್ಲ ಮಗೂ.'

'ನಿಮ್ಮಲ್ಲಿ ವೀರಶೃಂಖಲ ಉಂಟೊ ?'

'ಅಯ್ಯೋ ಮಗೂ. ನಂಗ್ಯಾರು ವೀರಶೃಂಖಲ ಕೊಡ್ತಾರೆ ? ನಂಗೆ ಒಂದು ಬೀಡಿ ತುಂಡು ತೆಗೆದು ಕೊಡ್ಲಿಕ್ಕೆ ಕೂಡ ಈ ಲೋಕದಲ್ಲಿ ಯಾರೂ ಇಲ್ಲ ಮಗೂ. ಇತ್ತೀಚೆಗೆ ಒಂಜನದತ್ರ ನಾನೊಂದು ಬೀಡಿ ಕೇಳಿದಾಗ ನನ್ನ್ ನೋಡಿ ಮುಸುಮುಂಗನ ಹಾಗೆ ಹಲ್ಲುಗಿಂಜಿದ.

'ಹಲ್ಲುಗಿಂಜಿದ್ಯಾರು ?' ನಾನು ಕೇಳಿದೆ.

'ನಾನ್ಯಾರ ಹೆಸ್ರೂ ಹೇಳೋದಿಲ್ಲ. ನನ್ನಿಂದಾಗಿ ಯಾರಿಗೂ ಕೆಟ್ಟೆಸ್ರು ಬರ್ಬಾರ್ದು. ನಂಗೆ ಯಾರತ್ರವೂ ಪಗದೆ ಇಲ್ಲಿ ಬದುಕ್ಬೇಕು. ನಾನ್ಯಾರೊಬ್ರ ಸಂಗತಿಗೂ ತಲೆ ಹಾಕೋದಿಲ್ಲ. ನನ್ನ ಸಂಗತಿಗೂ ಯಾರೂ ತಲೆ ಹಾಕೋದು ಬೇಡ. ಅಷ್ಟೆಯೇ ನಂಗೆ ಹೇಳ್ಲಿಕ್ಕಿರೋದು. ಮಗೂಗದು ಗೊತ್ತುಂಟೊ ?' ನಾನು ತಲೆ ಅಲುಗಿಸಿದೆ.

'ಇಲ್ಲಿರೋದ್ರಿಂದ ನಂಗೆ ಸಮಯ ಹೋಗ್ತದೆ ಮಗೂ. ಯಾರತ್ರಾದ್ರೂ ಸ್ವಲ್ಪ ಮಾತಾಡ್ಬೇಕು. ಇಲ್ದಿದ್ರೆ ಶ್ವಾಸ ಹಿಡ್ದಾಗೆ ಆಗ್ತದೆ. ನಾವೆಲ್ಲ ಮನುಷ್ಯರಲ್ವ ಮಗೂ. ನಮ್ಮೊಳಗೆ ತುಂಬ ನೋವೆಲ್ಲ ಇರ್ತದೆ. ತುಂಬ ಸಂಕಟೆಲ್ಲ ಇರ್ತದೆ. ಯಾರತ್ರವೂ ಹೇಳದೆ ಒಳಗಿಟ್ರೆ ಶ್ವಾಸ ಹಿಡ್ದಾಗಾಗಿ ಸತ್ತೋಗ್ಬೋದು. ಕಲ್ಲಿಕೋಟೆಯ ಡಾಕ್ಟರು ವಿ.ಬಿ. ಮೆನೋನ್‌ರ ಬಗ್ಗೆ ಕೇಳ್ಲಿಲ್ವೆ ಮಗೂ ? ನನ್ನೆಜಮಾನ್ರಾಗಿದ್ರು. ಅವ್ರು ಹೇಳ್ತಿದ್ರು, ಅಳೋದು ಒಳ್ಳೇದು. ಅಳ್ದೆ ಸಂಕಟೆಲ್ಲ ಒಳಗಿಟ್ರೆ ಹೃದಯಸ್ತಂಬನಾದೀತೂಂತ.'

'ಹೃದಯಸ್ತಂಭನಾಂತೇಳಿದ್ರೆಂತ ?' ನಾನು ಕೇಳಿದೆ.

'ಹೃದಯ ಇಲ್ಲದ ಮನುಷ್ಯರಿಲ್ಲಲ್ಲಾ. ಅದು ಗೊತ್ತುಂಟಲ್ಲ ನಿಮ್ಗೆ? ಹೃದಯಾಂತೇಳಿದ್ರೆ ಒಂದು ಚೆಂಡಿನ ಹಾಗೆ ಉರುಟಾದ ಒಂದು ವಸ್ತು. ಕೆಂಪು ಕೆಂಪಾಗಿ ಒಂದು ಚೆಂಡಿನ ಹಾಗೆ. ಅದ್ರ ಒಳಗೆ ನಮ್ಮ ಎಲ್ಲಾ ಸಂಗತಿಗಳಿರೋದು. ನೀವು ನೋಡ್ಲಿಲ್ವ. ಮಗೂ. ಆಪಿ ಗೊತ್ತಲ್ಲ. ಆಪಿ ಹಾಗೆ ವಿಚಾರಗಳು. ಅವು ತುಂಬ ತುಂಬಿರ್ತದೆ. ಇನ್ನೂ ತುಂಬ್ಲಿಕ್ಕಿಲ್ಲಾಂತಾದಾಗ ಆ ಚೆಂಡು ಟೂಂತ ಪೊಟ್ಟಿ ಹೋಗ್ತದೆ. ಸಿಡಿ ಮದ್ದು ಪೊಟ್ಟೋಹಾಗೆ ಗಟ್ಟಿಯಾಗಿ ಹೃದಯ ಪೊಟ್ಟೋದು. ಕಲ್ಲಿಕೋಟೆಯ ಜನರಲ್ ಆಸ್ಪತ್ರೇಲಿ ನನ್ನ ಹೆಂಡತಿಯ ಒಬ್ರು ಮಾವ ಮಲಗಿದ್ರು. ಮೂಲವ್ಯಾಧಿಯ ಆಪ್ರೇಶನ್ ಮಾಡ್ಲಿ ಎರಡು ದಿವ್ಸ ಮಲಗಿದ್ರು. ಆಗ ನಾನವ್ರ ಒಟ್ಟಿಗಿದ್ದೆ. ಆಗ ನಾನು ಹೃದಯ ಸ್ತಂಭನದ ಶಬ್ದ ಕೇಳಿದ್ದಾಯ್ತಾ. ಸಿಡಿಮದ್ದು ಹೊಟ್ಟೋಹಾಗೆ ಟೂಂತೊಂದು ಶಬ್ದ. ನನ್ನ ದೇವರೇ. ನಾಯಿಡೀ ನಡುಗಿ

ಹೋದೆಯಾಯ್ತಾ. ಹತ್ತಿರದ ವಾರ್ಡಿನಲ್ಲಿದ್ದ ಒಬ್ಬ ರೋಗಿ ಸತ್ತದ್ದು. ಅವರ ಚೆಂಡು ಇದ್ದಕ್ಕಿದ್ದ ಹಾಗೆ ಹೊಟ್ಟಿಹೋಯ್ತು. ಎಂತಾ ಅಳು, ಬೊಬ್ಬೆ. ಆ ಜನದ ಹೆಂಡ್ತಿ ಮಕ್ಳು ಎಲ್ಲಾ ಸೇರಿ ಎದೆಹೊಡ್ಕೊಂಡು ಬೊಬ್ಬೆ ಹಾಕ್ಲಿಕ್ಕೆ ಶುರು ಮಾಡಿದ್ರು. ಆಗ ನನ್ನ ಹೆಂಡ್ತಿಯು ಮಾವ, ನನ್ನ ಬೇಗ ಮನೆಗೆ ಕರ್ಕೊಂಡು ಹೋಗೀಂತ ಹೇಳಿದ್ರು. ಆ ಜನಕ್ಕೆ ಹೆದ್ರಿಕೆ ಆಯ್ತಾಯ್ತಾ. ಆ ಜನದ್ದೂ ಚೆಂಡು ಹೊಟ್ಟಿದ್ರೇಂತ! ಹ... ಹ.... ಹ...'

'ನಿಮ್ಮ ಹೃದಯ ಹೊಟ್ಲಿಕ್ಕಾಯ್ತಾ ?'

'ನನ್ನ ಹೃದಯ ಹೊಟ್ಲಿಕ್ಕೆ ಇನ್ನೂ ಸೊಲ್ಪ ಸಮಯ ಬೇಕಾದೀತೂಂತ ತೋರ್ತದೆ. ಬಾಕಿದ್ದೋರ್ದಲ್ಲ ಹೊಟ್ಟಿ ಆದ್ಮೇಲೆಯೇ ನನ್ನ ಚೆಂಡು ಹೊಟ್ಟೀತು. ನನ್ನ ಹೆಂಡ್ತಿದೇ ನಂಗೀಗ ಹೆದ್ರಿಕೆ. ಅವ್ಳಿಗ ಯಾವಾಗ್ಲೂ ಅಳು, ಗೋಳು, ಮಕ್ಳು ಪರೀಕ್ಷೇಲಿ ಫೇಲಾದ್ರೂ ಅಳೋದು, ಪಾಸಾದ್ರೂ ಅಳೋದು. ಚೆರೊಟ್ಟಿ ಪರೀಕ್ಷೇಲಿ ಗೆದ್ದಾಗಲೂ ಅವಳಮ್ಮ ಅತ್ತು. ಸಂತೋಷವಾಗಿ ಅತ್ತದ್ದಾಯ್ತಾ. ಅತ್ತೂ ಅತ್ತೂ ಅವ್ಳೀಗ ಬಡಕಲಾಗಿದ್ದಾಳೆ. ಊದಿದ್ರೆ ಹಾರ್ತಾಳೆ. ಇಡೀ ಕಪ್ಪಿಟ್ಟಿದ್ದಾಳೆ. ಹಿಂದೆ, ನನ್ನ ಮಕ್ಕಳನ್ನು ಹೆರೋದಕ್ಕೆ ಮೊದ್ಲು ಅವ್ಳನ್ನು ನೋಡಿದ್ರೆ ಹೇಗಿದ್ಲು ಗೊತ್ತುಂಟಾ ? ಮನೆಯ ಹೂಬಾಳೆ ತರ. ಚಿನ್ನದಬಣ್ಣ. ಹೌದೂಂತ. ಚಿನ್ನದ ಬಣ್ಣ ಇತ್ತು ನನ್ನೆಂಡ್ತಿಗೆ. ಈಗ ಕ್ಷಯ ಹಿಡ್ದು ಬಿಡ್ತು. ರಾತ್ರಿ ಒಂದು ನಿದ್ರೆ ಆದ್ರೆ ಕೆಮ್ಮಿಕ್ಕೆ ಶುರುವಾಯ್ತು. ಆದ್ರೆಂತ ? ಕಫ ಉಗುಳ್ಳಿಕ್ಕಿಲ್ಲ. ಎದೇಲ್ಲೇ ಕಫ ತುಂಬಿಡೋದು. ಕಲ್ಲಿನ ಹಾಗೆ ಗಟ್ಟಿಕಟ್ಟೋದು. ನನ್ನತ್ರ ಚಾಕುಣ್ಣಿ ಡಾಕ್ಟರ್ ಹೇಳಿದ್ರು: ಇದ್ಕೆ ಯಾವ ದಾರಿಯೂ ಇಲ್ಲಾಂತ. ಎದೆಯ ಆಪ್ರೇಶನ್ ಮಾಡಿದ್ರೆ ಕೆಲೋಮ್ಮೆ ಬಚಾವಾಗ್ಲಿಕ್ಕೂ ಸಾಕು. ಅಥವಾ ಆಪ್ರೇಶನ್ ಮಾಡೋವಾಗ್ಲೇ ಶ್ವಾಸಬಿಡ್ಲಿಕ್ಕೂ ಸಾಕು. ಏನು ಮಾಡ್ಬೇಕೂಂತ ತೀರ್ಮಾನಿಸ್ಲಿಕ್ಕೆ ಡಾಕ್ಟ್ರು ಹೇಳಿದ್ರು. ಆಪ್ರೇಶನ್ ಮಾಡಿದ್ರೆ ಕಫೆಲ್ಲ ಹೋದೀತು. ಆದ್ರೆ ಆ ಜನಕ್ಕೆ ಜೀವ ಇರ್ಲಿಕ್ಕಿಲ್ಲ. ಅಷ್ಟೇ ಇರೋದು. ನಾ ಹೇಳಿದೆ, ಬೇಡ ಡಾಕ್ಟ್ರೆ. ನಂಗವಳನ್ನು ನೋಡ್ತಾ ಇದ್ರೆ ಸಾಕು. ಅವ್ಳು ರಾತ್ರಿ ಹಗಲು ಕೆಮ್ಮಿ. ನಂಗ ಬೇಸರಿಲ್ಲ. ಮಕ್ಕಿಗೆ ಅಮ್ಮಾಂತ ಕರೀಲಿಕ್ಕೆ ಒಬ್ಳಿದ್ದಾಳಲ್ಲ, ಅದು ಸಾಕು. ಅವ್ಳ ಎದೆ ಆಪ್ರೇಶನ್ ಮಾಡೋದು ಬೇಡ.'

'ಹಾಗಾದ್ರೆ ಎದೆಯ ಕಫ ?'

'ಕಫ ಅಲ್ಲಿರ್ಲಿ. ಅವ್ಳು ಕೆಮ್ತಾಳೇಂತ ಮಾತ್ರಲ್ವ ? ಅವ್ಳು ಕೆಮ್ಮಿ. ಕೆಮ್ಮೋದು ಕೇಳ್ಳಿಕ್ಕಾಗದೋರು ಕಿವೀಲಿ ಬೆರಳಿಟ್ಕೊಳ್ಳಿ... ಹ... ಹ... ಹ...'

'ನಿಮ್ಮೆಂಡ್ತಿ ಸತ್ತೋದ್ರೆ ?'

'ಸತ್ರೆ ಸತ್ತೋಗ್ಲೀಂತ. ಹುಟ್ಟಿದೋರು ಯಾವಾಗಾದ್ರೂ ಸಾಯ್ಬೇಡ್ವೆ ? ತಂತಿ ಬಂದ್ರೆ ಹೋಗ್ಲಿಕ್ಕೆ ಬೇಕಾದಷ್ಟು ದುಡ್ಡು ಅಂದಾಜು ಮಾಡಿಟ್ಟಿದ್ದೇನೆ. ಯಾರತ್ರವೂ ಹೇಳ್ಬೇಡಿ ಮಗೂ. ಆ ಹಸಿರು ಬಣ್ಣದ ಕಬ್ಬಿಣದ ಪೆಟ್ಗೇಲಿ ಕಾಗದದಲ್ಲಿ ಸುತ್ತಿ ಇಟ್ಟಿದ್ದೇನೆ. ಒಟ್ಟು ನೂರು ರೂಪಾಯಿ ಉಂಟು.

ಇಲ್ಲಿರೋ ದರಿದ್ರದೋರು - ನಾ ಯಾರ ಬಗ್ಗೆ ಹೇಳೋದೂಂತ ನಿಮ್ಗೆ ಗೊತ್ತಾಯ್ತಲ್ಲ - ಗೊತ್ತಾದ್ರೆ ನನ್ನ ಪೆಟ್ಟಿಗೆಯ ಬೀಗ ಒಡ್ದು ಆ ದುಡ್ಡನ್ನು ಕದ್ದಾರು.

ತಂತಿ ಬಂದ್ರೆ ನಂಗೆ ತಿಳಿಸ್ಬೇಕು. ನಾ ಕಂಪನೀಲಿದ್ರು ಕೂಡ ನಂಗೆ ಫೋನ್ ಮಾಡ್ಬೇಕು. ಪಿ.ಕೆ. ವನ್ ಸಿಕ್ಸ್ ಟು ಒ ಅಂತ ಹೇಳಿದ್ರೆ ಕೂಡ್ಲೆ ಸಿಕ್ತದೆ. ಆಗ ಹೇಳ್ಬೇಕು, ಐ ವಾಂಟ್ ಸಿ. ಕೆ. ಮ್ಯಾಥ್ಯೂಸ್. ಪ್ಯೂನಂತೆಲ್ಲ ಹೇಳ್ಬೇಡಿ. ಎಲ್ರಿಗೂ ನನ್ನ ಚೆನ್ನಾಗಿ ಗೊತ್ತು. ಎಲ್ರಿಗೂ ಚಾ ತಕ್ಕೊಂಡೋಗಿ ಕೊಡೋದು ನಾನೆ. ಅದ್ಕೇ ನಾನೂಂದ್ರೆ ಎಲ್ರಿಗೂ ಇಷ್ಟ. ಆ ಕಾಳೀಬಾಬೂನತ್ರ ನನ್ನ ಬಗ್ಗೆ ಕೇಳಿ ನೋಡಿ. ಸಿ.ಕೆ. ಮ್ಯಾಥ್ಯೂಸ್, ವೆರಿ ಗುಡ್ ಮ್ಯಾನ್ ಅಂತ ಹೇಳಿದಿರ್ಲಿಕ್ಕಿಲ್ಲ. ಮತ್ತೆ ಕೆ.ಎಸ್. ಮೆನೋನ್. ಮೆನೋನ್ರಿಗೆ ನಾನೂಂದ್ರೆ ಜೀವ. ನನ್ನ ಅರ್ಧ ಗಂಟೆ ಕಾಣದಿದ್ರೂ ಮೆನೋನ್ರು ಆಚೀಚೆ ಹುಡುಕಾಡ್ಲಿಕ್ಕೆ ಶುರು ಮಾಡ್ತಾರೆ. ಮೆನೋನ್ರ ಮಗೂಗೆ ಮರದಲ್ಲೇ ಒಂದು ಸಣ್ಣ ಮಕ್ಕಮನೆ ಮಾಡ್ತಿಯಾರೆ. ಅದು ಮಗೂನ ಹುಟ್ಟಿದ ಹಬ್ಬಕ್ಕಾಗೋವಾಗ ಪೂರ್ತಿಯಾಗ್ತದೆ. ಅದ್ರ ಚೆಂದ ನೋಡ್ಬೇಕು ಮಗೂ. ನಾಲ್ಕು ಕೋಣೆ. ಕೋಣೆಲೆಲ್ಲ ಮೇಜು, ಕುರ್ಚಿ, ಮಂಚ, ಸೋಫ್ಲಾ, ಕಪ್ಪಾಟು ಎಲ್ಲವುಂಟು. ನಾ ಹೇಳಿದ್ದು ಯಾರತ್ರವೂ ಹೇಳ್ಬೇಡಾಯ್ತಾ. ಆ ಮಗೂನ ಭಾಗ್ಯ! ನಮ್ಮೊಳಗೇ ಇರ್ಲಿ ಆಯ್ತಾ.'

ನಾನು ಕಥೆಗಳನ್ನು ಕೇಳುತ್ತ ಬೆಳೆದವಳು. ನನ್ನ ಅಮ್ಮ ಯುರೋಪ್ಯನ್ ಸಾಹಿತ್ಯ ಕೃತಿಗಳಿಂದ ಆಯ್ದು ಕಥೆಗಳನ್ನು ನನಗೂ ಅಣ್ಣನಿಗೂ ಹೇಳಿಕೊಟ್ಟರು. ಮುತ್ತಜ್ಜಿಯಂದಿರು ಏಕಾದಶಿ ಮಹಾತ್ಮ್ಯ, ಭಾರತ, ಭಾಗವತ, ರಾಮಾಯಣ ಮುಂತಾದವುಗಳನ್ನು ಸಂಜೆಯ ಹೊತ್ತಿಗೆ ಹೇಳಿಕೊಟ್ಟರು. ಚಿಕ್ಕಮ್ಮ ರಮಣಿ, ನಳಿನಿ, ಲೀಲ, ಕರುಣ, ಬಂಧನಕ್ಕೊಳಗಾದ ಅನಿರುದ್ಧ ಮುಂತಾದವರ ಕಥೆಗಳನ್ನು ಹೇಳಿಕೊಟ್ಟರು. ಅವರೆಲ್ಲರೂ ಹೇಳಿಕೊಟ್ಟ ಕಥೆಗಳಲ್ಲಿಯ ನಾಯಕರಿಗಿಂತ ಭಿನ್ನವಾದ ಒಬ್ಬ ಕಥಾನಾಯಕನನ್ನು ಮಾಲತಿಕುಟ್ಟಿ ಒಂದು ದಿವಸ ನನಗೆ ಪರಿಚಯ ಮಾಡಿಕೊಟ್ಟಳು. ಮೀನಾಕ್ಷಿಯಕ್ಕ ತಮಿಳು ಮಾತನಾಡುವ ಬ್ರಾಹ್ಮಣರು ವಾಸಿಸುತ್ತಿದ್ದ ಪಾಲ್ಘಾಟಿನ ಒಂದು ಗ್ರಾಮದಲ್ಲಿ ತನ್ನ ಬಾಲ್ಯವನ್ನು ಕಳೆದಿದ್ದರು. ಆ ಬಾಲ್ಯಕಾಲದಲ್ಲಿ ಅವರೊಳಗೆ ನಾಟಿ ಕುಳಿತಿದ್ದಲ್ಲಿಂದ ಮೇಲಕ್ಕೆದ್ದು ಬಂದ ಒಂದು ಕಥೆಯಾಗಿತ್ತು. ಲಸಿಕೆಕುಡುಕ ರಾಜನ ಕಥೆ. ಒಂದು ಮಂಗ ತನ್ನ ಕುತ್ತಿಗೆಯಲ್ಲಿದ್ದ ಕುರವೊಂದರಿಂದ ಲಸಿಕೆ ತೆಗೆದು ಅದನ್ನೊಂದು ಮಣ್ಣಿನ ಪಾತ್ರೆಯಲ್ಲಿ ಶೇಖರಿಸಿ ಮಾರುವುದಕ್ಕೆ ಕೊಂಡು ಹೋಯಿತು. ಅದನ್ನು ಕೊಂಡುಕೊಂಡು ಅನ್ನದೊಂದಿಗೆ ಮಿಶ್ರಮಾಡಿ ಊಟಮಾಡಿದ ರಾಜನನ್ನು ಮಂಗ 'ಲಸಿಕೆಕುಡುಕರಾಜ' ಎಂದು ಕರೆದು ಗೇಲಿ ಮಾಡಿತು. ಆಮೇಲೇನಾಯಿತು ಎಂದು ಮಾಲತಿಕುಟ್ಟಿಗೆ ಗೊತ್ತಾಗಲಿಲ್ಲ. ಮೀನಾಕ್ಷಿ ಅಕ್ಕನಿಗೂ ಕಥೆಯ ಅಂತಿಮ ಭಾಗ ಸ್ಪಷ್ಟವಿರಲಿಲ್ಲ.

'ಮತ್ತೇನಾಯಿತು ?' ನಾನು ಕೇಳಿದೆ.

ಮಾಲತಿಕುಟ್ಟಿ ಮೀನಾಕ್ಷಿಯಕ್ಕನೊಂದಿಗೆ ಕೋಪದಲ್ಲಿ ಕೇಳಿದಳು:

'ಮತ್ತ ಅದದ್ದೇನು ?'

ಮೀನಾಕ್ಷಿಯಕ್ಕ. ಜಗಲಿಯಲ್ಲಿ ಕುಳಿತು ವೀಳ್ಯದೆಲೆ ಜಗಿಯುತ್ತಿದ್ದರು. ಆ ಪ್ರಶ್ನೆ ಅವರಿಗೆ ಕೇಳಲಿಲ್ಲ ಎಂಬಂತೆ ವರ್ತಿಸುತ್ತ ಅವರು ಬಡಗಣ ಹಿತ್ತಲಿನ ಕಡೆಗೆ

ನೋಡಿದರು. ಅಲ್ಲಿ ಕಾಣಿಸುತ್ತಿದ್ದ ಹುಳಿಮರಗಳನ್ನೂ ಉಮ್ಮತ್ತದ ಗಿಡಗಳನ್ನೂ ಬೇಲಿಯಲ್ಲಿ ಬೆಳೆದು ನಿಂತಿದ್ದ ಕಾಡುನೀರುಳ್ಳಿ ಗಿಡಗಳನ್ನೂ ಅವರು ಅರೆಮುಚ್ಚಿದ ರೆಪ್ಪೆಗಳಿಂದ ನೋಡಿದರು.

'ಹೇಳಿ ಮೀನಾಕ್ಷ್ಯಕ್ಕ' ಮಾಲತಿಕುಟ್ಟಿ ಹೇಳಿದಳು.

'ಮತ್ತ ರಾಜ ಏನು ಮಾಡಿದ ?'

'ಮತ್ತ ಮಂಗ ಏನು ಮಾಡಿತು ?'

ಮೀನಾಕ್ಷಿ ಅಕ್ಕ ನಕ್ಕರು. 'ಲಸಿಕೆ ಕುಡಿದಾದ ಮೇಲೆ ಮತ್ತೇನು ಮಾಡ್ಲಿಕ್ಕುಂಟು ?' ಅವರು ಕೇಳಿದರು.

'ರಾಜ ಮಂಗನ್ನ್ನು ಹಿಡ್ದು ಕೊಲ್ಲಿಲ್ವ ?'

'ಮಂಗನ್ನ್ನು ಯಾರಿಗೂ ಕೊಲ್ಲಿಕ್ಕೆ ಸಾಧ್ಯವಿಲ್ಲ. ಅದು ಮರಕ್ಕೆ ಹತ್ತೋದಿಲ್ವ. ಮರದ ಮೇಲಲ್ವ ಅದರ ವಾಸ. ಅಲ್ಲಿ ಯಾರೂ ಓಡೀಲಿಕ್ಕಿಲ್ಲಲ್ಲ. ಅದು ಮರದ ಮೇಲೆ ಸುಖವಾಗಿತ್ತು" ಮೀನಾಕ್ಷಿ ಅಕ್ಕ ಹೇಳಿದರು.

'ಹಾಗಾದ್ರೆ ಆ ಮಂಗನ ಕುರವೊ ? ಅದು ಗುಣಾಗ್ಬೇಡ್ವ ?'

'ಕುರವೆಲ್ಲ ಗುಣಾಗಿರ್ತದೆ. ನಂಗೊತ್ತಿಲ್ಲ ಮಗೂ.'

'ನಿಮ್ಗೆ ಏನೂ ಗೊತ್ತಿಲ್ದಿದ್ರೆ ನೀವ್ಯಾಕೆ ಕಥೆ ಹೇಳ್ಳಿಕ್ಕೆ ತೊಡಗಿದ್ದು ಮೀನಾಕ್ಷ್ಯಕ್ಕ ?' ಮಾಲತಿಕುಟ್ಟಿ ಕೇಳಿದಳು.

'ಇನ್ನು ನಾನು ಕತೆ ಹೇಳಿಕ್ಕಿಲ್ಲಾಯ್ತಾ. ನಿಂಗೆ ನನ್ನತ್ರ ಇಷ್ಟು ಸಿಟ್ಟಿದ್ರೆ ನಾಯಾಕೆ ಕತೆ ಹೇಳೋದು ?' ಅಂದಿನ ಆ ವಾದ ಪ್ರತಿವಾದ ಮಾಲತಿಕುಟ್ಟಿಯ ಅಳಲಿನೊಂದಿಗೆ ಮುಕ್ತಾಯವಾಯಿತು. ಅವಳ ಅಮ್ಮ ಬಹು ಹಿಂದೆಯೇ ತೀರಿಹೋಗಿದ್ದರು. ಆದ್ದರಿಂದ ಮಾಲತಿಕುಟ್ಟಿ ಕುಟ್ಟಿಯಕ್ಕ ಎಂಬುದಾಗಿ ಕರೆಯಲ್ಪಡುತ್ತಿದ್ದ ನನ್ನ ದೊಡ್ಡತ್ತೆಯ ಆಶ್ರಯದಲ್ಲಿ ಬೆಳೆದಳು. ಮೀನಾಕ್ಷಿಯಕ್ಕನ ಕಥೆ ಮಾಲತಿಕುಟ್ಟಿಯಲ್ಲಿ ಅತೃಪ್ತಿಯನ್ನು ಉಂಟುಮಾಡಿತು. ಆದ್ದರಿಂದ ಕುಟ್ಟಿಯಕ್ಕ ಅದೇ ದಿನ ಪೇಶಾಮುಡಂದಿಯ ಕಥೆಯನ್ನು ನಮಗಾಗಿ ಹೇಳಬೇಕಾಯ್ತು. ಪೇಶಾಮುಡಂದಿಯ ಕಥೆಯನ್ನು ಕೇಳಿದಾಗ ಎಲಿಯಜಾಟ್ಟಿನ ಶಾಲೆಯಲ್ಲಿ ಕಲಿಯುವ ಜಾನಕಿ ಹೇಳಿದಳು, 'ಇದೆಲ್ಲ ಡೋಂಗಿ ಕಥೆ.'

'ಡೋಂಗಿ ಕಥೆಯಾಗಿದ್ರೂ ಕೇಳ್ತಾ ಕೂತ್ಕೊಳ್ಳಿಕ್ಕೆ ಒಳ್ಳೇದಾಗ್ತದೆ' ಎಂಬುದಾಗಿ ಕೋಟ್ಟಯುದ ತಂಗಂ ಹೇಳಿದಳು.

'ಈ ಲೋಕದಲ್ಲಿ ಅತಿ ದೊಡ್ಡ್ ಸುಖಾಂದ್ರೆ ಯಾವುದೂಂತ ಗೊತ್ತುಂಟಾ ?' ಕೆ.ಕೆ. ದೇವಕಿ ಕೇಳಿದಳು.

'ಶಾಲೆ ಬಿಟ್ಟು ಮನೆ ತಲುಪಿ ಮೂತ್ರ ಮಾಡುವಾಗಿನ ಸುಖ. ಅದಕ್ಕೇ ಅತಿ ಹೆಚ್ಚು ಸುಖವಿರೋದು' ತಂಗಂ ಹೇಳಿದಳು.

'ಉಂಡಾಡಿಗ ಹೋಗಿ ನೆಲ್ಲಿಕಾಯಿ ತಿಂದು ಅಂಗಡಿಮನೇಂದ ನೀರ್ಕುಡಿಬೇಕು. ಅದು ಭಾರೀ ದೊಡ್ಡ ಗಮ್ಮತ್ತಾಗ್ತದೆ' ದೇವಕಿ ಹೇಳಿದಳು.

'ನೀರಿಗೆ ಆಗ ರುಚಿ ಹೆಚ್ಚುತ್ತದೆ' ಜಾನಕಿ ಹೇಳಿದಳು.

ನನಗೆ ಉಂಡಾಡಿಗೆ ಹೋಗಿ ನೆಲ್ಲಿಕಾಯಿ ಹೆಕ್ಕಿ ತಿಂದು ಅಂಗಡಿಮನೆಗೆ ಹೋಗಿ

ನೀರು ಕುಡೀಬೇಕೂಂತ ನಾನು ಅಜ್ಜಿಯ ಹತ್ತಿರ ಹೇಳಿದೆ.

'ಇಲ್ಲಿಯ ನೆಲ್ಲೀಮರದಲ್ಲಿ ನೆಲ್ಲಿಕಾಯಿ ಉಂಟಲ್ಲ. ಮತ್ಯಾಕ ಉಂಡಾಡಿಗೆ ಹೋಗಿ ನೆಲ್ಲಿಕಾಯಿ ತಿನ್ನೋದು ?' ಅಜ್ಜಿ ಕೇಳಿದರು.

ನಾಲಪ್ಪಾಟ್ಟ್ ಬಡಗು ಅಂಗಳಕ್ಕೂ ಬಚ್ಚಲು ಮನೆಗೂ ನಡುವೆ ಒಂದು ದೊಡ್ಡ ನೆಲ್ಲಿಯ ಮರವಿದೆ. ಒಂದು ಭಾಗ ಮೊನಚಾದ ತುಸು ಹಸುರು ಗೋಲಿಗಳನ್ನು ನೆನಪಿಗೆ ತರುವ ನೆಲ್ಲಿಕಾಯಿಗಳು ಆ ಮರದ ಗೆಲ್ಲುಗಳಲ್ಲಿ ಧಾರಾಳವಾಗಿ ಬೆಳೆದು ನಿಂತಿದ್ದವು.

ಆದರೂ ನನಗೆ ಉಂಡಾಡಿ ನಂಬೀಶನ್ರ ಮನೆ ಹತ್ರವಿದ್ದ ನೆಲ್ಲಿಯಕಾಯಿಯೇ ಬೇಕೂಂತ ಹಠಹಿಡಿದೆ.

'ನಿಂಗ ಹುಚ್ಚಾ ಕಮ್ಲ' ಅಜ್ಜಿ ಕೇಳಿದರು.

'ನಂಗ ಅಂಗಡಿಮನೆಯಲ್ಲೇ ನೀರು ಕುಡೀಬೇಕು' ನಾನು ಹೇಳಿದೆ.

ಅಂಗಡಿಮನೆ ಎಂಬುದಾಗಿ ಕರೆಯಲ್ಪಡುತ್ತಿದ್ದ ಜಾಗದಲ್ಲಿ ಕುಂಜುಣ್ಣಿ ನಂಬೀಶನ್ರ ಮನೆಯಿತ್ತು. ಅವರು ವೈದ್ಯರೂ ಸಂಸ್ಕೃತ ಪಂಡಿತರೂ ಆಗಿದ್ದರು. ನನಗೆ ಹೊಟ್ಟೆನೋವುಂಟೂಂತ ಹೇಳಿದಾಗಲೆಲ್ಲ ಅಜ್ಜಿ ಅವರು ತಯಾರಿಸಿದ ಮೂಲಾಸವವನ್ನು ಒಂದು ದೊಡ್ಡ ಚಂಚದಲ್ಲಿ ನನ್ನ ಬಾಯಿಗೆರೆಯುತ್ತಿದ್ದರು. ನನಗೆ ರುಚಿಯಿಲ್ಲ ಎಂಬುದಾಗಿ ಅಜ್ಜಿ ಆಗಾಗ ನಂಬೀಶನ್‌ರೊಂದಿಗೆ ಅಹವಾಲು ಹೇಳುತ್ತಿದ್ದರು.

ಒಮ್ಮೆ ನಂಬೀಶನ್‌ರು ಹೇಳಿದರು. 'ಪಿಪ್ಪಲ್ಯಾಸವ ಮಾಡಿ ತರ್ತೇನೆ. ಗ್ರಹಣಿ ಹೊಟ್ಟೋಗ್ಲಿ.'

'ಅಮ್ಮಿಗೆ ಗ್ರಹಣಿ ಉಂಟಾ ನಂಬೀಶಾ ?' ಅಜ್ಜಿ ಕೇಳಿದರು.

'ಉಂಟೂಂತ ತೋರ್ತದೆ. ಕೈಕಾಲು ಕ್ಷೀಣವಾಗುಂಟು. ಪಿಪ್ಪಲ್ಯಾಸವ ಸೇವಿಸ್ಲಿ. ಎರಡು ತಿಂಗಳಿನಲ್ಲಿ ಮಗೂನ್ನ ನೋಡಿದ್ರೆ ಗೊತ್ತಾಗ್ಲಿಕ್ಕಿಲ್ಲ. ಅಷ್ಟೂ ಒಳ್ಳೆದಾಗ್ತದೆ. ಅದ್ಕೆ ಕಾರಣವಿದೆ. ತಿಪ್ಪಲಿ, ಕೊಡುವೇಲಿಗೆಣಸು, ಭದ್ರಮುಷ್ಟಿ, ಬಿದಿರಕ್ಕಿ, ನೆಲ್ಲಿಕೆತ್ತ, ಲಾವಂಚ, ಚಂದನ, ಏಲಕ್ಕಿಹುಡಿ ಇದೆಲ್ಲವನ್ನೂ ಅದ್ರಲ್ಲಿ ಸೇರಿಸ್ಬೇಕು. ಫಲವಿಲ್ಲದೆ ಇದ್ದೀತಾ ? ಮಗೂನ ಶರೀರ ಒಳ್ಳೇದಾಗ್ತದೆ. ಸಂಶಯವಿಲ್ಲ. ಕರ್ಕಾಟಕದಲ್ಲಿ ಸುರುಮಾಡ್ವಾ. ಆಯ್ತಾ ?

ಅಜ್ಜಿಗೆ ಕುಂಜುಣ್ಣಿ ನಂಬೀಶನ್‌ರ ಮದ್ದಿನಲ್ಲಿ ಪೂರ್ಣ ವಿಶ್ವಾಸವಿತ್ತು. ಒಮ್ಮೆ ರಕ್ಕಸಜೇಡ ಊರಾಂಬುಲಿಯ ವಿಷತಾಗಿ ಮುಖದಲ್ಲಿ ಕೆಂಪು ದಡಿಕೆ ಕಂಡು ಅಜ್ಜಿ ನಂಬೀಶನ್ರ ಹಸಿಮದ್ದುಗಳನ್ನು ಮಾತ್ರವೆ ಮುಖದ ಮೇಲೆ ಅರೆದು ಹಚ್ಚಿದ್ದರು. ಚೆಂಡ್ಲಕಾಯಿ, ಬಿಳಿಯ ಸಾಸಿವೆ ಇತ್ಯಾದಿ ಸೇರಿಸಿ ಅರೆದು ಬಳಿದು ಮುಖವನ್ನು ಭೀಭತ್ಸಗೊಳಿಸಿ ಅವರು ಕೆಳಗಿನ ಬಡಗುಕೋಣೆಯಲ್ಲಿ ಒಂದು ಏಕಾಂತ ಕೈದಿಯಾಗಿ ಕಾಲ ಕಳೆಯಬೇಕಾಗಿ ಬಂತು. ಎಷ್ಟು ಸಲ ಬೇಡಿಕೊಂಡರೂ ಅವರು ಆ ಕೋಣೆಯ ಬಾಗಿಲನ್ನು ತೆರೆಯಲಿಲ್ಲ.

ಮಗೂಗೆ ಪದ್ರಿಕೆ ಆದೀತು ಎಂಬುದಾಗಿ ಅಜ್ಜಿ ಬಾಗಿಲಿನ ಹಿಂದೆ ನಿಂತು ಹೇಳಿದರು.

'ನಿಜವೆ. ಕಂಡರೆ ಹೆದ್ರಿಕೆಯಾದೀತು. ಮುಖ ಕಪ್ಪಿಟ್ಟಿದೆ. ನೀರು ಬಂದು ದೊಡ್ಡ ಬರಿಕೆ ಹಲಸಿನಷ್ಟಕ್ಕೆ ಮುಖ ಊದಿಕೊಂಡಿದೆ' ದೇವಕಿ ಹೇಳಿದಳು.

'ನೀ ಹೇಗೆ ನೋಡಿದೆ ದೇವಕಿ ?' ನಾನು ಕೇಳಿದೆ.

'ಅದೀಗ ಗಮ್ಮತ್ತಾಯ್ತು! ನಾನಲ್ವಾ ಮಗೂಗೆ ಊಟ ಕೊಂಡೋಗಿ ಕೋಡೋದು. ನಾ ನೋಡದಿರ್ತೇನಾ ?'

ಊರಾಂಬುಲೀಂತಂದ್ರೆ ಎಂತ ? ಅದು ನೋಡ್ಲಿಕ್ಕೆ ಹೇಗಿರ್ತದೆ ?' ನಾನು ದೇವಕಿಯುನ್ನು ಕೇಳಿದೆ.

'ಊರಾಂಬುಲೀಂತಂದ್ರೆ ಒಂದು ದೊಡ್ಡ ಹುಲಿ. ಅದು ರಾತ್ರೀಲಿ ಹೊರಗೆ ಬರ್ತದೆ. ಹಗಲೆಲ್ಲ ಅದು ಕಾಡಿನ ಒಳಗೇ ನಿದ್ರೆ ಮಾಡ್ತದೆ. ರಾತ್ರಿಯಾಗೋವಾಗ ಅದು ಮನೆಮನೆ ಹತ್ತಿ ಮಲಗಿ ನಿದ್ರಿಸ್ತಿರೋರನ್ನು ಓಡ್ಬು ಕಚ್ಚಿ ಬಿಡ್ತದೆ. ಅದಕ್ಕೆ ಭಯಂಕರ ವಿಷ. ಹಾವಿಗಿಂತ ವಿಷ ಅದ್ರ ಹಲ್ಲಿಗೆ.'

'ಇಲ್ಲಿ ಹತ್ರ ಕಾಡಿಲ್ಲಲ್ಲ. ಮತ್ತೆಲ್ಲಿ ಆ ಊರಾಂಬುಲಿ ಅಡಗಿ ಕೂತ್ಕೊಳ್ಳೋದು ?'

'ಗದ್ದೆ ಮೂಲೇಲಿ ಒಂದು ಪಾಲೆಮರ ಇಲ್ವ. ಅದ್ರ ಅಡಿಯಿಂದಾಗಿ ಮಳೆಗಾಲದಲ್ಲಿ ನೀರು ಭೂಂಭೂಂತ ಹೋಗೋದು ನೋಡ್ಲಿಲ್ವ. ಆ ಪಾಲೆಮರದಡೀಲಿ ಊರಾಂಬುಲಿ ಕೂತಿರ್ತದೆ. ನೀವು ನೋಡ್ಲಿಕ್ಕೆ ಹೋಗ್ಬೇಡಿ ಮಗೂ. ಮನ್ಶ್ಯರನ್ನು ನೋಡೋದು ಅದಕ್ಕೆ ಇಷ್ಟಾಗೋದಿಲ್ಲ.'

'ನಾ ನೋಡ್ಲಿಕ್ಕೆ ಹೋಗೋದಿಲ್ಲ.'

'ಇದೆಲ್ಲ ನಾ ಹೇಳಿಕೊಟ್ಟೇಂತ ಯಾರತ್ರವೂ ಹೇಳ್ಬೇಡಿಯಾಯ್ತಾ. ದೊಡ್ಡವ್ರೋರು ನನ್ನ ಬೈದು ಕಣ್ಣೊಟ್ಟಿಸ್ಯಾರು. ನಿಮ್ಮನ್ನು ಹೆದ್ರಿಸ್ತೇನೇಂತ ಹೇಳ್ಯಾರು. ನಾನ್ನಿಮ್ಮನ್ನು ಹೆದ್ರಿಸ್ತೇನಾ ಮಗೂ. ನೀವೂಂದ್ರೆ ನಂಗೆ ಜೀವ. ನಿಮ್ಗೆ ನಾಯಿಷ್ಟವಾ ?'

ನಾ ತಲೆ ಅಲುಗಿಸಿದೆ.

ದೇವಕಿ ತನ್ನ ಬೆವರುವ ತೋಳುಗಳಲ್ಲಿ ನನ್ನನ್ನು ಬಂಧಿಸಿದಳು. ಅವಳ ಕಂಕುಳದಿಂದ ಹೊರಟವಾಸನೆ ನನ್ನನ್ನು ಅಸ್ವಸ್ಥನನ್ನಾಗಿಸಿತು. ವಾಂತಿ ಬಂದ ಹಾಗಾಯಿತು.

'ನನ್ನ ಬಿಡುದೇವಕಿ' ನಾನು ಕೂಗಿ ಹೇಳಿದೆ.

'ದೊಡ್ಡವ್ರೋರನ್ನು ಎಬ್ಬಿಸ್ಬೇಡಿ ಮಗೂ. ನನ್ನ ಬೈದು ಕಣ್ಣೊಟ್ಟಿಸ್ಯಾರು. ನಿಮ್ಗೆ ಹುಳಿ ಬೀಜ ಸುಟ್ಟುಕೊಡ್ಬೇಕಾ ? ಒಳ್ಳೆ ರುಚಿ ಉಂಟು. ನೀವು ಹುಳಿಬೀಜ ಸುಟ್ಟು ತಿನ್ಲಿಲ್ವ ? ನಾ ಸುಟ್ಟು ಕೊಡ್ತೇನೆ. ಆ ಶಂಕರನ್ ನಾಯರ್ ಎದ್ದು ಬಾರದಿದ್ರೆ ಸಾಕು. ಆ ಜನ ದೊಡ್ಡವ್ರೋರಿಗೆ ಚುಚ್ಚಿಕೊಡ್ತಾರೆ. ಸೇರ್ಸಿಕೊಡೋರನ್ನು ನಂಗಿಷ್ಟ ಇಲ್ಲ. ಸಿಕ್ಕಿಸಿ ಹಾಕಿಕೊಡೋರನ್ನು ನಂಗೆ ಕಂಡ್ರಾಗೋದಿಲ್ಲ. ಅವ್ರವ್ರ ಕೆಲಸಾ ಮಾಡ್ಬೇಕು. ಅದು ಮುಗಿದ್ರೆ ಒಂದು ಕಡೇಲಿ ಕೂತ್ಕೊಳ್ಬೇಕು. ಇಲ್ದಿದ್ರೆ ಏನಾದ್ರೂ ದೇವರ ನಾಮ ಹೇಳ್ಬೇಕು. ಅಲ್ದೆ ಒಂದೊಂದು ಬೇಡದ್ದು ಹೇಳಿ ಸಿಕ್ಕಿಸಿ ಹಾಕಿ ತಮ್ಮೊಳಗೆ ಹೊಡ್ಸೋದು ನಂಗಿಷ್ಟ ಇಲ್ಲ. ನನ್ನ ಸೊಭಾವ ಅಂತದ್ದಲ್ಲ. ನನ್ನ ಮಾವ ನನ್ನ ಹಾಗೆ ಬೆಳ್ಸಿದ್ದಲ್ಲ. ನಾಲಿಗೆ ಇದ್ರೆ ಅದನ್ನು ಸ್ವಂತ ಬಾಯಲ್ಲೇ ಇಟ್ಕೊಳ್ಬೇಕೂಂತ

ಮಾವ ಹೇಳ್ತಿದ್ರು. ನಾನು ಕಮಕಿಮಾಂತ ಮಾತಾಡ್ಲಿಕ್ಕಿಲ್ಲಾಂತಿಟ್ಕೊಳ್ಳಿ. ನನ್ನ ಶಬ್ದ ಯಾರೂ ಕೇಳ್ಳಿಕ್ಕಿಲ್ಲ ಮಗೂ. ದೇವಕಿ ಗಟ್ಟಿ ನಗಾಡಿದ್ಲೂಂತ ಯಾರೂ ಹೇಳ್ಳಿಕ್ಕಿಲ್ಲ. ಅದು ಕಂಡಿತ. ನಾ ಒಂದೊಂದು ಚಾಡಿ ಹೇಳಿ ಕಚ್ಚಿಸಿ ಹಾಕಿದೇಂತ ಈ ಲೋಕದಲ್ಲಿ ಯಾರೂ ಹೇಳ್ಳಿಕ್ಕಿಲ್ಲ. ನನ್ನ ಸೊಬಾವ ಅಂತದ್ದಲ್ಲ. ನನ್ನ ಮಾವ ಬರೆಯೆಳ್ದು ನಿಲ್ಲಿ ನನ್ನೂ ನನ್ಸೋದರನನ್ನೂ ಬೆಳ್ಸಿದ್ದು. ನೀವೇನೇಳ್ತೀರಿ ಮಗೂ. ನಾ ಕೆಟ್ಟೋಳಾ ?'

'ನೀ ಕೆಟ್ಟೋಳಲ್ಲ' ನಾನು ಹೇಳಿದೆ.

ಲಂಬೋದರ ಮಾಷ್ಟ್ರು ಎಂಬ ಮುದ್ದಾದ ಹೆಸರಿನಿಂದ ಕರೆಯಲ್ಪಡುವ ಮುದುಕರೊಬ್ಬರು ನನ್ನ ತಮ್ಮನಿಗೆ ಭೂಮಿಶಾಸ್ತ್ರ ಕಲಿಸುವಾಗ ತಂಟೆಕೋರರಾದ ಗೆಳೆಯರ ಚಪ್ಪಾಳೆ ಸಂಪಾದಿಸುವುದಕ್ಕೆಂದು ನಾನು ಧೈರ್ಯತಾಳಿ ಆ ಕೋಣೆಗೆ ಪ್ರವೇಶಿಸಿದೆ.

ನನ್ನ ಗೆಳೆಯರು ಬಾಗಿಲಿನ ಹಿಂದೆ ಅದೃಶ್ಯರಾಗಿ ಕಾದು ನಿಂತರು. ಸರೋಜ, ವಿಶ್ವನಾಥ, ಬುಚ್ಚು ಎಂದು ಕರೆಯಲ್ಪಡುವ 'ಹೀರನ್', ಶಾಂತು ಬ್ಯಾನರ್ಜಿ ಮೊದಲಾದವರು.

'ಸರ್, ತಾವು ಹೇಳಿದ್ದಲ್ವಾ ಭೂಮಿ ಅಕ್ಷದಲ್ಲಿ ತಿರುಗ್ತದೇಂತ. ಆ ಅಕ್ಷದಂಡ ಯಾವ ರಾಜ್ಯದಲ್ಲಿದೆ ?' ಯಾವ ಪಟ್ಟಣದಲ್ಲಿ ? ಯಾವ ರಸ್ತೆಯಲ್ಲಿ ?' ನಾನು ಕೇಳಿದೆ.

ಮಾಷ್ಟ್ರ ಕಪ್ಪು ಮುಖ ಒಂದು ನೇರಳೆ ಹಣ್ಣಿನಂತೆ ಊದಿಕೊಂಡಿತು. ಕುತ್ತಿಗೆಯ ಪಕ್ಕದ ನರಗಳು ಒಂದು ಭೂಪಟದ ನದಿಗಳನ್ನು ನೆನಪಿಗೆ ತಂದವು.

'ಭೂಮಿಯ ಅಕ್ಷದಂಡ ಎಲ್ಲೀಂತ ನಿಂಗೊತ್ತಾಗ್ಬೇಕು ? ಅಲ್ವ ?' ಮಾಷ್ಟ್ರು ತನ್ನ ಕೃತಕ ಹಲ್ಲು ಸಾಲುಗಳನ್ನು ಕಡಿಯುತ್ತಾ ಕೇಳಿದರು. ಅವರ ಕಡೆಬಾಯಲ್ಲಿ ಜೊಲ್ಲು ರಸದ ನೊರೆ ಅಂಟಿ ನಿಂತದ್ದನ್ನು ನಾನು ನೋಡಿದೆ.

'ಹೌದು ಸರ್. ಈ ಲೋಕದ ಅಕ್ಷದಂಡ ಎಲ್ಲಿ ಇದೆ ಎಂಬುದು ನಂಗೆ ಗೊತ್ತಾಗಬೇಕು.'

'ಅಕ್ಷದಂಡ ಇಗೋ ಇಲ್ಲಿದೆ' ಮಾಷ್ಟ್ರು ಗರ್ಜಿಸಿದರು. ಕುರ್ಚಿಯ ಹಿಂಭಾಗದಲ್ಲಿ ತೂಗಿಸಿಟ್ಟಿದ್ದ ಉದ್ದನೆಯ ಬೆತ್ತ ಟಣ್ಣನೆ ನೆಲಕ್ಕೆ ಬಿತ್ತು. ಅದನ್ನು ಹೆಕ್ಕಿ ತೆಗೆದು ಮೊದಲಿನ ಜಾಗದಲ್ಲಿಡಲು ಮಾಷ್ಟ್ರಾಗಲಿ, ನಾನಾಗಲಿ ಮುಂದೆ ಬರಲಿಲ್ಲ.

'ಸರ್, ಅಕ್ಷದಂಡ ಈ ಕೋಣೆಯಲ್ಲಿ ಉಂಟೂಂತಾನಾ ನೀವು ಹೇಳೋದು ?' ನಾನು ಕೇಳಿದೆ.

'ಹೌದು. ಈ ಕೋಣೆಯಲ್ಲಿ, ಈ ಕುರ್ಚಿಯಲ್ಲಿ ಆ ಅಕ್ಷದಂಡ ಉಂಟು.'

ಮಾಷ್ಟ್ರ ಗಟ್ಟಿಯಾದ ಮಾತು ಕೇಳಿಯೇ ಆಗಿರಬೇಕು, ಅಡುಗೆ ಕೋಣೆಯಿಂದಲೂ ಒಗೆಯುವ ಕೋಣೆಯಿಂದಲೂ ಜನರು ಓಡಿ ಬಂದು ಆ ಕಡೆಗೆ ನೋಡಿದ್ದು.

ನಾನು ಬಾಗಿಲಿನ ಕಡೆಗೆ ನೋಡಿದೆ. ಅರ್ಧ ಚಂದ್ರಾಕೃತಿಯಲ್ಲಿ ಕಾಣುತ್ತಿದ್ದ ಮುಖಗಳು ನನ್ನ ಸಹಪಾಠಿಗಳದ್ದಾಗಿದ್ದವು. ಮೊದಲಿಗಿಂತ ಹೆಚ್ಚು ಧೈರ್ಯತಾಳಿ ನಾನು ಮಾಷ್ಟ್ರ ಎದುರಿಗೆ ತಿರುಗಿ ನಿಂತೆ.

'ಸರ್, ಈ ಲೋಕದ ಅಕ್ಷದಂಡ ತಾವು ಕುಳಿತುಕೊಳ್ಳುವ ಕುರ್ಚಿಯಲ್ಲಿ ನೆಲೆಗೊಂಡಿದೆ ಎಂದು ನಾವು ನಂಬಬೇಕು, ಅಲ್ವೆ? ಆ ಲೆಕ್ಕದಲ್ಲಾದ್ರೆ ತಾವೇ ಆಗಿರ್ಬೇಕು ಆ ಅಕ್ಷದಂಡ, ಅಲ್ವೇ' ನಾನು ಕೇಳಿದೆ.

'ಹೌದು, ಈ ಲೋಕದ ಅಕ್ಷದಂಡ ನಾನೇ' ಅವರು ಹೇಳಿದರು.

ಮ್ಲಾನವದನನಾಗಿ ಕುಳಿತಿದ್ದ ತಮ್ಮನ ಕಣ್ಣುಗಳು ತುಂಬಿಕೊಂಡವು.

'ಇದನ್ನು ಹೇಳಿಕೊಟ್ಟದ್ದಕ್ಕೆ ಧನ್ಯವಾದಗಳು' ನಾನು ಹೇಳಿದೆ. ಆ ಕೋಣೆಯಿಂದ ಚಾವಡಿಗೆ ಹೋದ ನನ್ನನ್ನು ಗೆಳೆಯರೂ ಕೆಲಸದವರೂ ನಿಶ್ಶಬ್ದರಾಗಿ ಹಿಂಬಾಲಿಸಿದರು. 'ಈಗ ನಿಮಗೆಲ್ಲ ಗೊತ್ತಾಯ್ತಲ್ಲ. ಲಂಬೋದರ ಮಾಷ್ಟಿಗೆ ಹುಚ್ಚೂಂತ. ನಾನೆಷ್ಟು ಸಲ ನಿಮ್ಮತ್ರ ಹೇಳಿದ್ದೇನೆ ಇವರ ಹುಚ್ಚಿನ ಬಗ್ಗೆ?' ನಾನು ಹೇಳಿದೆ.

ಅದು ಹಿಂದೆ ಯಾವತ್ತೊ ನಡೆದ ಮಾತುಕತೆ. ಮಾಸ್ಟ್ರಿಗೆ ಹುಚ್ಚೂಂತ ನಾನಂದು ನಂಬಿದ್ದೆ. ಆಮೇಲೆ ನನಗೆ ಗೊತ್ತಾಯ್ತು. ಅವರು ಹೇಳಿದ್ದು ಕೇವಲ ಸತ್ಯವನ್ನು ಅಂತ. ಆಯಾ ವ್ಯಕ್ತಿಗೆ ಲೋಕದ ಅಕ್ಷದಂಡ ಆತನೇ ಆಗಿರುತ್ತಾನೆ. ಆ ಲೋಕದ ಸುತ್ತುವಿಕೆಯ ಗತಿಯನ್ನು ನಿಯಂತ್ರಿಸುವುದಕ್ಕೆ ಬೇರಾರಿಗೂ ಸಾಧ್ಯವಿಲ್ಲ. ನಮ್ಮಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಕಾಲ್ಪನಿಕ ಲೋಕವೂ ಅದರ ಹತ್ತಿರದಲ್ಲೇ ಒಂದು ಯಥಾರ್ಥ ಲೋಕವೂ ಇರುತ್ತದೆ. ಯಥಾರ್ಥ ಲೋಕದಲ್ಲಿ ಸಂಪಾದಿಸಿದ ಯಶಸ್ಸು ಕಾಲ್ಪನಿಕ ಲೋಕದಲ್ಲೂ ಕಾಲ್ಪನಿಕ ಲೋಕದಲ್ಲಿ ಸಂಪಾದಿಸಿದ ಯಶಸ್ಸು ಯಥಾರ್ಥ ಲೋಕದಲ್ಲೂ ಕುಡುಕೊಳೆಗಳಾಗುತ್ತವೆ ಎಂಬುದಾಗಿ ನಾನು ಕ್ರಮೇಣ ಅರ್ಥ ಮಾಡಿಕೊಂಡೆ. ಕಾಲ್ಪನಿಕ ಲೋಕದಿಂದ ಸಂಪಾದಿಸುವ ಶಕ್ತಿಯನ್ನು ನೆರಳಿನಿಂದ ಪಡೆದುಕೊಳ್ಳುವ ಶಕ್ತಿಯೊಂದಿಗೆ ಹೋಲಿಸಬಹುದು. ಆದರೆ 1944ರಲ್ಲಿ ಲಾನ್ಸ್‌ಡೌನ್ ರಸ್ತೆಯಲ್ಲಿ ನೆಲೆಸಿದ್ದ ನಮ್ಮ ಮನೆಯಲ್ಲಿ ನಾನು ಮಿಸ್ಟರ್ ಫ್ರಾನ್ಸಿಸ್ ಸಿಕ್ವೇರಾರನ್ನು ಓರ್ವ ಮಾನಸಿಕ ರೋಗಿ ಎಂಬುದಾಗಿ ಅಪಾರ್ಥಿಸಿದ್ದೆ. ತಂದೆಯ ಆಫೀಸಿನಲ್ಲಿ ಪೇದೆಯಾಗಿದ್ದ ಕುಞ್ಞಾತ್ತು ಮನೆಯ ಇದ್ದಲ ಕೋಣೆಯಲ್ಲಿ ಅಂದು ನೆಲಸಿದ್ದರು. ಅವರಿಗೆ ಮಾಷ್ಟ್ರ ಬಗ್ಗೆ ತಿರಸ್ಕಾರವಿತ್ತು. ಕ್ರಿಸ್ಮಸ್ ಸಮಯದಲ್ಲಿ ತಂದೆಗೆ ಗೆಳೆಯರು ಉಡುಗೊರೆಯಾಗಿ ಕೊಡುತ್ತಿದ್ದ ಮದ್ಯದ ಬಾಟ್ಲಿಗಳನ್ನು ಮಾಷ್ಟ್ರು ಬೆಣ್ಣೆಮಾತುಗಳನ್ನು ಬಳಸಿ ಗಿಟ್ಟಿಸಿಕೊಳ್ಳುತ್ತಿದ್ದುದು ಕುಞ್ಞಾತ್ತುವಿನ ಸಿಟ್ಟಿಗೆ ಕಾರಣ. ಆದ್ದರಿಂದಲೇ ಇರಬೇಕು ಆ ಮುದುಕ ನನ್ನಲ್ಲಿ ಹೇಳಿದ್ದು: 'ಈ ಲಂಬೋದರ ಮಾಷ್ಟ್ರನ್ನು ಮನೆಗೆ ಕಳಿಸಿ ಬೇರೆ ಯಾವುದಾದರೂ ಟೀಚರನ್ನು ಕಲಿಸ್ಲಿಕ್ಕೆ ಮಾಡ್ಬಾರ್ದಾ? ವಿದ್ಯೆ ಇದ್ದು ಎಂತ ಫಲ, ಉಂಡ ಅನ್ನದ ಋಣವಿಲ್ಲದ ಜನಗಳು. ಸಂಬಳ ಕೊಡುವ ಯಜಮಾನ್ರ ಮಗನತ್ರ ಗಂಟ್ಲೊಡೆಯುವ ಮೋಸಗಾರ! ಮಕ್ಕಳಿಗೆ ಗಂಟ್ಲೊಡೀಲಿಕ್ಕೆ ಅಲ್ವಲ್ಲಾ ತಿಂಗಳು ತಿಂಗಳು ನಲ್ವತ್ತು ರೂಪಾಯಿ ಲೆಕ್ಕ ಮಾಡಿ ಕೊಡುವುದು.'

ಕುಞಾತ್ತು ತನ್ನ ಅಂಗೈಯಿಂದ ಹುಡಿ ತೆಗೆದು ಮೂಗಿಗೇರಿಸಿ ಕೊಳೆಯಿಂದ ಕೂಡಿದ ಕಣ್ಣಿನಿಂದ ನನ್ನ ಕಡೆ ನೋಡಿದ:

'ನಂಗೆ ಕಪ್ಪು ಕೋಟು ಮೆಟ್ಟೊ ಇಲ್ಬಿರ್ಬಹುದು.'

ಕುಞಾತ್ತು ಒಣಗಿದ ಸ್ವರದಲ್ಲಿ ಮುಂದುವರಿಸಿದ: 'ಆದ್ರೆ ನಂಗೆ ಉಂಡ ಅನ್ನದ ನೆಂಪುಂಟು. ಈ ಕುಟುಂಬದ ಬಗ್ಗೆ ಹೆಮ್ಮೆಯುಂಟು. ಇಲ್ಲಿರೋರಿಗಾಗಿ ನನ್ನ ಜೀವ ಕೊಡ್ಬೇಕಾ.... ಕೊಡ್ತೇನೆ. ಎಲ್ಲಿಂದಲೋ ಬಂದು ಸೇರ್ಕೊಂಡೋರನ್ನೆಲ್ಲಾ ಸತ್ಕರಿಸಿ ಮಾಷೂಂತ ಮಾಡಿ ಕೂರಿಸ್ದಾಗ್ಲೇ ತನಗೂ ಯಜಮಾನರಷ್ಟೇ ತಾಕತ್ತು ಉಂಟೂಂತ ಅವರಿಗೆ ತೋರ್ಲಿಕ್ಕೆ ಶುರುವಾಯ್ತು. ಅವನವನನ್ನು ಅವನವನ ಸ್ಥಾನದಲ್ಲೇ ಇಡ್ಬೇಕು. ತಾನು ಕೂತ್ಕೊಳ್ಬೇಕಾದ ಜಾಗದಲ್ಲಿ ಕೂತ್ಕೊಳ್ದೇ ಇದ್ರೆ ಅಲ್ಲಿ ನಾಯಿ ಕೂತ್ಕೊಳ್ತದೆ.... ಅದು ಗೊತ್ತುಂಟೋ ಮಗೂ ?'

'ಇಲ್ಲ' ನಾನು ತಲೆಯಾಡಿಸುತ್ತಾ ಹೇಳಿದೆ.

'ಇಲ್ಲಿ ಎಂತಾಯ್ತೀಗ ?' ಕೆಲಸದವಳು ಕೇಳಿದಳು: 'ಲಂಬೋದ್ರ ಮಾಷು ನಿಮ್ಮನ್ನು ಬೈಯ್ದದ್ಯಾಕೆ ? ನೀವೇನು ಮಾಡಿದ್ರಿ ?'

'ನಾನೇನು ಮಾಡ್ಲಿಲ್ಲ' ನಾನು ಹೇಳಿದೆ. ಕೆಲಸದಾಕೆ ಕಲ್ಲೂ ಪ್ರೀತಿ ಪೂರ್ವಕ ನನ್ನ ಗುಂಗುರು ಕೂದಲನ್ನು ಎಳೆದು ಕಟ್ಟಿದಳು.

'ನಾನೇನು ಮಾಡ್ಲಿಲ್ಲ. ಆದರೆ ಎಲ್ರಿಗೂ ನನ್ನ ಮೇಲೆ ಸಿಟ್ಟು ಮಾಡ್ಲಿಕ್ಕೆ ತುಂಬಾ ಇಷ್ಟ' ನಾನು ಹೇಳಿದೆ.

'ನಡುವಿನ ಮಕ್ಕಳಿಗೆ ಬೈಗಳು ಕೇಳ್ಲಿಕ್ಕೇ ಯೋಗ ಇರೋದು. ದೊಡ್ಡೋನನ್ನು ಬೈಯೋದಿಲ್ಲ. ಮೊದಲಿಗೆ ಹೆತ್ತದ್ದಲ್ವಾ ? ಕೆಳಗಿರೋರನ್ನು ಬೈಲಿಕ್ಕೆ ಮನಸು ಬರ್ಲಿಕ್ಕಿಲ್ಲ. ನಡೂನಲ್ಲಿ ಹೆತ್ತ ಮಕ್ಕಳಿಗೆ ಯಾವಾಗ್ಲೂ ಬೈಗಳು ಕೇಳುವುದು ಯೋಗ. ನನ್ನ ಸ್ಥಿತಿಯೂ ಅದೇಯ. ನನಗಿಂತಾ ದೊಡ್ಡೋರು ಇಬ್ಬರು ಅಕ್ಕಂದಿರು, ನನಗಿಂತ ಕೆಳಗೆಯೂ ಇಬ್ಬರು, ಆಗ ನಾನು ಯಾರಿಗೂ ಬೇಡ್ದೋನಾದೆ. ತಪ್ಪು ಯಾರು ಮಾಡಿದ್ರೂ ನಾನೇ ಬೈಗಳು ಕೇಳ್ಬೇಕು. ನಾ ಎಷ್ಟು ಕಣ್ಣೀರುಗರೆದಿದ್ದೇನೆ. ನನ್ನ ಪುನ್ನೊಸ್ಥಾನದ ತಾಯೇ, ಮುಂದಿನ ಜನ್ಮದಲ್ಲಿ ನನ್ನನ್ನು ಇರೋವ್ರಲ್ಲಿ ದೊಡ್ಡ ಮಗುವಾಗಿ ಹುಟ್ಟಿಸ್ಬೇಕು. ನಂಗೆ ಬೇರೇನೂ ಬೇಡ' ಕಲ್ಲೂ ಆಕಾಶ ನೋಡಿ ಎರಡೂ ಕೈಗಳನ್ನೆತ್ತಿಕೊಂಡು ಹೇಳಿದಳು. ಅವಳ ಕಣ್ಣುಗಳು ಕಲುಷಿತಗೊಂಡಿದ್ದವು. ಅವಳ ದುಃಖದಲ್ಲಿ ನಾನೂ ಕಣ್ಣೀರು ಸುರಿಸುತ್ತಾ ಭಾಗಿಯಾದೆ.

'ನೀವು ಮಗುವನ್ನು ಅಳೋ ಹಾಗೆ ಮಾಡ್ಬೇಡಿ ಕಲ್ಲೂಮ್ಮ. ಅದಕ್ಕೆ ಕಣ್ಣೀರು ಕಾಣ್ಲಿಕ್ಕೆ ಆಗೋದಿಲ್ಲ. ನಿಮ್ಮ ಈ ಅಳು ನೋಡಿ ಅದೂ ದುಃಖಿಸ್ಲಿಕ್ಕೆ ಸುರುಮಾಡ್ತು.' ಕುಞಾತ್ತು ಬೇಸರದಿಂದಲೇ ಹೇಳಿದ.

'ನಂಗೆ ನನ್ನ ದುಃಖ ನೆಂಪಿಗೆ ಬಂತು. ಆಗಾಗ ನಂಗೆ ಅದೆಲ್ಲ ನೆಂಪಾಗ್ತದೆ.... ನಾಯೇನು ಮಾಡ್ಲಿ ?' ಕಲ್ಲೂ ಕೇಳಿದಳು.

'ನಿಂಗೆ ಅಳೋದಕ್ಕೆ ಕಾರಣವೇ ಬೇಡ ಅಂತ ನಂಗೆ ತೋರ್ತದೆ. ನಿಮ್ಮಾಗೆ ಎಲ್ಲಾ ಸುಖವನ್ನೂ ಅನುಭವಿಸುವವರು ಯಾರಿದ್ದಾರೆ, ಕಲ್ಲೂಮ್ಮೇ ? ಹೊತ್ತೊತ್ತಿಗೆ ಅನ್ನ, ಪದಾರ್ಥ, ಮೀನು, ಮಾಂಸ, ಫಲಾರ, ಕಾಫಿ, ಚಾಯ, ಹಾಲು, ಮಜ್ಜಿಗೆ ಎಲ್ಲಾ....

ತಲೆಗೆ ಹಚ್ಚಿಸ್ನಾನ ಮಾಡೋದಕ್ಕೆ ಎಣ್ಣೆ, ಮೈಗೆ ಹಚ್ಚಿಕೊಳ್ಳಿಕ್ಕೆ ತೆಂಗಿನೆಣ್ಣೆ, ಶರೀರ ಒಳ್ಳೇದು ಮಾಡ್ಲಿಕ್ಕೆ ಬೇಕಾಗುವ ಟಾನೀಕನ್ನು ಬಾಲಮಣ್ಣೇಮ ತಕ್ಕೊಡ್ತಾರೆ. ಉಡ್ಲಿಕ್ಕಾದ್ರೆ ಬೇಕಾದಷ್ಟು ಮುಂಡು, ರವಿಕೆಗೆ ಬಟ್ಟೇನೂ ತಕ್ಕೊಡ್ತಾರೆ. ಕುತ್ತೀಗೇಲಿ, ಕಿವೀಲಿ ಚಿನ್ನ, ಸ್ವಲ್ಪೇನಲ್ಲ. ಒಂದೊಂದು ಪವನಿಂದು ಕುಡ್ಕ. ಕುತ್ತಿಗೆಯ ಮಾಲೆಯೋ ಎರಡು ಪವನಿನ ಗುಳಿ ಚೈನು, ಕಾಲಿಗೆ ಬೆಳ್ಳಿಯ ಗೆಜ್ಜೆ, ನಿಮ್ಗೆ ದುಃಖ ಆಗ್ತದೆ ಎಂದು ಹೇಳಿದ್ರೆ ಜನ ನಗಾಡ್ತ್ಯಾಳು ಕಲ್ಲೂಮ್ಮೆ. ಇನ್ನು ಯಾರೂ ಕೇಳ್ಬಿದ್ರೂ ದೇವ್ರು ಕೇಳ್ತಾರಲ್ಲಾ', ಕುಞಾತ್ತು ಹೇಳಿ ಮುಗಿಸಿ ನನ್ನನ್ನು ನೋಡಿ ಕಣ್ಣು ಮಿಟುಕಿಸಿ ನಕ್ಕ. 'ಕಲ್ಲೂ ಹೇಳಿದ್ದೇ ಸರಿ' ನಾನು ಹೇಳಿದೆ: 'ನಡೂವಿನ ಮಕ್ಕಳೇ ಯಾರಿಗೂ ಇಷ್ಟು ಆಗದ್ದು. ನನ್ನನ್ನು ತಂದೆಗೂ ತಾಯಿಗೂ ಇಷ್ಟ ಇಲ್ಲದ್ದು ಇದಕ್ಕೇ ಇರಬೇಕು.'

'ನಿಮ್ಮನ್ನು ತಂದೆ ತಾಯಿಯರಿಗೆ ತುಂಬಾ ಇಷ್ಟ. ಆ ಇಷ್ಟವನ್ನು ತೋರಿಸ್ಲಿಕ್ಕೆ ತಂದೆ-ತಾಯಿಯರಿಗೆ ಆಗೋದಿಲ್ಲ. ಅದು ಅವರವರ ಸೊಬಾವ ಅಲ್ವೇ?' ಕುಞಾತ್ತು ಕೇಳಿದ.

'ನೀವು ನಿಮ್ಮಕ್ಕತ್ರ ಪ್ರೀತಿ ತೋರ್ಸೋದಿಲ್ವೆ?'

ನಾನು ಕೇಳಿದೆ. 'ನಂಗೆ ಯಾರತ್ರವೂ ಪ್ರೀತಿ ತೋರಿಸ್ಲಿಕ್ಕೂ ಮಂಗನಾಗೆ ಹಲ್ಲು ಗಿಂಜಲಿಕ್ಕೂ ಸಮಯ ಎಲ್ಲುಂಟು ಮಗೂ. ಎರಡು ವರ್ಷದಲ್ಲಿ ಒಮ್ಮೆ ಮಾತ್ರ ರಜೆ ತೆಗೆದು ಊರಿಗೆ ಪೋಗೋದು. ಸರಿಯೇ.... ಹೋಗುವಾಗ ಅವುಗಳಿಗೆಲ್ಲ ಅಂಗಿಯ ಫ್ರಾಕಿನ ಬಟ್ಟೆ ಕೊಂಡೋಗ್ತೇನೆ. ಅವುಗಳತ್ರ ಕೂತು ಮಾತಾಡ್ಲಿಕ್ಕೆ ನಂಗೆ ಸಮಯ ಸಿಕ್ಕೋದಿಲ್ಲ. ನಂಗೆ ಕೊಟ್ಟಪ್ಪಡಿಲಿರೋ ನೆಂಟ್ರನ್ನೆಲ್ಲ ನೋಡ್ಬೇಡ್ವೆ? ಬಂಧುಗಳನ್ನು ಸೊಂತದೋರನ್ನೂ ಕಂಡು ಮುಗೀಬೇಕಿದ್ರೆ ನನ್ನ ರಜೆಯೂ ಮುಗೀತದೆ. ಮತ್ತೆಯೂ ಕಲ್ಕತ್ತೆಗೆ ಹೊರಟಾಯ್ತು. ಯಾಕೆ ಹೇಳೋದು ಮಗೂ, ಮಕ್ಕಳ ಮುಖ ನೋಡ್ಲಿಕ್ಕಿರೋ ಆಸೆ ಮುಗಿಬೇಕಾದ್ರೆ ನಾ ವಾಪಾಸು ಬರ್ಲಿಕ್ಕಾಯ್ತು. ಅರುವತ್ತು ರೂಪಾಯಿ ಸಂಬಳಕ್ಕಾಗಿ ಮನೆ, ಕುಟುಂಬ ಎಲ್ಲ ಬಿಟ್ಟು ಈ ಬಂಗಾಳಿಗಳ ಊರಿನಲ್ಲಿ ಎಲ್ಲವನ್ನೂ ಸಹಿಸಿ ಕೂತ್‌ಕೊಂಡಿದ್ದೇನೆ.'

'ನಿಮ್ಗೆ ಭಾಗ್ಯವುಂಟು. ಜಿಪುಣುತನ ಮಾಡಿ ಒಂದಷ್ಟು ದುಡ್ಡು ಸಂಪಾದಿಸಿದ್ದೀರಲ್ಲಾ. ನನ್ನ ಕೈಯಲ್ಲಿ ಎಂತವೂ ಇಲ್ಲ.' ಕಲ್ಲೂ ಹೇಳಿದಳು.

'ಜೀಪುಣತನ ಮಾಡಿದ್ದಕ್ಕೇ ನಾನು ನಾಲ್ಕು ಕಾಸು ಪೋಸ್ಟಾಫೀಸಿಗೆ ಕೊಂಡೋಗಿ ಕಟ್ಟೋದು. ಹಾಗೆ ಮಾಡದಿದ್ರೆ ಕೊಟ್ಟಪ್ಪಡಿಗೆ ದುಡ್ಡು ಕಳಿಸ್ಲಿಕ್ಕೆ ಕೂಡ್ತಿತ್ತಾ? ನನ್ನ ದುಡ್ಡಲ್ಲೇ ಕೊಟ್ಟಪ್ಪಡಿಯ ಒಂದು ಕುಟುಂಬದ ಕರ್ಚು ಕಳೀತದೆ. ನಾಯಿಲ್ಲಿ ದುಡ್ಡೆಲ್ಲಾ ಕರ್ಚು ಮಾಡಿ ಗಮ್ಮತ್ತು ಮಾಡಿದ್ರೆ ಆರು ಜೀವ ಅಲ್ಲಿ ಹೊಟ್ಟೆಗಿಲ್ಲದೆ ಸತ್ತೀತು. ಗಮ್ಮತ್ ಮಾಡ್ಲಿಕ್ಕೆ ಗೊತ್ತಿಲ್ದೆ ಅಲ್ಲ ಕಲ್ಲೂವಮ್ಮೆ. ನನ್ನ ಮನಸ್ಸು ಅಷ್ಟು ತಣಿಣ ಇಲ್ಲದ್ದಕ್ಕೇ ನಾನು ಗಮ್ಮತ್ತು ಮಾಡದ್ದು' ಕುಞಾತ್ತು ಹೇಳಿದನು.

'ಮಾಪ ಹಾಗೆ ನಿಮ್ಗೂ ಕುಡೀಬೇಕೂಂತ ಆಸೆ ಆಗ್ತಿರ್ಬೋದು' ಕಲ್ಲು ಹೇಳಿದಳು.

'ನಂಗೂ ಕಳ್ಳು ಕುಡಿದ್ರೆ ಜೀರ್ಣ ಆಗ್ತದೆ ಕಲ್ಲುವಮ್ಮೆ. ಆ ಕರಿಭೂತ ಯಜಮಾನ್ರ ಹಿಂದೇನೇ ಸುತ್ತುಬಂದು ಅಪ್ಪಿಗೆ ಸಿಕ್ಕಿದ ವಿಸ್ಕಿಕುಪ್ಪಿಯನ್ನು

ಲಪಟಾಯಿಸೋದು ಕಾಣುವಾಗ ನಂಗೆ ಎದೆ ಒಡ್ದ ಹಾಗೆ ಆಗ್ತದೆ. ನಾಯೆಂತ ಮಾಡೋದು ? ಆ ಜನದ ಹಾಗೆ ಇಂಗ್ಲೀಷ್‌ನಲ್ಲೂ, ಫ್ರೆಂಚಿನಲ್ಲೂ ಮುಖಸ್ತುತಿ ಮಾಡ್ಲಿಕ್ಕೆ ನಂಗೆ ಗೊತ್ತಿಲ್ಲಲ್ಲಾ.'

'ಆತನಿಗೆ ಚೂಡು' ಕಲ್ಲು ಹೇಳಿದಳು: 'ಗುಡುಗು ಗುಡುಗೋ ಹಾಗಲ್ವಾ. ಆಜನ ಸುಂದರ ಮಗೂನತ್ರ ಗರ್ಜಿಸೋದು ? ಆ ಮಗು ಆದ್ದಕ್ಕೆ ಅದನ್ನೆಲ್ಲಾ ಸಯಿಸ್ತದೆ. ಸುಂದರ ಮಗು ಇರೋದ್ರಲ್ಲಿ ಪಾಪದ್ದು. ಬಾಯಲ್ಲಿ ಬೆರಳಿಟ್ರೆ ಕಚ್ಚಿಕ್ಕಿಲ್ಲ. ಒಂದು ಸಾಧುಪ್ರಾಣಿ.'

ಅಂದು ರಾತ್ರಿ ನಿದ್ರಿಸುವುದಕ್ಕೆ ಮೊದಲು ಲಂಬೋದರ ಮಾಷ್ಟ್ರ ಬಗ್ಗೆ ಆಕ್ಷೇಪಗಳನ್ನೆತ್ತುತ್ತಾ ನನ್ನ ಅಮ್ಮನೊಂದಿಗೆ ಮಾತನಾಡಿದೆ. ಅವರನ್ನು ಮನೆಗೆ ಕಳುಹಿಸಿ ಸಂದರನಿಗೆ ಕಲಿಸುವುದಕ್ಕೆಂದು ಓರ್ವ ಟೀಚರನ್ನು ಇರಿಸಿಕೊಳ್ಳುವುದು ಉತ್ತಮವೆಂದು ನಾನು ಹೇಳಿದೆ.

'ನಿಂಗ್ಯಾಕೆ ಮಗು ಆ ಜನಗತ್ರ ಇಷ್ಟು ಸಿಟ್ಟು' ಅಮ್ಮ ಕೇಳಿದಳು.

'ಲಂಬೋದರ ಮಾಷಿಗೆ ನನ್ನತ್ರ ಇಷ್ಟ ಇಲ್ಲ' ನಾನು ಹೇಳಿದೆ.

'ಆ ಜನ ಬರಿ ಪಾಪವಾ. ಕೈಯಲ್ಲಿ ಕಾಸಿಲ್ಲದ ಜನ. ಆ ಜನವನ್ನು ತಂದೆ ಮನೆಗೆ ಕಳಿಸಿದ್ರೆ, ಆ ಜನವೂ ಹೆಂಡತಿಯೂ ಉಪವಾಸ ಮಲಗ್ಬೇಕಾದೀತು' ಅಮ್ಮ ಹೇಳಿದಳು.

'ಹಾಗಾದ್ರೆ ವಾಪಾಸು ಕಳಿಸ್ಬೇಡಿ. ನಾ ಹೋಗ್ತೇನೆ. ನಾ ನಾಲಪ್ಪಾಟ್ಟಿಗೆ ಹೋಗ್ತೇನೆ' ನಾನು ಹೇಳಿದೆ. ಅಮ್ಮ ಗಟ್ಟಿಯಾಗಿ ನಕ್ಕು ಬಿಟ್ಟಳು. ಅವರು ತನ್ನ ತೀರ್ಮಾನ ಕೇಳಿ, ದುಃಖಿಸಬಹುದೆಂದು ನಾನು ಭಾವಿಸಿದ್ದೆ.

ಆಮೇಲೆ ತಂದೆ ಮಾಷ್ಟ್ರ ಹತ್ತಿರ ಹೇಳಿದರು, ನನ್ನನ್ನು ಬೈದು ನೋಯಿಸಬಾರದೆಂದು.

'ಕಮ್ಲೆಯನ್ನು ನೋಯಿಸ್ಲಿಕ್ಕೆ ನಾ ಯಾವತ್ತೂ ಇಷ್ಟಪಡೋದಿಲ್ಲ' ಮಾಷ್ಟ್ರು ಹೇಳಿದರು. ಶ್ಯಾಮ್‌ಸುಂದರನಿಗೆ ಕಲಿಸುವಾಗ ಕಮ್ಲು ಎಡೆಗಡೆಗೆ ಕೋಣೆಗೆ ಬಂದು ಪ್ರಶ್ನೆಗಳನ್ನು ಕೇಳಿ ನಂಗೆ ತೊಂದರೆ ಕೊಡ್ತಾಳೆ. ಆ ಪ್ರಶ್ನೆಗಳಾದರೋ, ಬರೀ ಮೂರ್ಖ ಪ್ರಶ್ನೆಗಳು.'

'ನಿಂಗೆ ಪ್ರಶ್ನೆಗಳನ್ನು ಕೇಳ್ಲಿಕ್ಕೆ ಆಸೆಯಿದ್ರೆ, ನೀ ಅಪ್ಪುವಿನತ್ರ ಕೇಳು' ತಂದೆ ನನಗೆ ಹೇಳಿದರು.

ಅಪ್ಪು ಚಿಕ್ಕಪ್ಪ ನನ್ನ ತಂದೆಯ ತಮ್ಮ. ಅಂದು ಮನೆಯ ಕೆಳಗಿನ ನೆಲೆಯಲ್ಲಿ ತೆಂಕುಮೂಡು ಕೋಣೆಯಲ್ಲಿ ವಾಸಿಸುತ್ತಿದ್ದು ಅಮೇರಿಕನ್ ಕಂಪೆನಿಯಾದ ಜನರಲ್ ಮೋಟರ್ಸ್‌ನ ಇಂಡಿಯನ್ ಶಾಖೆಯಲ್ಲಿ ಅವರು ಉದ್ಯೋಗಿಯಾಗಿದ್ದರು.

'ಲಂಬೋದರ ಮಾಷ್ಟ್ರಾ ಈ ಭೂಮಿಯ ಅಕ್ಷದಂಡ ?' ನಾನು ಅಪ್ಪು ಚಿಕ್ಕಪ್ಪನನ್ನು ಕೇಳಿದೆ.

'ಇದು ನಿನ್ನತ್ರ ಯಾರು ಹೇಳಿದ್ದಮ್ಮಿ?' ಅಪ್ಪು ಚಿಕ್ಕಪ್ಪ ವೀಳ್ಯದೆಲೆಗೆ ಸುಣ್ಣ ಹಚ್ಚುತ್ತಾ ಕೇಳಿದರು.

'ಮಾಷ್ಟ್ರೇ ಹೇಳಿದ್ದು' ನಾನು ಹೇಳಿದೆ.

ಅಪ್ಪು ಚಿಕ್ಕಪ್ಪ ಮೂರು ಸಲ ಗಟ್ಟಿಯಾಗಿ ಸೀನಿದರು. ಆಮೇಲೆ ಹೆಗಲಲ್ಲಿದ್ದ ಬೈರಾಸನ್ನು ತೆಗೆದು ತನ್ನ ಮುಖವನ್ನು ಗಟ್ಟಿಯಾಗಿ ಒರಸಿದರು.

'ಲಂಬೋದರ ಮಾಷನ್ನು ಕುದಿರವಟ್ಟಕ್ಕೆ ಸೇರಿಸುವ ಸಮಯಾಯ್ತೂಂತ ತೋರ್ತದೆ' ಅಪ್ಪು ಚಿಕ್ಕಪ್ಪ ಗಂಭೀರವಾದ ಅಭಿಪ್ರಾಯ ವ್ಯಕ್ತಪಡಿಸಿದರು.

'ಕುದಿರವಟ್ಟ ಎಲ್ಲಿದೆ ?' ಅಪ್ಪು ಚಿಕ್ಕಪ್ಪನೊಂದಿಗೆ ನಾನು ಕೇಳಿದೆ.

'ಕುದಿರವಟ್ಟ ಕಲ್ಲಿಕೋಟೆಯ ಹತ್ತಿರ.'

'ಅಲ್ಲಿ ಎಂತ ವಿಶೇಷ ?' ನಾನು ಕೇಳಿದೆ.

'ಅಲ್ಲಿ ಮಾಷ ಗಳೆಯರಿದ್ದಾರೆ.'

'ಆಂಗ್ಲೋ ಇಂಡ್ಯನರೋ ?'

ಆಂಗ್ಲೋಇಂಡ್ಯನರು, ನಾಯರ್‌ನೋರೂ, ಬಿಲ್ಲವರೂ, ಕ್ರೈಸ್ತರೂ, ಮಾಪಿಳ್ಳೆಯವರೂ, ಎಲ್ಲಾ ಕುದಿರವಟ್ಟದಲ್ಲಿ ವಾಸಿಸ್ತಾರೆ. ಅಲ್ಲಿ ಹಾಡು ಕುಣಿತವೂ ನಾಟಕವೂ ಸರ್ಕಸ್ಸೂ ಎಲ್ಲಾ ಇರ್ತದೆ. ಅಲ್ಲಿ ಎಲ್ಲಾ ಸೇರಿ ಬಾರೀ ಗಮ್ಮತ್ತು.'

'ನಂಗೆ ಕುದಿರವಟ್ಟಕ್ಕೆ ಹೋಗ್ಬೇಕು' ನಾನು ಹೇಳಿದೆ.

'ನೀ ಇನ್ನೂ ಸ್ವಲ್ಪ ದೊಡ್ಡವಳಾಗ್ಲಿ ಅಮ್ಮಿ, ಆಮೇಲೆ ಕಂಡಿತವಾಗಿಯೂ ಕುದಿರವಟ್ಟಕ್ಕೆ ಕರೆದುಕೊಂಡು ಹೋಗುವ, ಆಯ್ತಲ್ಲ.'

ನಾನು ತಲೆದೂಗಿದೆ. ನಗೆಯನ್ನು ತಡೆಯಲಿಕ್ಕೆ ಪ್ರಯತ್ನಿಸಿ ಕುಞಾತ್ತು ಕೆಮ್ಮತೊಡಗಿದನು.

ಕಲ್ಕತ್ತೆಯಲ್ಲಿದ್ದ ದಿವಸಗಳಲ್ಲಿ ನನ್ನ ಕವಯತ್ರಿಯಾದ ಅಮ್ಮ ಒಮ್ಮೆಯೂ ಮನೆಕೆಲಸವನ್ನು ಕೈಗೆತ್ತಿಕೊಂಡಿರಲಿಲ್ಲ. ಅಮ್ಮನನ್ನು ತಂದೆ ಮಗೂಂತ ಕರೆಯುತ್ತಿದ್ದರು. ಅಮ್ಮನನ್ನು ಒಂದು ಮಗುವಾಗಿಯೇ ಅವರು ಗಣಿಸಿದ್ದರು ಕೂಡ. ಅಡುಗೆ ಮನೆಗೆ ಹೋಗುವುದಕ್ಕೂ ಗೃಹಾಡಳಿತ ಮಾಡುವುದಕ್ಕೂ ಅಮ್ಮನಿಗೆ ಸ್ವಾತಂತ್ರ್ಯವಿರಲಿಲ್ಲ. ಅಡುಗೆ ಮನೆಯಲ್ಲಿ ಬೆಂಕಿಯದ್ದಾಗಲೀ ಕತ್ತಿಯದ್ದಾಗಲೀ ಮೆಣಸು ಹುಡಿಯದ್ದಾಗಲೀ ಬಿಸಿ ನೀರಿನದ್ದಾಗಲೀ ರೂಪದಲ್ಲಿ ಅಪಘಾತಗಳು ಬಂದೊದಗುತ್ತವೆಯೆಂದು ತಂದೆಯವರು ನಂಬಿದ್ದರು. ಆದ್ದರಿಂದ ಗೃಹಾಡಳಿತವನ್ನು ಕಾರುಭಾರಿಯಾದ ನಾರಾಯಣನ್ ನಾಯರಿಗೆ ತಂದೆಯವರು ವಹಿಸಿಕೊಟ್ಟಿದ್ದರು. ನಾರಾಯಣನ್ ನಾಯರೊಂದಿಗೆ ನಮ್ಮ ಕುಟುಂಬಕ್ಕಿದ್ದ ಸಂಬಂಧವು ಸುದೀರ್ಘವೂ, ಸುದೃಢವೂ ಆದುದಾಗಿತ್ತು. ಅವರನ್ನು ಮಕ್ಕಳೆಲ್ಲರೂ ಗೌರವಪೂರ್ವಕವಾಗಿ ನಾಣಣ್ಣ ಎಂದು ಕರೆಯುತ್ತಿದ್ದರು. ನಮಗೆ ಅವರ ಕೋಪದ ಬಗ್ಗೆ ಭಯವಿತ್ತು.

ನಾಣಣ್ಣ ನಿತ್ಯವೂ ಬಿಳಿ ಉಡುಪನ್ನು ಧರಿಸುತ್ತಿದ್ದರು. ಅವರ ಪ್ರತಿನಿತ್ಯದ ಮುಖ್ಯ ಕೆಲಸವೆಂದರೆ ಪತ್ರಿಕಾ ಪಾರಾಯಣ ಮಾಡುವುದು. ಎಂದರೆ ಮಾತೃಭೂಮಿ ದಿನಪತ್ರಿಕೆಯನ್ನು ಓದುವುದು. ಹನ್ನೊಂದು ಗಂಟೆಯ ಹೊತ್ತಿಗೆ ನಾರಾಯಣನ್ ನಾಯರ್ ರಸ್ತೆಗೆ ಮುಖ ಮಾಡಿಕೊಂಡಿರುವ ದೊಡ್ಡ ಬಾಗಿಲನ್ನು ತೆರೆದು ಒಂದು ಮೆಟ್ಟಲಿನ ಮೇಲೆ ಹಳೆಯದೊಂದು ಟರ್ಕಿ ಟವಲನ್ನು ಬಿಡಿಸಿ ಪತ್ರಿಕಾ ಪಾರಾಯಣಕ್ಕೆ

ಸಿದ್ಧರಾಗುತ್ತಾರೆ. ಓದುವುದರೆಡೆಗೆಡಗೆ ಗೇಟಿಗೂ ಮನೆಗೂ ನಡುವೆ ಇರುವ ಆಟದ ಬಯಲಲ್ಲಿ ಹೂ ಚಟ್ಟಿಗಳೆಡೆಯಲ್ಲಿ ಆಡುವ ನಮ್ಮ ಕಡೆಗೂ ರಸ್ತೆಯಲ್ಲಿ ಹೋಗುವ ವಾಹನಗಳ ಕಡೆಗೂ ನೋಡುವರು. ಪರಿಚಿತ ಕಾರುಗಳು ದಾಟುವಾಗ ಅವುಗಳ ಯಜಮಾನರು ಯಾರೆಂಬುದನ್ನು ನಾರಾಯಣನ್ ನಾಯರ್ ನಮ್ಮೊಂದಿಗೆ ಕೂಗಿ ಹೇಳುತ್ತಿದ್ದರು.

ದರ್ಬಂಗಾ ಮಹಾರಾಜನ ರಾಲ್ಸ್‌ರಾಯ್ಸ್ ರಸ್ತೆಯಲ್ಲಿ ಹೋಗುತ್ತಿದ್ದಾಗ ನಾರಾಯಣನ್ ನಾಯರ್ ಕೂಗಿ ಹೇಳಿದರು: 'ದರ್ಬಂಗಾ ಮಹಾರಾಜನ ಗಾಡಿ ಆಗೋ ಹೋಗ್ತಾ ಉಂಟು.'

ಹಿಂದಿನ ಸೀಟಿನಲ್ಲಿ ಒಬ್ಬರು ಕಣ್ಣು ಮುಚ್ಚಿ ಆತು ಮಲಗಿದ್ದಾರೆಂದು ನಾನು ಹೇಳಿದೆ.

'ಸರಿಯಾಗಿ ಕಾಣ್ಲಿಲ್ಲ. ರಾಜನ ತಲೆಯಲ್ಲಿ ಕಿರೀಟ ಉಂಟಾ?' ನಾನು ಕೇಳಿದೆ.

ನಾರಾಯಣನ್ ನಾಯರ್ ಒಂದು ತಾತ್ಸಾರದ ನಗೆ ನಕ್ಕರು: 'ಕಿರೀಟವಿಡೋ ರಾಜಾಂದ್ರೆ ಈಗ ಬ್ರಿಟಿಷ್ ರಾಜನಾಗಿರೋ ಆರನೇ ಜಾರ್ಜ್ ಮಾತ್ರ. ನಮ್ಮ ರಾಜರಿಗೆಲ್ಲ ಎಂತ ಕಿರೀಟ? ಸೋತು ಟೊಪ್ಪಿ ಹಾಕಿದೋರಲ್ವ ನಮ್ಮ ರಾಜರೆಲ್ಲ?'

'ಕಿರೀಟ ಇಲ್ದಿದ್ರೆ ನಿಮ್ಗೆ ಹೇಗ್ಗೊತ್ತಾಯ್ತು ನಾಣಣ್ಣ ಆ ಕಾರಲ್ಲೊಬ್ಬ ರಾಜ ಇದ್ದಾಂತ?'

'ದರ್ಬಾಂಗಾ ಮಹಾರಾಜನೇ ನಿಮ್ಮ ತಂದೆಯೋರ ಕಂಪೆನಿಯ ಅತಿ ಹೆಚ್ಚು ಪಾಲುಳ್ಳ ಡಯರೆಕ್ಟರ್. ನಾಯೆಷ್ಟೋ ಸಲ ಅವರನ್ನು ನೋಡಿದ್ದೇನೆ. ವಾಲ್‌ಫೋರ್ಡ್ಸ್‌ಗೆ ಹೋದಾಗ ಆ ಕಾರನ್ನು ನಾ ಎಷ್ಟೋ ಸಲ ಕಂಡಿದ್ದೇನೆ. ವಾಲ್‌ಫೋರ್ಡ್ಸ್‌ನಿಂದ್ಲೇ ತಕ್ಕೊಂಡ ಕಾರದು. ನಿಮ್ಮ ತಂದೆಯ ಆಫೀಸಿಗೆ ಹೋಗಿ ನೋಡಿದ್ರೆ ಇಂಥದ್ದೇ ಗಾಡಿಗಳು ಕಾಣ್ತವೆ. ರಾಜರುಗಳೆಲ್ಲ ಇದನ್ನೇ ಕೊಳ್ಳೋದು. ನೋಡಿದ್ರೆ ಎಲ್ರಿಗೂ ತಕ್ಕೊಳ್ಬೇಕೂಂತ ಅನ್ನೀತು. ಅನ್ನಿದ್ರೆ ಸಾಲ್ಬಲ್ಲ? ದುಡ್ಡೂ ಬೇಡ್ವ? ಎಷ್ಟು ಕ್ರಯಾಂತ ಗೊತ್ತುಂಟ ಮಗೂ? ಒಂದೂವರೆ ಲಕ್ಷಂತೆ! ಒಂದೂವರೆ ಲಕ್ಷ!'

'ನಿಮ್ಗೆ ಒಂದೂವರೆ ಲಕ್ಷ ಸಿಕ್ಕಿದ್ರೆ ರಾಲ್ಸ್‌ರಾಯಿಸ್ ತಕ್ಕೊಳ್ತೀರಿ. ಅಲ್ವೆ?' ನಾನು ಉತ್ಸುಕಳಾಗಿ ಕೇಳಿದೆ.

'ನಂಗ ಒಂದು ಲಕ್ಷಲ್ಲ, ಪತ್ತು ಲಕ್ಷ ಸಿಕ್ಕಿದ್ರೂ ನಾ ಕಾರೇನೂ ತಕ್ಕೊಳ್ಳಿಕ್ಕಿಲ್ಲ. ನಂಗೆ ದುಡ್ಡು ಸಿಕ್ಕಿದ್ರೆ ನಾಯಿೀ ಕಲ್ಕತ್ತೇಲಿ ಒಂದು ಹೋಟೆಲ್ ಇಡ್ತೇನ. ನಮ್ಮ ಆಹಾರ ಸಿಗೋ ಹೋಟೆಲ್ ಕಲ್ಕತ್ತೇಲಿಲ್ಲ. ಮದ್ವೆಯಾಗದಿರೋ ನಾಯರ್‌ನವರಿಗೆ ಕಲ್ಕತ್ತೇಲಿ ಭಾರೀ ತೊಂದರೆ. ಬಂಗಾಳಿಗಳು ತಿನ್ನುವ ಆಹಾರವನ್ನು ತಿನ್ಲಿಕ್ಕೂ ಆಗೋದಿಲ್ಲ. ಇಂಗ್ಲೀಷ್ ಸಾಹೇಬರ ಆಹಾರ ತಿನ್ಲಿಕ್ಕಿರೋ ದುಡ್ಡೂ ಇರೋದಿಲ್ಲ ಕೈಯಲ್ಲಿ. ಹೌದು ಮಗೂ, ನಾಯರ್‌ನೋರಿಗೆ ಈ ಕಲ್ಕತ್ತ ಒಂದು ನರಕವ. ಈಚೆಗೊಂದಿಷ್ಟು ನಮ್ಮ ಪಳ್ಳಿಯತ್ತಿನ ಬಾಲನ್‌ನಾಯರ್ ಹೇಳ್ತಿದ್ದ, ಬಂಗಾಳಿಗಳು ಮೀನು ಪದಾರ್ಥಕ್ಕೂ ಸಕ್ರೆ ಹಾಕ್ತಾರೇಂತ. ಬಾಲನ್‌ನಾಯರ್ ಮಾಡೋದೇನು? ನಿಮ್ಮ ಅಪ್ಪು ಚಿಕ್ಕಪ್ಪ ಹೇಳೋ ಹಾಗೆ ಆತ್ಮ ಅದ್ರ ಗೂಡಿನಲ್ಲಿ ಇರ್ಲಿಕ್ಕಾಗ್ಯಾದ್ರೂ

ಹೊಟ್ಟೆ ತುಂಬಿಸ್ಬೇಡ್ವೆ? ಸಾಯ್ಲಿಕ್ಕಾಗೋದಿಲ್ವಲ್ಲ? ಆದಿತ್ಯವಾರ ಮಧ್ಯಾಹ್ನ ಆಗ್ಬೇಕಿದ್ರೆ ಒಬ್ರೊಬ್ರೇ ಹಲ್ಲು ಗಿಂಜುತ್ತಾ ಇಲ್ಲಿಗೆ ಬರೋದ್ಯಾಕೇಂತ ನಿಮ್ಗೊತ್ತುಂಟಾ ಮಗೂ?'

ನಾನು ತಲೆ ಅಲುಗಿಸುತ್ತಾ ಹೇಳಿದೆ: 'ಇಲ್ಲ.'

'ಇಲ್ಲಿರೋರ ಬಗ್ಗೆ ಪ್ರೀತಿಯಿದ್ದೇನೂ ಅಲ್ಲ, ಆದಿತ್ಯವಾರಾದಿತ್ಯವಾರ ಇಲ್ಲಿಗೆ ಜನ ಬಂದು ಸೇರ್ತೋದು. ಇಲ್ಲಿಯ ಊಟದ ವೈವಿಧ್ಯ ನೋಡಿ. ಒಮ್ಮೆ ಇಲ್ಲಿ ಊಟ ಮಾಡಿದೋರು ಆ ಊಟದ ರುಚಿಯನ್ನು ಮರೀಲಿಕ್ಕಿಲ್ಲ. ಎಲ್ಲಾ ರೀತಿಯಲ್ಲೂ ಜನಗಳಿಗೆ ಹಿಡಿಸ್ತದಲ್ಲ ಇಲ್ಲಿಯ ಊಟ. ಸೂಪುಂಟು, ಕಟ್ಲೇಟುಂಟು, ಚಪಾತಿಯುಂಟು, ಅನ್ನವುಂಟು, ಪುಳಿಯುಂಟು, ಕೊದ್ದೆಲುಂಟು, ನಿಮ್ಮ ಅಮ್ಮಸ್ಸಿಗಾಗಿ ಮಾಡುವ ಸಾಂಬಾರುಂಟು, ಹಪ್ಪಳವುಂಟು, ಉಪ್ಪಿನ ಕಾಯುಂಟು, ಸಲಾಡುಂಟು, ಪುಡ್ಡಿಂಗುಂಟು, ಬಾಳೆಹಣ್ಣು, ಆರೆಂಜೂ, ದ್ರಾಕ್ಷೆಯೂ ಉಂಟು. ಬೇರಿನ್ನೇನು ಬೇಕು? ಇಂಥ ಊಟ ಯಾವ ಹೋಟೆಲ್ನಲ್ಲಿ ಸಿಕ್ತದೆ? ಅದೇ ನಾನು ಹೇಳೋದು, ಇಲ್ಲಿಯ ಪಾರ್ಕ್‌ಸ್ಟ್ರೀಟ್‌ನಲ್ಲೋ ಎಲ್ಗಿನ್ ರಸ್ತೇಲೋ ಒಂದು ಹೋಟೆಲ್ ಇಡ್ಬೇಕು. ನಾಯರ್‌ನೋರೂ ಅದ್ಕಿಂತ ಮೇಲ್ಜಾತಿಯೋರೂ ಚೆನ್ನಾಗಿ ಊಟ ಮಾಡ್ಲಿ.'

'ಒಂದು ಹೋಟೆಲಿಡ್ಬೇಕಿದ್ರೆ ಎಷ್ಟು ದುಡ್ಡು ಬೇಕು?' ನಾನು ಕೇಳಿದೆ.

ನಾರಾಯಣನ್ ನಾಯರ್ ಕನ್ನಡಕ ತೆಗೆದು ಕಿಸೆಯಲ್ಲಿಟ್ಟರು. ಆಮೇಲೆ ಮೇಲ್ತುಟಿ ಕಚ್ಚಿ ಹಣೆಯಲ್ಲಿ ನೆರಿಗೆ ಮೂಡಿಸಿ ಏನೂ ಹೇಳದೆ ಸ್ವಲ್ಪ ಹೊತ್ತು ಕುಳಿತರು. ದಪ್ಪ ಹುಬ್ಬುಗಳಿಂದ ಕೂಡಿದ ಆ ಹಣೆ ಆಲೋಚನೆ ನಿಮಿತ್ತವಾಗಿಯೇ ಇರಬೇಕು, ಇನ್ನಷ್ಟು ಕಪ್ಪಿಟ್ಟದ್ದಾಗಿ ನನಗೆ ತೋರಿತು.

'ನಾಣಣ್ಣಾಸಿಗೆ ಹೋಟೆಲಿಡ್ಬೇಕಿದ್ರೆ ಹಣ ಎಷ್ಟು ಬೇಕಾದೀತು?' ನಾನು ಕೇಳಿದೆ.

'ಕಮ್ಮೀಂದ್ರೆ ಒಂದ್ಯೆದು ಸಾವಿರ' ಅವರು ಹೇಳಿದರು.

'ಅಷ್ಟು ಸಾಕೊ?'

'ಸಣ್ಣ ಮಟ್ಟಿನಲ್ಲಿ ಒಂದು ಹೋಟೆಲಿಡ್ಲಿಕ್ಕೆ ಅಷ್ಟು ಸಾಕೂಂತಿಟ್ಕೊಳ್ಳಿ. ನಿಮ್ಮ ತಂದೆ ಮನಸ್ಸು ಮಾಡಿದ್ರೆ ಇದೆಲ್ಲ ಒಂದು ಸಂಗ್ತಿಯೇ ಅಲ್ಲ. ಆದ್ರೆ ನಾ ಕೇಳ್ಲಿಕ್ಕಿಲ್ಲ. ಇದೆಲ್ಲ ಅವರವರಿಗೇ ಗೊತ್ತಾಗ್ಬೇಕು, ಬಾಕಿದ್ದೋರಿಗೆಲ್ಲ ಸಹಾಯ ಮಾಡ್ತಾರೆ ಅಪ್ರಿಗೆ ನನ್ನ ನೆಂಪಿಲ್ಲ. ಇತ್ತೀಚೆಗೆ ಹೆಂಗಸ್ರು ಬಂದ್ರಲ್ಲ? ಕೇರಳ ಮಹಿಳಾ ಸಮಾಜದೋರು. ಆಸೆಬುರುಕಿಯರು. ಅವರು ಕೇಳಿದಾಗ ನಿಮ್ಮ ಟೇಬಲ್‌ಟೆನಿಸ್‌ನ ದೊಡ್ಡ ಮೇಜನ್ನು ನಿಮ್ಹತ್ರ ಕೇಳದೆ ಅಪ್ರಿಗೆ ಕೊಡ್ಲಿಲ್ವಾ? ನೀವ್ಯಾಕೆ ಅದನ್ನು ನೋಡಿ ಸುಮ್ನೆ ನಿಂತದ್ದು? ನಿಮ್ಗೆ ಗಟ್ಟಿ ಅಳ್ಬೋದಿತ್ತಲ್ಲ? ಒಂದೊಂದು ಮಂಗಣ ಮಾಡೋರು ಬಂದು ಶೇಲಿ ಮಾಡಿ ಇಲ್ಲಿದ್ದ ಎಲ್ಲ ವಸ್ತುಗಳನ್ನೂ ತಕ್ಕೊಂಡು ಹೋಗ್ತಾರೆ. ನಿಮ್ಮ ಅಮ್ಮನೂ ಏನೂ ಮಾತಾಡ್ಲಿಕ್ಕಿಲ್ಲ. ನೀವೂ ಮಾತಾಡ್ಲಿಕ್ಕಿಲ್ಲ. ನಂಗದನ್ನೆಲ್ಲಾ ತಡೀಲಿಕ್ಕಿರೋ ಅಧಿಕಾರಿಲ್ಲಲ್ಲ.'

ಮಹಿಳಾ ಸಮಾಜದವರು ಗಿಟ್ಟಿಸಿಕೊಂಡ ಮೇಜಿನ ಬಗ್ಗೆ ನೆನೆದಾಗ ನನ್ನ ಕಣ್ಣುಗಳು ತಟ್ಟನೆ ತುಂಬಿ ಬಂದವು.

'ಇಲ್ಲಿ ಬರೋ ಹೆಂಗಸ್ರಿಗೆಲ್ಲ ಶೇಲೆ ಮಾಡೋದಕ್ಕೆ ಒಳ್ಳೆ ಗೊತ್ತುಂಟು. ಅದ್ಕೇ ಅಲ್ವ ಅವು ಮನೆಮನೆಗೆ ಸುತ್ತಾಡಿ ಸಿಕ್ಕಿದ್ದನ್ನೆಲ್ಲ ಒಳಗೆ ಹಾಕೋದು. ಹೆಂಗಸ್ರಾದ್ರೆ ಮಗೂ, ಸ್ವಲ್ಪ ಸಾಮರ್ಥ್ಯೆಲ್ಲ ಬೇಕು. ಅಲ್ಲ್ದೆ ನಿಮ್ಮ ಅಮ್ಮನ ಹಾಗೆ ಬರೇ ಚಪ್ಪೆಯಾದ್ರೆ ಎಂತ ಲಾಭ ? ಅವನವನ ಗಂಡ ಸಂಪಾದಿಸಿ ತರುವ ದುಡ್ಡನ್ನೆಲ್ಲ ಕೇಳಿ ತೆಗೆದಿಡೋ ತಾಕತ್ತು ಬೇಕು. ಇಲ್ದಿದ್ರೆ ಕೊನೆಗೆ ಗೊತ್ತಾದೀತು. ಅಂಥವ್ರ ಕೈಯಲ್ಲಿ ಒಂದು ವಸ್ತೂ ಇರ್ಲಿಕ್ಕಿಲ್ಲ. ದುಡ್ಡಿಲ್ದಿದ್ರೆ ಒಂದು ನಾಯಿ ಕೂಡ ತಿರುಗಿ ನೋಡ್ಲಿಕ್ಕಿಲ್ಲ.'

'ಶೇಲೆ ಮಾಡ್ಲಿಕ್ಕೆಲ್ಲ ನನ್ನ ಅಮ್ಮನಿಗೆ ಗೊತ್ತಿಲ್ವ ?'

'ನಿಮ್ಮ ಅಮ್ಮನಿಗೆ ಅದೆಲ್ಲ ಗೊತ್ತಿಲ್ಲ. ಅದೆಲ್ಲ ಈ ಜನ್ಮದಲ್ಲಿ ನಿಮ್ಮ ಅಮ್ಮನಿಗೆ ಗೊತ್ತಾಗ್ಲಿಕ್ಕಿಲ್ಲ. ಒಳ್ಳೇ ಕುಟುಂಬದಲ್ಲಿ ಹುಟ್ಟಿದ ಹೆಂಗಸ್ರಿಗೆ ಶೇಲೆ ಮಾಡ್ಲಿಕ್ಕೆಲ್ಲ ಗೊತ್ತಿರೋದಿಲ್ಲ ಮಗೂ. ನಿಮ್ಮ ಅಮ್ಮ ಒಳ್ಳೇ ಕುಟುಂಬದಲ್ಲಿ ಹುಟ್ಟಿದವರಲ್ವ ? ನಿಮ್ಮಮ್ಮನಿಗೆ ಈ ಜನ್ಮದಲ್ಲಿ ಶೇಲೆ ಮಾಡ್ಲಿಕ್ಕೆ ಆಗ್ಲಿಕ್ಕಿಲ್ಲ.'

ನಾರಾಯಣ ನಾಯರ್ ನಕ್ಕರು. ನನ್ನ ಮನಸ್ಸು ಗೊಂದಲಗೊಂಡಿತು. ನನ್ನ ಅಮ್ಮನಿಗೆ ಕೊನೆಗಾಲಕ್ಕೆ ಭೀಕರ ದಾರಿದ್ರ್ಯ ಬಂದು ಬಿಡಬಹುದೆಂದು ನಾನು ಭೀತಳಾದೆ.

'ಅಮ್ಮನಿಗೆ ನಿನ್ನೆ ಒಂಬತ್ತು ರೂಪ್ಯಾ ಸಿಕ್ಕಿತು. ಒಂದು ಕವಿತೆ ಕಳಿಸಿದ್ದಕ್ಕೆ ಒಂಬತ್ತು ರೂಪಾಯಿ ಸಿಕ್ಕಿತು ?' ನಾನು ಹೇಳಿದೆ.

'ಒಂಬತ್ತು ರೂಪ್ಯಾ! ನಿಮ್ಮ ಅಮ್ಮ ಒಂದು ವರ್ಷದಲ್ಲಿ ಹತ್ತು ಕವಿತೆ ಬರೆದ್ರೂಂತಿಟ್ಕೊಳ್ಳಿ. ಆಗ ತೊಂಬತ್ತು ರೂಪ್ಯಾ ಸಿಕ್ಕೀತು. ಹತ್ತು ವರ್ಷ ನಿಲ್ಲಿಸ್ದೆ ಕವಿತೆ ಬರೀತಾ ಹೋದ್ರೆ ನಿಮ್ಮಮ್ಮನಿಗೆ ಒಂಬೈನೂರು ರೂಪ್ಯಾ ಸಿಕ್ಕೀತು. ಅದ್ರಿಂದ ಎಂತ ಪ್ರೀಜನವುಂಟು ? ಒಂದು ಚಾದಂಗಡಿ ಮಡಗ್ಬೇಕಿದ್ರೆ ಬೇಕು ಒಂದು ಸಾವಿರ ರೂಪ್ಯಾ. ನಿಮ್ಮ ತಂದೆಗೆ ಏನಾದ್ರೂ ಆಯ್ತೂಂತ ಇಟ್ಕೊಳ್ವಾ.... ಮನುಷ್ಯರಲ್ವ ?' ಯಾವಾಗ ದೇವ್ರು ನಮ್ಮನ್ನು ಮೇಲಕ್ಕೆ ಕರೀತಾರೇಂತ ನಮ್ಗೊತ್ತಿಲ್ಲಲ್ಲಾ. ತಂದೆ ಸತ್ರೂಂತಿಟ್ಕೊ. ಆಗ ನಿಮ್ಮಮ್ಮ ಏನು ಮಾಡ್ತ್ಯಾರು ? ಎರಡೊತ್ತೂ ಊಟ ಬೇಡ್ವ ? ಎರಡು ಚಾ ಕುಡೀಬೇಡ್ವ ? ಉಡ್ಲಿಕ್ಕೂ ತೊಡ್ಲಿಕ್ಕೂ ಬೇಡ್ವ ? ಕೆಲ್ಸದೋರಿಗೆ ಸಂಬಳ ಕೊಡ್ಬೇಡ್ವ ? ನಿಮ್ಮಮ್ಮ ಏನು ಮಾಡ್ತ್ಯಾರು ? ಸ್ವಲ್ಪ ಸಾಮರ್ಥ್ಯಬೇಕು, ಹೆಂಗಸ್ರಾದ್ರೆ. ಅವರವರ ಗಂಡಂದಿರು ಸಂಪಾದಿಸಿ ತರುವ ದುಡ್ಡಾದ್ರು ತೆಗೆದಿರಿಸ್ಬೇಕು. ಬ್ಯಾಂಕಿನಲ್ಲಿಡ್ಬೇಕೂಂತಲ್ಲ ನಾಯೇಳೋದು. ದಿಂಬಿನೊಳಗೆ ಒಂದು ಗಂಟು ಮಾಡಿಟ್ರೂ ಸಾಕು. ಬದಿ ಹೊಲ್ದ್ರೆ ಯಾರಿಗೂ ಗೊತ್ತಾಗ್ಲಿಕ್ಕಿಲ್ಲ. ತಲೆಗಿಟ್ಟು ಮಲಗ್ಬೋದು. ಅಗತ್ಯ ಬಿದ್ದಾಗ ಬಿಚ್ಬೋದಲ್ಲ. ಸ್ವಲ್ಪ ಜಾಗ ತೆಗದಿಡ್ಬಾರ್ದ ? ಕಲ್ಕತ್ತಾದಲ್ಲೆ ಒಂದು ಮನೆ ತಕ್ಕೋಬಾರ್ದ ?'

ನಾನು ತಲೆ ಅಲುಗಿಸಿದೆ. ನಾರಾಯಣನ್‌ನಾಯರ ಭಾಷಣ ಕೇಳಿ ಗಿಡಗಳಿಗೆ ನೀರೆರೆಯುತ್ತಿದ್ದ ಕುಞ್ಞಾತ್ತು ನನ್ನ ಹತ್ತಿರಕ್ಕೆ ಬಂದ.

'ನಿಮ್ಗೆ ದುಡ್ಡಿನೋರಾಗ್ಲಿಕ್ಕೆ ಆಸೆ ಉಂಟಾ ?' ಕುಞ್ಞಾತ್ತು ನಗುತ್ತ ಕೇಳಿದ.

'ಇಲ್ಲ' ನಾನು ಹೇಳಿದೆ.

'ಹಾಗಾದ್ರೆ ? ನೀವು ಭಾಷಣ ಮಾಡಿದ್ದೆಲ್ಲ ಸುಮ್ನಾಯ್ತಲ್ಲ. ಈ ಮಗು

ನಾಲಪ್ಪಾಟ್ಟಿನ ಮಗುವಾಯ್ತಾ. ಅದು ಹುರೀಬೇಡಿ. ಆ ಕುಟುಂಬದಲ್ಲಿ ಹುಟ್ಟಿದೋರಿಗೆಲ್ಲ ದುಡ್ಡಿನ ಮೇಲೆ ಮೋಹ ಇರೋದಿಲ್ಲ. ಡಾಕ್ಟರ್ ಕೇಳಿದ್ರು ನನ್ನತ್ರ, ಅಪ್ಪುಣ್ಣಿ ಮೆನೋನ್ರಿಗೆ ಮದ್ವೆ ಮಾಡ್ಬೇಕೂಂತನ್ನಿದ್ರೆ ನಾಲಪ್ಪಾಟ್ಟಿನಿಂದಲೇ ಹುಡುಗಿ ಸಿಗ್ಬೇಕಂತೆ. ಆಗ ನಾ ಹೇಳಿದೆ, ಯಜಮಾನ್ರೆ, ಆ ಕುಟುಂಬದ ಹೆಣ್ಮಕ್ಕಿಗೆ ದುಡ್ಡಿನ ಮೇಲೆ ಮೋಹಾನೇ ಇಲ್ಲ. ಬೇರೆ ಕುಟುಂಬದ ಮಕ್ಕಳಾದ್ರೆ ಗಂಡಸಿಗೆ ನೆಮ್ಮದಿಯಾಗಿ ನಿದ್ರೆ ಮಾಡ್ಲಿಕ್ಕೂ ಬಿಡ್ಲಿಕ್ಕಿಲ್ಲ. ದುಡ್ಡು ಕೊಡೀ ದುಡ್ಡುಕೊಡೀಂತ ಪೀಡಿಸ್ತಾ ಇರ್ತಾರೆ. ನಾ ಹೇಳಿದ್ದು ಸರಿಯಲ್ವೆ ? ಶಿವ ಪಾರ್ವತಿಯರ ಹಾಗಲ್ವೆ ಅವರಿರೋದು ? ಕಳೆದ ರಜೇಲಿ ಊರಿಗೆ ಹೋದಾಗ ನಾ ತೇಂಡ್ಯತ್ತಿಗೆ ಹೋಗಿದ್ದೆ. ನಂಗೆ ಐದು ರೂಪ್ಾಯೂ ಉಡ್ಲಿಕ್ಕೊಂದು ಮುಂಡೂ ಕೊಟ್ರು.'

'ಯಾರು ?' ನಾಣಣ್ಣ ಕೇಳಿದರು.

'ಅಮ್ಮಿಣ್ಯಮ್ಮ, ನಾಲಪ್ಪಾಟ್ಟಿನ ಅಮ್ಮಿಣ್ಯಮ್ಮ. ಬೇರ್ಯಾರು ಐದ್ರೂಪ್ಾಯ್, ಒಂದು ಮುಂಡೆಲ್ಲ ಕೊಡ್ತಾರೆ ?'

'ಕಮಲೆ, ನಿನ್ನ ಕಣ್ಣಿಗೆ ನಾನು ತಣ್ಣೀರ್ಕೋಡದ ನೀರು ಹಾಕ್ಲಾ ?'

ಪುನ್ನಯೂರ್‌ಕುಳದ ಶಾಲೆಯಲ್ಲಿ ನಾಲ್ಕನೇ ಕ್ಲಾಸಿನಲ್ಲಿ ನನ್ನೊಂದಿಗೆ ಕಲಿಯುತ್ತಿದ್ದ ಜಾನಕಿ ಕೇಳಿದಳು.

ಗರಿಕೆಯ ಹಾಗಿರುವ ಒಂದು ಜಾತಿಯ ಹುಲ್ಲನ್ನು ಅವಳ ಬಲದ ಕೈಯಲ್ಲಿ ನಾನು ನೋಡಿದೆ. ಅದರ ಒಂದು ಬದಿಯಲ್ಲಿ ಮಂಜಿನ ಹನಿ ತೊಟ್ಟಿಕ್ಕದೆ ನಿಂತಿತ್ತು.

'ಏಯ್, ಇಲ್ಲಿ ಕಾಣೋ ಹನಿಯೇ ತಣ್ಣೀರ್ಕೋಡ' ಜಾನಕಿ ಮುಂದುವರಿಸಿದಳು: 'ಇದನ್ನು ಕಣ್ಣಿಗೆ ಎರೆದರೆ ದೃಷ್ಟಿ ಮೊನಚಾಗ್ತದೆ. ನನ್ನ ಕಣ್ಣಿಗೆ ಎರೀತಿರ್ತೇನೆ. ಅದಕ್ಕೇ ನನ್ನ ದೃಷ್ಟಿ ಇಷ್ಟು ಸೂಕ್ಷ್ಮ ?'

ನಾನು ಜಾನಕಿಯ ಕಣ್ಣುಗಳನ್ನು ನೋಡಿದೆ. ಬೂದು ಬಣ್ಣದ ಕೃಷ್ಣಮಣಿಗಳನ್ನು ನಾನು ಕುತೂಹಲದಿಂದ ನೋಡಿದೆ. 'ನನ್ನ ಕಣ್ಣು ಬೆಕ್ಕಿನ ಕಾಣ್ಲಾಗಿಬರ್ತೋದು. ಆದ್ರೆ, ನನ್ನ ಕಣ್ಣು ಭಾರೀ ಸೂಕ್ಷ್ಮಾಯ್ತಾ. ಕ್ಲಾಸಿನಲ್ಲಿ ಕುಳಿತುಕೊಳ್ಳುವಾಗ ಅಯ್ಯಪ್ಪೂವಿನ ಅಂಗಳದಲ್ಲಿರೋ ಬಾಳೆ ಮೇಲೆ ಕೂತ್ಕೊಂಡ ಅಳಿಲು ಹೂವಿನಿಂದ ಜೇನು ಕುಡಿಯೋದು ನಂಗೆ ಕಾಣ್ತದೆ. ನಂದಿಬಟ್ಟು ಹೂವನ್ನು ಕೈಯಲ್ಲಿಟ್ಟು ಹಿಸ್ಕಿ ಅದ್ರ ರಸವನ್ನು ಕಣ್ಣಿಗೆ ಹಾಕಿದ್ರೆ ಇನ್ನೂ ಒಳ್ಳೇದು. ನಿನ್ನ ಕಣ್ಣಿಗೆ ಅದನ್ನೂ ಹಾಕ್ಕೊಡ್ತೇನೆ. ಕಣ್ಣಿಗೆ ಒಳ್ಳೆ ಸೂಕ್ಷ್ಮತೆ ಬರ್ಬೇಡ್ವೆ ? ನಿಂಗೂ ಕಾಣ್ಬೋದಲ್ಲ ಅಯ್ಯಪ್ಪೂನ ಬಾಳೇಮೇಲೆ ಅಳಿಲು ಕೂತು ಜೇನು ಕುಡಿಯೋದು.'

ಶಾಲೆಯ ಬಡಗು ಗಡಿ ಒಂದು ತೋಡಾಗಿತ್ತು. ಮಳೆಗಾಲದಲ್ಲಿ ಹಾಲೆರೆದು ಎರಡು ಸಲ ಸೋಸಿದ ಚಹಾದ ಬಣ್ಣದಲ್ಲಿ ಆ ತೋಡಿನ ನೀರು ಹೊಳೆಯಾಗಿ ಹರಿದುಹೋಗುತ್ತಿತ್ತು. ಮಳೆಯ ಕೊನೆಯ ದಿವಸಗಳಲ್ಲಿ ಆ ಹೊಳೆ ಸಪೂರ ಸಪೂರವಾಗಿ ಹೊಯ್ಗೆಯಡಿಯಲ್ಲಿರೋ ಎರೆ ಹುಳದ ಹಾಗೆ ಕ್ಷೀಣಿಸಿದ ಸಾಲುಗಳಾಗಿ ರೂಪಾಂತರ ಹೊಂದುತ್ತಿತ್ತು. ಹೊಯ್ಗೆಗಾದರೋ ಒಂದು ಬಣ್ಣ ಪರಿವರ್ತನೆಯೂ

ಆಗಿ ಬಿಡುತ್ತಿತ್ತು. ಕಪ್ಪೂ ತುಸು ಕೆಂಪು ಬಣ್ಣವೂ ಕಾಣಿಸತೊಡಗುತ್ತಿತ್ತು. ಶಂಖದ ಒಳಭಾಗದಲ್ಲಿ ಕಾಣಿಸುವ ನಸುಗೆಂಪು ಬಣ್ಣದ ಹೊಯ್ಗೆಯನ್ನು ನಾವು ಬಾಚಿ ತೆಗೆದು ಮನೆಗೆ ಕೊಂಡು ಹೋಗುತ್ತಿದ್ದೆವು. ತೋಡಿನ ಇಬ್ಬದಿಗಳಲ್ಲಿ. ಗಿಡಗಳೂ ಕಾಡು ಹುಲ್ಲುಗಳೂ ಸಮೃದ್ಧವಾಗಿ ಬೆಳೆದು ನಿಂತಿದ್ದವು. ನೆಲನೆಲ್ಲಿ, ತುಂಬೆ, ನಾಚಿಗೆ ಮುಳ್ಳು, ಶ್ರಾವಣ ಪುಷ್ಪ, ನೆಲಸುಳ್ಳಿ, ಮೊದಲಾದ ಮದ್ದಿನ ಗಿಡಗಳೂ ಸಮುದ್ರಮಾಪಾಲ, ಕಾಡುಕೂವೆ, ಕಾಡುನೀರುಳ್ಳಿ ಮೊದಲಾದ ಕಾಡುಗಿಡಗಳೂ ಅಲ್ಲಿ ಬೆಳೆದು ನಿಂತಿದ್ದವು. ಮದ್ದಿನ ಗಿಡಗಳನ್ನು ಪತ್ತೆ ಮಾಡುವುದಕ್ಕೆ ನಾನು ಅಜ್ಜಿಯೊಂದಿಗೆ ಕರ್ಕಾಟಕ ತಿಂಗಳಿನಲ್ಲಿ ಹಿತ್ತಲಿನಲ್ಲೆಲ್ಲ ನಡೆದಾಡುತ್ತಿದ್ದೆ. ಕರ್ಕಾಟಕ ತಿಂಗಳ ಒಂದನೇ ತಾರೀಕಿನಿಂದ ತಿಂಗಳ ಅಂತ್ಯದವರೆಗೆ ನಾಲಪ್ಪಾಟ್ಟಿನ ದೇವರ ಕೋಣೆಯಲ್ಲಿ ಒಂದು ಅಲಂಕೃತ ಮಣೆಯ ಮೇಲೆ ದಶಪುಷ್ಪಗಳು, ಚಂದನ, ಕನ್ನಡಿ, ಕುಂಕುಮ, ನೀರಿನ ಗಿಂಡಿ, ದೀಪ ಮುಂತಾದುವನ್ನು ಶ್ರೀಭಗವತಿಯನ್ನು ಆಕರ್ಷಿಸುವುದಕ್ಕಾಗಿ ನಾವು ಸಿದ್ಧಪಡಿಸಿಡುತ್ತಿದ್ದೆವು. ಸ್ನಾನ ಮುಗಿಸಿ ಬಂದ ಕೂಡಲೆ ಶ್ರಾವಣ ಹೂವನ್ನು ಕೈಯಲ್ಲಿಟ್ಟು ತಿಕ್ಕಿದಾಗ ಸಿಗುವ ದ್ರವದಲ್ಲಿ ನಾನು ಬೊಟ್ಟು ಹಾಕುತ್ತಿದ್ದೆ. ನಾಲ್ಕು ಹೂವಿರುವ ಒಂದು ಶ್ರಾವಣ ಹೂ ಗಿಡ ಕಾಣಸಿಕ್ಕಿದ್ರೆ ಅದು ಪರಮಭಾಗ್ಯ ಎಂಬುದಾಗಿ ದೇವಕಿ ಹೇಳುತ್ತಿದ್ದಳು. ಎಷ್ಟೋ ಸಮಯವನ್ನು ನಾನೂ ಅವಳೂ ನಾಲ್ಕು ಹೂಗಳುಳ್ಳ ಶ್ರಾವಣಹೂಗಿಡವನ್ನು ಹುಡುಕುವುದಕ್ಕಾಗಿ ಹಿತ್ತಿಲುಗಳುದ್ದಕ್ಕೂ ಅಲೆದಾಡುತ್ತಿದ್ದೆವು.....

'ನಿನ್ನ ಕಣ್ಣಿಗೆ ಎರೀಬೇಡ್ವೆ ?' ಜಾನಕಿ ಅಸಹನೆಯಿಂದ ಮತ್ತೊಮ್ಮೆ ಕೇಳಿದಳು.

'ಬೇಡ.'

'ಹಾಗಾದ್ರೆ ನಿನ್ನ ಕಣ್ಣಿಗೆ ಸೂಕ್ಷ್ಮತೆ ಬೇಡಾಗಿರ್ಬೋದು, ಅಲ್ವೆ? ಕಣ್ಣು ಸೂಕ್ಷ್ಮವಾಗಿಲ್ಲದಿದ್ರೆ ಕೆಲೋಮ್ಮೆ ಹಾಳು ಬಾವೀಲಿ ಬೀಳ್ಬೋದು. ಕೆಲೋಮ್ಮೆ ವಿಷದ ಹಾವಿನ ಮೇಲೆ ಕಾಲಿಡ್ಬೋದು. ಹಾವು ಜನ್ರನ್ನೂ, ಜಾತಿಯನ್ನೂ ನೋಡೋದಿಲ್ಲ. ಅದು ನಿನ್ನನ್ನು ಕಚ್ಚೀತು. ಮತ್ತೆ ವಿಷ ಇಳಿಸ್ಲಿಕ್ಕೆ ವಿಷ ವೈದ್ಯರನ್ನು ಕಂಡಿಡೀಬೇಕು. ಕೆಲೋಮ್ಮೆ ವಿಷ ವೈದ್ಯನನ್ನು ಕಂಡಿಡೀಲಿಕ್ಕೆ ಸಾಧ್ಯಾಗ್ಲಿಕ್ಕಿಲ್ಲ. ಅವ ಕಾಶೀಗೋಗಿರ್ಬೋದು. ಆಗ ವಿಷ ಇಳಿಸ್ದೆಯೇ ನೀ ಬಿದ್ದು ಸಾಯ್ಬೇಕಾದೀತು. ನಿಂಗೆ ಸಾಯ್ಬೇಕೊ ಏನೊ, ಅಲ್ವೆ ?'

'ನಂಗೆ ಸಾಯ್ಬೇಡ.'

'ಹಾಗಿದ್ರೆ ಯಾಕೆ ಸಮಯ ಹಾಳು ಮಾಡ್ತಿ. ಕಣ್ಣು ತೆರೀ. ನಾನು ಕಣ್ಣಿಗೆ ಈ ತಣ್ಣೀರ್ಕೊಡವನ್ನು ಎರೀತೇನೆ.'

ನಾನು ಮುಖ ತಿರುಗಿಸಿ ತೋಡಿನಲ್ಲೇ ಓಡಿದೆ. ಒದ್ದೆಯಾದ ಹೊಯ್ಗೆ ಹಾವಿನಮುಖಗಳಂತೆ, ನನ್ನ ಕಾಲಡಿಗಳನ್ನು ನುಂಗುವುದಕ್ಕೆ ಪ್ರಯತ್ನಿಸುವಂತೆ ನನಗೆ ಭಾಸವಾಯಿತು. ಶಾಲೆಗೆ ಹತ್ತುವ ಮೆಟ್ಟಲುಗಳ ಬಳಿಗೆ ತಲುಪಿದಾಗ ತಲ್ಲಣಿಸುವ ಹೃದಯದ ಬಡಿತದೊಂದಿಗೆ ನಾನು ಒಂದು ನಿಮಿಷ ನಿಂತೆ.

ಜಾನಕಿ ದೂರದಲ್ಲಿ ತಣ್ಣೀರ್ಕೊಡದ ಹುಲ್ಲನ್ನು ಗಟ್ಟಿಯಾಗಿ ಹಿಡಿದುಕೊಂಡು ನಿಶ್ಚಲವಾಗಿ ನಿಂತಿದ್ದಳು. ಬೂದಿ ಬಣ್ಣದ ಗೆರೆಗಳುಳ್ಳ ಒಂದು ರವಿಕೆಯನ್ನೂ ಬಿಳಿಯ

ಲಂಗವನ್ನೂ ತೊಟ್ಟುಕೊಂಡಿದ್ದಳು. ತೋಡಿನ ಮಸುಕು ಬೆಳಕಿನಲ್ಲಿ ಅವಳ ಕಣ್ಣುಗಳು ಹೊಳೆದವು.

ಮೆಟ್ಟಿಲುಗಳನ್ನು ಹತ್ತಿ ಆದಮೇಲೆ ಆಲದ ಮರದಡಿಯಲ್ಲಿ ಕಡಲೆ ಮಾರುತ್ತಾ ಕುಳಿತಿದ್ದ ವ್ಯಕ್ತಿ ನನ್ನನ್ನು ನೋಡಿ ನಕ್ಕ. ಆತನ ಎದುರು ಒಂದು ಬುಟ್ಟಿಯಲ್ಲಿ ಒಂದಷ್ಟು ನೆಲಕಡಲೆಗಳೂ ನಾಲ್ಕು ಹಸಿ ಹುಳಿಯೂ ಇರುವುದನ್ನು ನಾನು ನೋಡಿದೆ.

'ಹಸಿಹುಳಿ ಬೇಕೋ?' ಆತ ಕೇಳಿದ. ನಾನು ತಲೆಯಾಡಿಸಿದೆ.

'ಯಾಕೆ ಏದುಸಿರು ಬಿಡ್ತಿ ಮಗು? ತೋಡಿನಲ್ಲಿ ಯಾವುದಾದರೂ ಎಮ್ಮೆ ಅಟ್ಟಿಸ್ಕೊಂಡು ಬಂತಾ?'

'ಇಲ್ಲ.'

'ದುಡ್ಡಿಲ್ಲಿದ್ರೆ ಬೇಡ ಮಗು, ಸ್ವಲ್ಪ ಕಡ್ಲೆ ತಿಂತೀಯಾ?'

'ಬೇಡ.'

ಜಾನಕಿಯ ತಲೆ ಕಾಣೆಸಿಕೊಂಡಾಗ ನಾನು ಕ್ಲಾಸಿನೊಳಕ್ಕೆ ಓಡಿದೆ. ಅಯ್ಯಪ್ಪು ಬಡಗು ಕೋಣೆಯಲ್ಲಿ ಕಟ್ಟಿ ತೂಗಿಸಿದ್ದ ಕಬ್ಬಿಣದ ತುಂಡಿನ ಮೇಲೆ ಒಂದು ಕೋಲಿನಿಂದ ಹೊಡೆಯುತ್ತಿದ್ದ. ಆ ಕಬ್ಬಿಣದ ತುಂಡು ಯಾವುದೋ ರೈಲು ಹಳಿಯ ಅವಶೇಷವಾಗಿತ್ತು. ಹೆಡ್‌ಮಾಸ್ಟರ್ ತನ್ನ ವಾಚಿನ ಕಡೆಗೆ ಎರಡು ಸಲ ಸೂಕ್ಷ್ಮವಾಗಿ ನೋಡಿ ಏಳನೇ ಕ್ಲಾಸಿಗೆ ಪ್ರವೇಶಿಸಿದರು.

'ಸತ್ಯ ಹೇಳು ಕಮಲಾ?' ಜಾನಕಿ ಹೇಳಿದಳು, 'ನಿಂಗೆ ನನ್ನ ಕಂಡ್ರೆ ಆಗೋದಿಲ್ಲ ಅಲ್ವೆ? ಕೋಟ್ಟಯದ ತಂಗಂಳೇ ನಿಂಗಿಷ್ಟ ಅಲ್ವೆ?'

ನಾನು ಉತ್ತರ ಹೇಳಲಿಕ್ಕೆ ಬಯಸಲಿಲ್ಲ. ನನ್ನ ಬೆಂಚಿನಲ್ಲಿ ಕುಳಿತುಕೊಳ್ಳುತ್ತಿದ್ದ ಮೊಯ್ದೀನ್ ಅಂದು ಬಂದಿರಲಿಲ್ಲ. ಅವನಿಗೆ ಟೈಫಾಯ್ಡ್ ರೋಗ ಹಿಡಿದಿದೆಯೆಂದು ತಂಗಂ ಹೇಳಿದಳು. ಅವ ಸತ್ತು ಹೋದನೆಂದು ಅಪ್ಪುಣ್ಣಿ ಹೇಳಿದಾಗ ಲೆಕ್ಕ ಹೇಳಿಕೊಡುವುದಕ್ಕೆ ಬಂದ ತಾಚ್ಚು ಮಾಸ್ತರಿಗೆ ಸಿಟ್ಟು ಬಂತು.

'ಕೇಳಿದ್ದನ್ನೆಲ್ಲ ಹೇಳಿ ಹರಡ್ಲಿಕ್ಕಾ ನೀನು ಶಾಲೆಗೆ ಬರೋದು?' ತಾಚ್ಚು ಮಾಸ್ತರ್ ಬೆತ್ತ ಹಿಡಿದುಕೊಂಡು ಕೇಳಿದರು.

ಆಮೇಲೆ ಮೊಯ್ದೀನ್‌ನ ಬಗ್ಗೆ ಶಾಲೆಯಲ್ಲಿ ಯಾರೂ ಮಾತನಾಡಲಿಲ್ಲ.

ಅಂದು ಸಾಯಂಕಾಲ ಮಾಲತಿಕುಟ್ಟಿ ಹೇಳಿದಳು: 'ಅಂಬಾಳತ್ತಿನಲ್ಲೂ ಟೈಫಾಯ್ಡ್ ಹಿಡಿದು ಇಬ್ಬರು ಸತ್ತರು. ಸಣ್ಣಕ್ಕನ ಮಕ್ಕಳು.'

ಅತ್ತೆಯ ಅಕ್ಕನನ್ನು ಎಲ್ಲರೂ ಸಣ್ಣಕ್ಕ ಎಂದು ಕರೆಯುತ್ತಿದ್ದರು. ಅವರ ಚಂದದ ಹೆಣ್ಣು ಮಕ್ಕಳು ಒಂದು ವರ್ಷದೊಳಗೆ ಟೈಫಾಯ್ಡ್ ಹಿಡಿದು ತೀರಿಹೋದರೆಂದು ಮೀನಾಕ್ಷಿಯಕ್ಕ ಹೇಳಿ ಮಾಲತಿಕುಟ್ಟಿಗೆ ಗೊತ್ತಾದದ್ದು. ಹದಿನೆಂಟು ಹದಿನೇಳು ಪ್ರಾಯ ಇರುವ ಹೆಣ್ಣು ಮಕ್ಕಳು. ದೊಡ್ಡವಳು ಬೆಳಗ್ಗೆ ದೇವಸ್ಥಾನಕ್ಕೆ ಹೋಗಿ ಕೈಮುಗಿದಿದ್ದಳು. ಮನೆಗೆ ಹಿಂದಿರುಗಿ ಬಂದ ಕೂಡಲೇ, ತಲೆನೋವೆಂದು ಗೋಳುಹೊಯ್ದಳು. ಮೂರನೆ ದಿವಸ ತೀರಿಹೋದಳು. ಕುನ್ನಂಕುಳದಿಂದ ಐಸ್ ತಂದದ್ದು ಯಾವ ಪ್ರಯೋಜನವೂ ಆಗಲಿಲ್ಲ. ಜ್ವರ ಏರುತ್ತಾ ಹೋಗಿತ್ತು. ಆ

ಹುಡುಗಿ ಧರಿಸಿದ್ದ ರೇಷ್ಮೆಯ ರವಿಕೆಯನ್ನು ಒಂದು ಕಬ್ಬಿಣದ ಪೆಟ್ಟಿಗೆಯಿಂದ ಹೊರತೆಗೆದು ನಾನೂ ಮಾಲತಿಕುಟ್ಟಿಯೂ ಕುತೂಹಲದಿಂದ ನೋಡಿದೆವು. ಕುತ್ತಿಗೆಯಲ್ಲೂ ಕೈಯಲ್ಲೂ ನೆರಿಗೆಗಳಿದ್ದ ಒಂದು ರವಿಕೆಯಾಗಿತ್ತದು. ಮಾಲತಿಕುಟ್ಟಿಯ ಮಾವಂದಿರಲ್ಲಿ ಇಬ್ಬರು ವಿಲಾಯತಿಗೆ ಹೋಗಿ ಕಲಿತು ಬಂದವರು. ಆದ್ದರಿಂದಲೇ ಇರಬೇಕು, ಕ್ರೈಸ್ತ ಹೆಂಗಸರು ಧರಿಸುತ್ತಿದ್ದ ವಸ್ತ್ರಗಳನ್ನು ಅಂಬಾಳತ್ತಿನ ಹುಡುಗಿಯರೂ ಧರಿಸುವುದಕ್ಕೆ ಕಾರಣವಾದದ್ದು.

ಆ ರೇಷ್ಮೆ ರವಿಕೆಯು ಮಿಠಾಯಿ ಕೆಂಪು ಬಣ್ಣದ್ದಾಗಿತ್ತು. ನಾನದನ್ನು ತೆಗೆದು ಧರಿಸಿದಾಗ ಅದು ನನ್ನ ಮೊಣಕಾಲವರೆಗೆ ಇಳಿಯಿತು.

'ನೋಡ್ಲಿಕ್ಕೆಂತಾ ಚಂದಯಿದ್ದು!' ಮೀನಾಕ್ಷಿ ಅಕ್ಕ ಹೇಳಿದರು: 'ಕಣ್ಣು ತಾಗಿದ್ದು. ಟೈಫ್ಯಾಡೂಂತ ಸುಮ್ಮನೇ ಹೇಳೋದು. ದೃಷ್ಟಿತಾಗಿ ಅವಳು ಸತ್ತದ್ದು. ಈ ಊರ್ನಲ್ಲಿ ತುಂಬಾ ದೃಷ್ಟಿ ತಾಗಿಸೋರಿದ್ದಾರೆ. ಒಂದೇ ಒಂದು ನೋಟಕ್ಕೆ ಮಾವು ಸುಟ್ಹೋಗ್ತದೆ. ಹಲಸು ಕರಿಕಲಾಗ್ತದೆ. ತಂಗಕುಟ್ಟಿ ದೇವಸ್ಥಾನಕ್ಹೋಗುವಾಗ ಈ ಕೆಂಪು ಬಟ್ಟೆ ಹಾಕ್ಕೊಂಡು ಸಪೂರ ಕರೆಯ ಮುಂಡು ಸುತ್ತಿ ಕುತ್ತಿಗೆಗೆ ಗುಳಿಮಾಲೆ ಹಾಕಿ ಕಾಡಿಗೆ ಹಚ್ಚಿ ಗಂಧದ ಬೊಟ್ಟು ಹಾಕಿ ಹೋದ್ದಾಯ್ತಾ.... ನೋಡ್ಲಿಕ್ಕೆ ನಾಲ್ಕು ಕಣ್ಣು ಬೇಕು ಮಗು. ಆಗ್಩ೇ ನಂಗೆ ಗೊತ್ತಾಗೋಯ್ತು ಕಣ್ಣು ತಾಗ್ತದೇಂತ. ಬರ್ಬೇಕಿದ್ರೆ ಸುರುವಾಗೋಯ್ತಲ್ಲ ಜ್ವರ?'

ಆಮೇಲೆ ಟೈಫ್ಯಾಡಿನ ಬಗ್ಗೆಯೂ ದೃಷ್ಟಿತಾಗುವುದರ ಬಗ್ಗೆಯೂ ಮಾಲತಿಕುಟ್ಟಿಯೂ ನಾನೂ ಹೆದರಿಕೊಂಡೇ ಮಾತನಾಡಿದೆವು. ಟೈಫ್ಯಾಡಿನ ಅಣುಗಳನ್ನು ನೊಣಗಳು ಹರಡುತ್ತವೆಂದು ಯಾರೋ ಹೇಳುವುದು ಕೇಳಿದಾಗ ನಾನು ಭಯಚಕಿತಳಾದೆ. ನಾಲಪ್ಪಾಟ್ಟಿನ ಹೊರಮನೆಯಲ್ಲೂ ಚಾ ಮಾಡುವ ಮೂಡಣಕೋಣೆಯಲ್ಲೂ ನೊಣಗಳು ಸಾಧಾರಣವಾಗಿ ಗುಯಿಂಗುಟ್ಟುತ್ತಾ ಹಾರಾಡುತ್ತಿದ್ದವು. ಅವುಗಳ ರೆಕ್ಕೆಗಳಿಂದ ಉಂಟಾಗುತ್ತಿದ್ದ ಮರ್ಮರ ಧ್ವನಿ ಮರಣದ ಧ್ವನಿಯಾಗಿ ನನಗೆ ತೋರಿಹೋಯಿತು.

ಸಾವಿನ ಬಗ್ಗೆ ನಾನು ಕೇಳುತ್ತಿದ್ದ ಪ್ರಶ್ನೆಗಳು ಅಜ್ಜಿಯನ್ನು ಗೊಂದಲಗೊಳಿಸಿದವು. ಮರಣಭಯ ಎಂಬ ಹೆಸರಿನ ಒಂದು ಪುಸ್ತಕವನ್ನು ಅಜ್ಜಿ ಅಂದು ಓದುತ್ತಲೂ ಇದ್ದರು.

'ಸತ್ತನಂತರ ನಿಮ್ಗೆ ನನ್ನನ್ನು ಕಾಣ್ಲಿಕ್ಕೆ ಆಗ್ಲಿಕ್ಕಿಲ್ಲಲ್ಲಾ ಅಜ್ಜಿ?' ನಾನು ಕೇಳಿದೆ.

'ಸತ್ತವರ ಲೋಕ ದೂರ ಅಲ್ವಾ? ಕಾಣ್ಲಿಕ್ಕೆ ಸಾಧ್ಯ ಇಲ್ವೋ ಏನೋ?' ಅಜ್ಜಿ ಹೇಳಿದರು.

'ಕಣ್ಣಿಗೆ ಸೂಕ್ಷ್ಮತೆ ಇದ್ದರೆ ಕಾಣ್ಬಹುದು ಅಲ್ವೆ?'

'ಕಾಣ್ಬಹುದೋ ಏನೋ?' ಅಜ್ಜಿ ಹೇಳಿದರು.

ಮಾರನೆಯ ದಿವಸ ನಾನು ಜಾನಕಿಯನ್ನು ಕರೆದುಕೊಂಡು ತೋಡಿಗಿಳಿದೆ.

'ಸ್ವಲ್ಪ ತಣ್ಣೀರ್ಕೊಡಬೇಕು?' ನಾನು ಹೇಳಿದೆ.

'ಈಗ ಕಣ್ಣಿಗೆ ಸೂಕ್ಷ್ಮತೆ ಬೇಕೂಂತಾಯ್ತಾ?' ಜಾನಕಿ ಕೇಳಿದಳು.

'ನಂಗಲ್ಲ, ನನ್ನ ಅಜ್ಜಿಗೆ ಕೊಡ್ಲಿಕ್ಕೆ' ನಾನು ಹೇಳಿದೆ.

'ಅಜ್ಜಿಗೆ ಯಾಕೆ ?'

'ಅಜ್ಜಿ ಸತ್ರೂ ಅವ್ರಿಗೆ ನನ್ನ ಕಾಣ್ಬಹುದಲ್ಲಾ ?' ನಾನು ತಗ್ಗಿದ ಸ್ವರದಲ್ಲಿ ಹೇಳಿದೆ. ಜಾನಕಿ ಜೋರಾಗಿ ನಕ್ಕಳು.

'ನಿಂಗೇನೂ ಗೊತ್ತಿಲ್ವಾ ? ಸತ್ತೋರನ್ನು ಸುಟ್ಟು ಮುಗಿಸ್ತಾರಲ್ಲಾ ? ಆಗ ಅವರ ಕಣ್ಣು ಹೊತ್ತೋದಿಲ್ವೆ ? ಅಸ್ಥಿಯಲ್ಲದೆ ಇನ್ನೇನೂ ಉಳಿಯೋದಿಲ್ಲ.'

'ನನ್ನ ಅಜ್ಜಿಯನ್ನೂ ಹೊತ್ತಿಸ್ತಾರಾ ?'

'ನಿನ್ನ ಅಜ್ಜಿಯನ್ನೂ ಹೊತ್ತಿಸ್ತಾರೆ. ಏನೂ ಸಂಶಯವಿಲ್ಲ. ಎಲ್ಲರನ್ನೂ ಹೊತ್ತಿಸ್ತಾರೆ. ಈ ಲೋಕದಲ್ಲಿರುವ ಎಲ್ಲಾ ಮನುಷ್ಯರನ್ನೂ ಹೊತ್ತಿಸ್ತಾರೆ. ಹೊಲೇರನ್ನೂ ಕೊರಗ್ರನ್ನೂ ಹೂಳ್ತಾರೇಂತ ಕೇಳಿದ್ದೇನೆ. ಬಾಕಿ ಇರುವವರನ್ನು ಹೊತ್ತಿಸ್ತಾರೆ.'

'ನನ್ನನ್ನೂ ಹೊತ್ತಿಸ್ತಾರಾ ?'

'ನೀ ಸತ್ರೆ ನಿನ್ನನ್ನೂ ಹೊತ್ತಿಸ್ತಾರೆ. ಸತ್ತೋರನ್ನು ಮನೆಯೊಳಗಿರಿಸಿಕೊಳ್ಳೇಕೆ ಆಗೋದಿಲ್ಲಲ್ಲಾ. ಸತ್ತೋರು ವಾಸನೆ ಬರ್ತಾರೆ. ನಿಂಗದು ಗೊತ್ತಿಲ್ವಾ ? ನಮ್ಮ ಮನೇಲಿ ಇಲಿ ಏನಾದ್ರೂ ಸತ್ರೆ ವಾಸನೆ ಬರೋದಿಲ್ವಾ ? ಅದೇ ವಾಸನೆಯೇ ನಾವು ಸತ್ರೂ ಬರೋದು.'

'ನಾನು ಸಾಯದಿದ್ರೆಯೋ ? ನನ್ನ ಅಜ್ಜಿಯೂ ಸಾಯದಿದ್ರೆಯೋ ?'

ಜಾನಕಿ ಮಾತ್ರವಲ್ಲ ಬಾಕಿ ಇದ್ದ ಮಕ್ಕಳೂ ನನ್ನ ಪ್ರಶ್ನೆಯನ್ನು ಕೇಳಿ ಹೊಟ್ಟೆ ಬಿರಿಯುವಂತೆ ನಕ್ಕರು.

'ಸಾಯದಿರ್ಲಿಕ್ಕೆ ನೀನೂ ನಿನ್ನ ಅಜ್ಜಿಯೂ ದೇವತೆಗಳಾ ?' ಜಾನಕಿ ಕೇಳಿದಳು.

'ನಂಗೊತ್ತಿಲ್ಲ' ಎಲ್ಲ ಮಕ್ಕಳೂ ನೆಲದಲ್ಲಿ ಬೆಂಚಿನಲ್ಲಿ ಕುಳಿತು ಬಿದ್ದು ಹೊರಳಾಡುತ್ತಾ ನಕ್ಕರು. ನಗುವಾಗ ಅವರ ಮುಖಗಳು ವಿಕಾರಗೊಂಡವು.

ಅಂದು ಮನೆಗೆ ಹಿಂದಿರುಗಿ ಬಂದಾಗ ಅಜ್ಜಿ ನನ್ನಲ್ಲಿ ಕೇಳಿದರು: 'ನೀನು ಅತ್ತಿದ್ದಿಯಾ ? ಕಣ್ಣೆಲ್ಲ ಕೆಂಪಾಗಿದೆಯಲ್ಲಾ.'

'ನಾವು ಮನುಷ್ಯಸ್ತ್ರೀಯರೋ ದೇವತೆಗಳೋ ? ನಾನು ದೇವಗಣದವಳೆಂದು ಶೂಲಪಾಣಿ ವಾರಿಯರ್ ಹೇಳಿದ್ದಲ್ವೇ ? ನಾವು ದೇವತೆಗಳು, ಅಲ್ವೇ ?'

'ನಾವು ಮನುಷ್ಯರಲ್ವಾ ಕಮಲಾ. ಹೀಗೆಲ್ಲ ಕೇಳ್ಳಿಕ್ಕೆ ಕಾರಣ ಏಂತ ?'

'ನಾವು ಸತ್ತೋಗ್ತೇವೆ ಅಲ್ವೇ ?' ನಾನು ಗದ್ಗದಿಸುತ್ತಾ ಕೇಳಿದೆ.

ಅಜ್ಜಿ ತಲೆಯಾಡಿಸಿದರು.

'ಹಾಗಾದ್ರೆ ಕಣ್ಣಿಗೆ ಸೂಕ್ಷ್ಮತೆ ಇದ್ದೂ ಏನು ಪ್ರೇಜನವಿಲ್ಲ. ಅಲ್ವೇ ? ಅಜ್ಜಿ ಸತ್ರೆ ಎಷ್ಟು ಆಸೆ ಪಟ್ರೂ ನನ್ನ ಕಾಣ್ಲಿಕ್ಕೆ ಆಗ್ಲಿಕ್ಕಿಲ್ಲ ಅಲ್ವೇ. ಸತ್ತವರ ಲೋಕದಿಂದ ನೋಡಿದ್ರೆ ಈ ಲೋಕ ಕಾಣ್ಲಿಕ್ಕಿಲ್ಲ ಅಲ್ವೇ ?'

'ಈ ಪ್ರಶ್ನೆಗಳಿಗೆಲ್ಲ ಉತ್ತರ ಹೇಳೋದಕ್ಕೆ ನಂಗೆ ಸಾಧ್ಯವಿಲ್ಲ. ನಂಗಷ್ಟು ಬುದ್ಧಿ ಇಲ್ಲ ಕಮಲ.'

ಅಜ್ಜಿ ತನ್ನ ಕಣ್ಣುಗಳನ್ನು ಬಟ್ಟೆಯಿಂದ ಒರಸಿದರು.

ಒಮ್ಮೆ ತಂದೆ ರಜೆಯಲ್ಲಿ ಬಂದಾಗ ಮಾವನಿಗೆ ಒಂದು ಸಾಲಿಗ್ರಾಮವನ್ನು ಕೊಟ್ಟರು. ನೇಪಾಳದಿಂದ ಕಲ್ಕತ್ತೆಗೆ ಬಂದಿದ್ದ ಒಬ್ಬ ಅತಿಥಿ ತಂದೆಗೆ ಕೊಟ್ಟದ್ದಾಗಿತ್ತು. ಆ ಕಪ್ಪಗಿನ ನಯವಾದ ಕಲ್ಲು. ಸಾಲಿಗ್ರಾಮದ ಸಿದ್ಧಿಗಳಲ್ಲಿ ನಂಬಿಕೆ ಇರಿಸಿದ್ದ ಮಾವನಿಗೆ ಒಂದು ನಿಧಿ ಸಿಕ್ಕಿದಾಗ ಉಂಟಾಗುವ ಸಂತೋಷ ಅನುಭವಕ್ಕೆ ಬಂತು. ಅದರ ಪೂಜೆಗಾಗಿ ಒಂದು ತಿಂಗಳಿಗೂ ಹೆಚ್ಚು ಕಾಲ ಶ್ರಮ ಪಟ್ಟು ನಾಲಪ್ಪಾಟ್ಟಿನ ತೆಂಕಮೂಲೆಯಲ್ಲಿ ಹಳದಿಮರದ ಗೋಡೆಗಳಿರುವ ಒಂದು ದೇವಸ್ಥಾನವನ್ನು ನಿರ್ಮಿಸಲಾಯಿತು. ಸಾಲಿಗ್ರಾಮ ಪೂಜೆಯನ್ನು ಮಾವನೇ ಮಾಡಿದರು. ಪೂಜೆಗೆ ಬ್ರಾಹ್ಮಣರೇ ಒಳ್ಳೆಯದೆಂದು ಅಂಬಾಳತ್ತಿನ ಕೇಶವದಾಸ್ ಮೆನೋನ್ ಎಲಿಯಜಾಟ್ ಕೊಚ್ಚುಣ್ಣಿ ತಂಬುರಾನ್ ಮೊದಲಾದ ಸ್ನೇಹಿತರು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಮಾವನ ವಿಶೇಷ ಜ್ಞಾನವನ್ನು ಪರಿಗಣಿಸಿದಾಗ ಅವರಿಗಿಂತ ಶ್ರೇಷ್ಠನಾದ ಓರ್ವ ಪೂಜಾರಿ ಪುನ್ನಯೂರ್‌ಕುಳದಲ್ಲಿ ಲಭಿಸಲಾರರು ಎಂಬುದು ಎಲ್ಲರಿಗೂ ವೇದ್ಯವಾಯಿತು. ಮಾವನೇ ಪೂಜೆ ಮಾಡುವುದು ಸರಿಯಾದದ್ದು ಎಂಬುದಾಗಿ ಮಾರಾತ್ತಾಟ್ಟಿನ ಶಂಕರನ್ನಾಯರೂ ಅಂಬಾಳತ್ತಿನ ಕುಂಜುಣ್ಣಿಮೆನೋನರೂ ಅಭಿಪ್ರಾಯಪಟ್ಟರು.

ಪೂಜೆಗಿರುವ ಸಾಮಗ್ರಿಗಳನ್ನು ಸಿದ್ಧಪಡಿಸಿಡುವುದು ಅಮ್ಮನ ಕೆಲಸವಾಗಿತ್ತು. ಬೆಳಿಗ್ಗೆ ಹೊಸ ಒದ್ದೆ ಮುಂಡುಟ್ಟು ಅವರು ದೇವಸ್ಥಾನದಲ್ಲಿ ದೀಪ ಹೊತ್ತಿಸುವುದೂ, ಗಂಧ ತೇಯುವುದೂ ಮಾಡಿದರು. ಆ ಕಾಲದಲ್ಲಿ ಅಜ್ಜಿಯ ಮುಖದಲ್ಲಿ ಒಂದು ಪ್ರತ್ಯೇಕ ಸೌಂದರ್ಯವಿತ್ತು. ಅವರ ಮುಖಕ್ಕೂ ಒಳ್ಳೆಯ ಚಂದನದ ಬಣ್ಣವಿತ್ತು.

ಸಾಲಿಗ್ರಾಮ ಪೂಜೆಯಿಂದಲಾಗಿ ನಾಲಪ್ಪಾಟ್ಟು ಮನೆಗೆ ಸಂಪತ್ ಸಮೃದ್ಧಿ ಬಂತೆಂಬುದಾಗಿ ಅನೇಕರು ಅಭಿಪ್ರಾಯ ಪಡುವುದನ್ನು ನಾನು ಕೇಳಿದೆ. ಕೈಯಲ್ಲಿ ಸಾಕಷ್ಟು ದುಡ್ಡಿರುವುದೇ 'ಸಂಪತ್ ಸಮೃದ್ಧಿ' ಎಂಬ ಮಾತಿನ ಅರ್ಥ ಎಂಬುದಾಗಿ ಮುತ್ತಜ್ಜಿ ನನಗೆ ಹೇಳಿದರು.

ಅಣ್ಣ ಅದನ್ನು ಕೇಳಿ ತಲೆದೂಗಿ ಮುಗುಳ್ನಕ್ಕ.

'ನಮಗೂ ಬೇಕೊಂದು ದೇವಸ್ಥಾನ' ಅಣ್ಣ ನನ್ನೊಂದಿಗೆ ಹೇಳಿದ.

'ಅಂಜಕಾಳನ್ ಮಾಡಿಕೊಟ್ಟಾನು' ನಾನು ಹೇಳಿದೆ.

'ಅಂಜಕಾಳನ್ ದೇವಸ್ಥಾನ ಹೇಗೆ ಮಾಡ್ತಾನು ?'

'ಅಂಜಕಾಳನ್ ನಮಗೆ ತೆಂಗಿನ ಮಡಲಿನಲ್ಲಿ ಒಂದು ಸಣ್ಣ ಮನೆ ಮಾಡಿಕೊಟ್ಟದ್ದು ನೆಂಪಿಲ್ವಾ ?'

'ಮಡಲಿನಿಂದ ದೇವಸ್ಥಾನ ಮಾಡ್ಲಿಕ್ಕೆ ಆಗ್ಲಿಕ್ಕಿಲ್ಲ. ದೇವಸ್ಥಾನ ಮಾಡ್ಲಿಕ್ಕೆ ಆಚಾರಿಯೇ ಬೇಕು.'

'ಆಚಾರಿ ಕುಂಜು. ನಾಳೆಯೇ ದೇವಸ್ಥಾನ ಮಾಡ್ಲಿಕ್ಕೆ ಹೇಳ್ಬೇಕು.'

'ಒಂದು ದಿವಸದಲ್ಲಿ ಯಾರಿಗೆ ಸಾಧ್ಯ ಉಂಟು ಮಾಡ್ಲಿಕ್ಕೆ ? ದೇವಸ್ಥಾನ ಮಾಡ್ಲಿಕ್ಕೆ

ಒಂದು ತಿಂಗಳು ಬೇಕಾದೀತು. ವಿಗ್ರಹ ಪ್ರತಿಷ್ಠಾಪನೆ ಮಾಡ್ಬೇಕು. ಅದಕ್ಕೆ ವಿಗ್ರಹ ಸಿಗ್ಬೇಕು. ವಿಗ್ರಹ ಕೊಳ್ಳಿಕ್ಕೆ ಸಿಗ್ಲಿಕ್ಕಿಲ್ಲ. ಮಣ್ಣಿನಡಿಯಿಂದ ಉದ್ಭವಗೊಳ್ಬೇಕು. ಆದರೆ ಮಾತ್ರ ದೇವಸ್ಥಾನಕ್ಕೆ ಶಕ್ತಿ ಬಂದೀತು.'

ಅಂಜಕಾಳನ್ ಪಡುದಿಕ್ಕಿನ ಅಂಗಳವನ್ನು ಅಗೆದು ಹಾಕಿದ. ಆಗಲೇ ಚಕ್ರದ ಆಕಾರವುಳ್ಳ ಇಟ್ಟಿಗೆಯ ತುಂಡು ನಮಗೆ ಸಿಕ್ಕಿದ್ದು.

'ವಿಗ್ರಹ ಸಿಕ್ಕಿತು' ಅಣ್ಣ ಅದನ್ನು ಕೈಯಲ್ಲಿ ಓಡಿದುಕೊಂಡು ಕೂಗಿ ಹೇಳಿದ.

ಚಕ್ರಪಾಣಿ ಎಂಬ ಹೆಸರು ಅಣ್ಣ ಕೊಟ್ಟದ್ದೋ ಅಥವಾ ಮಾವನೋ ಎಂಬುದು ನನಗೆ ಸರಿಯಾಗಿ ನೆನಪಾಗುವುದಿಲ್ಲ. ಮೂರು ಕಡೆಯಲ್ಲೂ ಕಪ್ಪು ತಟ್ಟಿಕಟ್ಟಿದ ಒಂದು ದೇವಸ್ಥಾನವಾಗಿತ್ತದು. ನಮ್ಮ ಚಕ್ರಪಾಣಿ ದೇವಸ್ಥಾನದ ವಿಗ್ರಹದ ಎರಡು ಭಾಗದಲ್ಲಿ ಒಂದೊಂದು ಬೆಂಚನ್ನು ನೆಲೆಗೊಳಿಸಿದೆವು. ಭಕ್ತರಿಗೆ ಸುಖವಾಗಿ ಕುಳಿತು ಪೂಜೆಯನ್ನು ನೋಡುವುದಕ್ಕೆ ಬೇಕಾದ ಸೌಕರ್ಯವನ್ನು ಆ ರೀತಿಯಾಗಿ ನಾವು ಮಾಡಿಕೊಟ್ಟೆವು. ದೀಪ ಹೊತ್ತಿಸುವುದೂ ಹೂ ಸಮರ್ಪಿಸುವುದೂ ಗಂಟೆ ಮೊಳಗಿಸುವುದೂ ಅಣ್ಣನ ಕೆಲಸವಾಗಿತ್ತು. ಹೂಗಳನ್ನು ಕೊಯ್ಯುವುದು, ದೇವಾಲಯದ ನೆಲವನ್ನು ಗುಡಿಸಿ ಸಾರಿಸುವುದು ಮಾತ್ರ ನನ್ನ ಕೆಲಸವಾಗಿತ್ತು. ಒದ್ದೆ ಬಟ್ಟೆ ಧರಿಸಿ ದೇವಸ್ಥಾನದೊಳಗೆ ಪ್ರವೇಶಿಸಬೇಕೆಂದು ನಾನು ಬಯಸಿದ್ದೆ. ಆದರೆ ಅಜ್ಜಿ ನನಗೆ ಕೆಮ್ಮು ಬಂದೀತು ಎಂದು ಹೇಳಿ ನನ್ನನ್ನು ಆ ಆಲೋಚನೆಯಿಂದ ಹೊರಗಿಟ್ಟರು.

ಪೂಜೆ ಮುಗಿದ ಕೂಡಲೆ ವಿಗ್ರಹವನ್ನು ಹೊರಕ್ಕೆ ತೆಗೆದು ಅದನ್ನು ತಲೆಯಲ್ಲಿಟ್ಟು ದೇವಸ್ಥಾನಕ್ಕೆ ಬಲಿ ಬಂದೆವು. ಅಣ್ಣನ ತಲೆಯಲ್ಲಿದ್ದ ಬುಟ್ಟಿಯಲ್ಲಿ ವಿಗ್ರಹ ನೆಲೆಗೊಂಡಿತ್ತು. ನಾನೂ ಮಾಲತಿಕುಟ್ಟಿಯೂ ಮಾರಾತ್ತಾಟ್ಟಿನ ತಮ್ಮನೂ ತಂಗಂಳೂ ಮಾರಾತ್ತಿನ ರಾಧೆಯೂ ಭಕ್ತಿಗೀತೆಗಳನ್ನು ಹಾಡುತ್ತಾ ಅಣ್ಣನನ್ನು ಹಿಂಬಾಲಿಸಿದರು. ಒಂದು ದಿನ ಮಾವ ನಮ್ಮ ದೇವಸ್ಥಾನಕ್ಕೆ ಬಂದರು. ಅವರು ನೈವೇದ್ಯ ಪ್ರಸಾದವಾಗಿದ್ದ ಬಾಳೆಹಣ್ಣನ್ನು ತಿಂದರು ಕೂಡ.

ಚಕ್ರಪಾಣಿ ಎಂಬುದು ವಿಷ್ಣುವಿನ ಒಂದು ಪರ್ಯಾಯ ಹೆಸರು ಎಂದು ಮಾವ ನನಗೆ ಹೇಳಿಕೊಟ್ಟರು. ಅಲ್ಲಿಯವರೆಗೆ ಚಕ್ರಪಾಣಿ ಎಂದರೆ ಹೊಸತೊಂದು ದೇವರೆಂದು ನಾನು ಭಾವಿಸಿದ್ದೆ.

ಚಕ್ರಪಾಣಿಯ ದೇವಸ್ಥಾನದಲ್ಲಿ ನೈವೇದ್ಯಕ್ಕೆಂದು ಕೊಬ್ಬರಿಯನ್ನೂ ಹೊದುಳನ್ನೂ ನಮಗೆ ಮಾರಾತ್ತಾಟ್ಟಿನ ಅತ್ತೆಯವರು ಕೊಡುತ್ತಿದ್ದರು. ಹಿರಿಯರಲ್ಲಿ ಅತ್ತೆಯವರು ಮಾತ್ರವೇ ನಮ್ಮ ಕ್ಷೇತ್ರವನ್ನು ಒಂದು ದೇವಾಲಯ ಎಂಬುದಾಗಿ ಲೆಕ್ಕಕ್ಕೆ ತೆಗದುಕೊಂಡದ್ದು. ಅತ್ತೆ ಮಾತ್ರವೇ ಗುಟ್ಟಾಗಿಯಾದರೂ ಚಕ್ರಪಾಣಿಗೆ ಹಣ್ಣುಕಾಯಿಗಳನ್ನು ಹರಕೆ ಹೊತ್ತದ್ದು.

ಅತ್ತೆ ಪಳಯನ್ನೂರ್ ಎಂಬ ಪಾಲ್ಘಾಟಿನ ಗ್ರಾಮದಲ್ಲಿ ಜನಿಸಿದವರಾಗಿದ್ದರು. ಅವರ ನಿಜವಾದ ಹೆಸರು ಮೂಕಾಂಬಿ ಎಂದಾಗಿತ್ತು. ಅಂಬಾಳತ್ತಿನ ಕಲ್ಯಾಣಿಯಮ್ಮಯ ಸಹೋದರ ಕರುಣಾಕರ ಮೆನೋನ್ ತನ್ನ ಏಕಾಂತವನ್ನು ಕೊನೆಗೊಳಿಸಲೆಂದು ಮೂಕಾಂಬಿಯಮ್ಮಯನ್ನು ಮದುವೆ ಮಾಡಿ

ಪುನ್ನಯೂರ್‌ಕುಳಕ್ಕೆ ಕರೆತಂದಿದ್ದರು. ಅವರಿಗಾಗಿ ಮಾಡಿಕೊಟ್ಟ ಮನೆಯಾಗಿತ್ತು. ಮಾರಾತ್ತಾಟ್ಟು ಮನೆ. ಪುನ್ನಯೂರ್‌ಕುಳದ ಮತ್ಯಾವುದೇ ಮನೆಯಲ್ಲಿ ಕಾಣಸಿಗದ ಶುಚಿಯೂ ಅಚ್ಚುಕಟ್ಟೂ ಮಾರಾತ್ತಾಟ್ಟಿನಲ್ಲಿ ಇತ್ತು. ಹಟ್ಟಿಯ ದಿಣ್ಣೆಯನ್ನು ಕೂಡ ಎಲ್ಲಾ ದಿವಸವೂ ತೊಳೆದು ಶುಚಿಗೊಳಿಸುವುದು ಅತ್ತೆಯ ಅಭ್ಯಾಸವಾಗಿತ್ತು. ಕೆಲಸದವರಿಂದ ಕೆಲಸಮಾಡಿಸಿ ನಾವು ವಿಶ್ರಮಿಸುವ ಎಂಬ ಕ್ರಮ ಉಳಿದ ಮನೆಗಳ ಹಂಗಸರದ್ದು. ಅತ್ತೆ ಯಾವತ್ತೂ ವಿಶ್ರಾಂತಿ ಪಡೆಯಲಿಲ್ಲ. ಸಂಜೆಗೆ ಬತ್ತಿ ಹೊಸೆಯುವಾಗ ಅವರ ಸಪೂರ ಕಾಲುಗಳಿಗೆ ಸ್ವಲ್ಪ ವಿಶ್ರಾಂತಿ ಲಭಿಸುತ್ತಿತ್ತು. ಬತ್ತಿ ಹೊಸೆಯುವಾಗಲೂ ಅವರು ರಾಮಾಯಣವನ್ನು ಹಾಡುತ್ತಿದ್ದರು.

ಹಣ್ಣುಕಾಯಿಗೆ ಒಂದು ಗಡಿ ಕೊಬರಿ ಕೊಡುವಾಗ ಅತ್ತೆ ಹೇಳಿದರು: 'ತಂಗಪ್ಪನಿಗೆ ಹೊಟ್ಟೆ ನೋವು ಹೋಗ್ಲಿಕ್ಕೆ.'

ತಂಗಪ್ಪ ಎಂಬುದಾಗಿ ಅತ್ತೆ ಕರೆಯುತ್ತಿದ್ದ ಶಂಕರನ್ ನಾಯರ್ ಅತ್ತೆಯ ಹಿರಿಯ ಮಗನಾಗಿದ್ದ. ಆತ ವೀಳ್ಯ ತಿಂದು ಕೆಂಪಾದ ಹಲ್ಲುಗಳನ್ನು ತೋರಿಸುತ್ತ ನಗುತ್ತಿದ್ದ. ಮಕ್ಕಳನ್ನು ನೋಡಿದಾಗ, ಮುಂಡಪ್ಪ ಮಾವಿನ ಬೆಳೆದ ಕಾಯಿಗಳಿದ್ದರೆ ಕಲ್ಲೆಸೆದು ಬೀಳಿಸಿ ತಿನ್ನುವುದಕ್ಕೆ ಅನುಮತಿ ನೀಡುತ್ತಿದ್ದ. ಮಾರಾತ್ತಾಟ್ಟಿನ ಮಾಳಿಗೆಯಲ್ಲಿ ಒಂದು ವರಾಂದವೂ ಕತ್ತಲೆಯಿಂದ ಕೂಡಿದ ಒಂದು ಮಲಗುವ ಕೋಣೆಯೂ ಒಂದು ದೊಡ್ಡ ಅಂಗಣವೂ ಇತ್ತು. ಕೆಳಗೆ ತೆಂಕುಭಾಗದಲ್ಲಿ ಒಂದು ತೂಗು ಮಂಚವನ್ನು ತೂಗಿಸಿದ್ದರು. ಅದರ ಮೇಲೆ ಕುಳಿತು ಗೋಡೆಮೆಟ್ಟಿ ಹಾರಿ ಕುದುರೆಸವಾರಿ ನಡೆಸುತ್ತಿದ್ದೇವೆಂದು ಭ್ರಮಿಸುವುದು ನಮ್ಮ ಪ್ರಮುಖ ವಿನೋದಗಳಲ್ಲಿ ಒಂದಾಗಿತ್ತು.

'ಗೋಡೆ ಬೀಳಿಸ್ಬೇಡಿ' ಶಂಕರನ್‌ನಾಯರ್‌ರ ಹೆಂಡತಿಯಾದ ಓಪ್ಪು ಎಂದು ಕರೆಯಲ್ಪಡುವ ಜಾನಕಿಯಮ್ಮ ಎಡೆಗೆಡೆಗೆ ಪಣೆಮೆಟ್ಟಲುಗಳನ್ನು ವೇಗವಾಗಿ ಹತ್ತಿ ಬಂದು ವಿನಂತಿಸುತ್ತಿದ್ದರು. ನಮ್ಮ ಕಾಲಡಿಯ ಕೆಸರೂ ಮಣ್ಣೂ ಮಾರಾತ್ತಾಟ್ಟಿನ ಗೋಡೆಗಳಲ್ಲಿ ಮುದ್ರೆಯೊತ್ತುತ್ತಿದ್ದವು.

ಆಟ ಮುಗಿಸಿ ಕೆಳಗಿಳಿದ ಕೂಡಲೆ ಅತ್ತೆ ಕೇಳುತ್ತಿದ್ದರು:

'ಗೋಡೆ ಬೀಳಿಸ್ಲಿಲ್ಲಲ್ಲ.'

'ಇಲ್ಲ.'

'ಒಳ್ಳೆ ಮಕ್ಕಾಗಿ ಬೆಳೀಬೇಕು.'

'ಆಗ್ಲೋದು.'

ಚಕ್ರಪಾಣಿ ದೇವಾಲಯದ ಶಾಶ್ವತ ಭಕ್ತರೆಂದರೆ ತಮ್ಮನೂ ತಂಗಂಳೂ ಮಾಲತಿಕುಟ್ಟಿಯೂ ಮಾರಾತ್ತಿನ ರಾಧೆಯೂ ಆಗಿದ್ದರು. ಬಾಕಿಯಿರುವವರೆಲ್ಲ ಆ ದೇಗುಲವನ್ನು ಕಿರುಮನೆ ಎಂದು ಕರೆದರು. ಕೆಲವರು ಗಟ್ಟಿಯಾಗಿ 'ಮಕ್ಕೆ, ನಿಮ್ಮ ಚಕ್ರಪಾಣಿ ಎಲ್ಲಿ?' ಎಂದು ಕರೆದು ಕೇಳುತ್ತಿದ್ದರು. ನಮ್ಮ ಪ್ರತಿಷ್ಠೆಯನ್ನು ಅವಮಾನಿಸುವುದಕ್ಕೂ ಪ್ರಯತ್ನಿಸಿದರು.

ಚಕ್ರಪಾಣಿಗೆ ನಾನು ರೆಂಜೆ ಹೂವಿನ ಮಾಲೆಗಳನ್ನು ತೊಡಿಸಿದೆ. ಪಾರಿಜಾತವನ್ನೂ, ದುಂಡುಮಲ್ಲಿಗೆಯನ್ನೂ ರಾಶಿಯಾಗಿ ಹರಡಿದೆ. ಅಣ್ಣ ಕರ್ಪೂರ ಹೊತ್ತಿಸಿ ಪೂಜೆ ಮಾಡಿದ.

'ಕಿರುಮನೇ ಒಳ್ಗೆ ಎಂಥದ್ದೂ ಇಲ್ಲ. ಅಲ್ಲಿ ದೇವರು ಬಂದು ಕೂತ್ಕೊಳ್ಳಿಕ್ಕಿಲ್ಲ' ಅಂಬಾಳತ್ತಿನ ಉಣ್ಣಿಯಣ್ಣ ಒಮ್ಮೆ ಹೇಳಿದ.

ದೇವರನ್ನು ಪ್ರತಿಷ್ಠಾಪಿಸಬೇಕಿದ್ದರೆ ಬ್ರಾಹ್ಮಣನನ್ನು ಮೊದಲು ಕರೆಸಬೇಕೆಂದು ಮಡಪ್ಪಿಲಾಯಿಯ ಶಂಕುಣ್ಣಿ ನಾಯರ್ ಹೇಳಿದರು.

'ಆವಾಹಿಸಿ ತರ್ಬೇಕು. ನಾವು ನಾಯರ್ ಜಾತಿಯೋರಲ್ವ ? ದೇವರನ್ನು ನಮಗೆ ಆವಾಹಿಸಿ ತರ್ಲಿಕ್ಕೆ ಸಾಧ್ಯವಾ ? ಇಲ್ಲ ಮಗೂ, ಅದಕ್ಕೆ ನಂಬೂರಿಗಳೇ ಬೇಕು.'

'ಎಲ್ಲಿಂದ ಆವಾಹಿಸಿ ತರೋದು ?' ನಾನು ಆ ವೃದ್ಧನೊಂದಿಗೆ ಕೇಳಿದೆ.

'ಯಾವುದಾದರೂ ದೇವಾಲಯದಿಂದ ಆವಾಹಿಸ್ಬೇಕು. ಶಿವನಾಗಿದ್ರೆ ವೈಕದಿಂದ ಇಲ್ಲಿದ್ರೆ ಕಾಶಿಯಿಂದ. ವಿಷ್ಣು ಆಗಿದ್ರೆ ಗುರುವಾಯೂರಿನಿಂದ. ಅಲ್ಲಿದ್ರೆ ನಮ್ಮ ಗೋಯಿನೋರಿನಿಂದ. ಯಾರಿಗೂ ಗೊತ್ತಾಗದಾಗೆ ತರ್ಬೇಕು. ಎಲಿಯಜಾಟ್ಟಿನ ಬೇಟೆಗಾರನನ್ನು ಒಂದು ಕೊಡೆಯಲ್ಲಿ ಆವಾಹಿಸಿ ತಂದದ್ದೂಂತ ಕೇಳಿದ್ದೇನೆ. ಸರಿಯಾಗಿಬರ್ೋದು. ನಾ ಕೇಳ್ಳಿಕ್ಕೆ ಹೋಗ್ಲಿಲ್ಲ. ಚಿನ್ನ ಕರಗಿಸೋವಲ್ಲಿ ಬೆಕ್ಕಿಗೆಂತ ಕೆಲಸ ಎಂದು ಹಿಂದೊಬ್ರು ಹೇಳಿದಾಗೆ ನಂಗೆ ಅದೆಲ್ಲ ಕೇಳಿ ಎಂತಾಗ್ಬೇಕು ? ದೊಡ್ಡ ದೊಡ್ಡ ಸಂಗ್ತಿಯಲ್ಲೆಲ್ಲ ನಾನು ತಲೆ ಹಾಕ್ಲಿಕ್ಕಿಲ್ಲ. ನಂಗೆ ತೆಂಗಿಗತ್ತಿಸೋ ಕೆಲ್ಸ ಕೊಟ್ಟಿದ್ದಾರೆ. ಅದ್ರಾಚೆ ನೋಡ್ಕೊಳಿಕ್ಕೆ ನನ್ನಿಂದಾಕ್ಲಿಲ್ಲ. ನೀ ಯಾವುದಾದ್ರೂ ನಂಬೂರಿಗಳತ್ರ ಕೇಳಿ ನೋಡಿದ್ಯಾ ? ನಂಬೂರಿಗಳಿಗ್ಗೊತ್ತಿಲ್ದ ವಿದ್ಯೆಯಿಲ್ಲ. ಅವರು ದೇವರನ್ನು ಆವಾಹಿಸಿ ತಂದಾರು. ಸಾಕ್ಷಾತ್ ಗುರುವಾಯೂರಪ್ಪನನ್ನು ಆವಾಹಿಸಿ ತರ್ಲಿಕ್ಕೆ ನಂಬೂರಿಗಳಿಗೆ ಕೂಡೀತು.'

ಮಾವನನ್ನು ಕಾಣಲು ಶ್ರೀ ಪಿ.ಟಿ. ಭಟ್ಟಾದಿರಿಪ್ಪಾಡ್ ಬಂದಾಗ ನನಗೆ ಶಂಕುಣ್ಣಿ ನಾಯರ್ ಹೇಳಿದ ವಿಚಾರ ನೆನಪಿಗೆ ಬಂತು. ಒಂದು ದಿವಸ ಮುಂಜಾನೆ ಪಿ.ಟಿ. ಪಡುದಿಕ್ಕಿನ ಹಿತ್ತಿಲಿನಲ್ಲಿರುವ ಸಂಡಾಸಕ್ಕೆ ಹೋಗಿ ಬರುವಾಗ ನಾನು ಅವರನ್ನು ಕೇಳಿದೆ:

'ನಮ್ಮ ದೇವಸ್ಥಾನ ನೋಡೋದಿಲ್ವೆ ? ಚಕ್ರಪಾಣೀಂತ ಹೆಸರಿರೋ ದೇವ್ರು ಅದ್ರೊಳಗಿದ್ದಾನೆ.'

ಪಿ.ಟಿ. ದೇವಸ್ಥಾನದ ಬಾಗಿಲಲ್ಲಿ ನಿಂತು ಬಗ್ಗಿ ಒಳಗಿನ ಕತ್ತಲೆಯ ಕಡೆಗೆ ನೋಡಿದರು.

'ಆ ಕೂತ ಚತುರನಾ ಚಕ್ರಪಾಣಿ ?' ಅವರು ನನ್ನೊಂದಿಗೆ ಹೇಳಿದರು.

'ಒಳ್ಳೆ ಶಕ್ತಿಯಿರೋ ದೇವರು. ಅಸೌಖ್ಯ ನೀಗಿಸ್ತಾನೆ. ಪರೀಕ್ಷೆಯಲ್ಲಿ ಗೆಲ್ಲಿಸ್ತಾನೆ.'

ಪಿ.ಟಿ. ಗಟ್ಟಿಯಾಗಿ ನಕ್ಕರು. ಅವರೊಂದಿಗೆ ಎಲ್ಲಿಂದಾದರೂ ದೇವರನ್ನು ಆವಾಹಿಸಿ ತಂದುಕೊಡಬೇಕೆಂದು ಕೇಳಿಕೊಳ್ಳಬಯಸಿದೆ. ಆದರೆ ಅವರ ನಗೆ ನನ್ನ ಧೈರ್ಯ ಕೆಡಿಸಿತು.

ಪಿ.ಟಿ. ಒಂದು ಖಾದಿ ಮುಂಡನ್ನೂ ತುಸು ವಯಲೆಟ್ ಬಣ್ಣದ ಅರ್ಧ ಕೈಯ ಖಾದಿ ಅಂಗಿಯನ್ನೂ ಧರಿಸಿದ್ದರು. ಆ ಅಂಗಿಯಲ್ಲಿ ಬೆಳಗಿನ ಸಪೂರವಾದ ಗೆರೆಗಳಿದ್ದವು. ಅವರು ಕಪ್ಪಗೆ ಸಪೂರಕ್ಕೆ ಎತ್ತರ ಕಡಿಮೆಯ ಒರ್ವ ವ್ಯಕ್ತಿಯಾಗಿದ್ದರು. ಹಾಗಿದ್ದೂ ಅವರು ನಮ್ಮ ದೇವಸ್ಥಾನದ ಮೆಟ್ಟಿಲಲ್ಲಿ ಬೇಕಾದ್ದಕ್ಕಿಂತ ಹೆಚ್ಚು ಬಗ್ಗಿದರು.

'ಪರೀಕ್ಷೆ ಬರೀಲಿಕ್ಕೆ ಸಂದರ್ಭ ಸಿಕ್ಕಿದ್ರೆ ಬರ್ತೇನೆ ?' ವಿ.ಟಿ. ಹೇಳಿದರು. ಆಮೇಲೆ ವಿಶೇಷವಾದ ಒಂದು ನಗೆಚಾಟಿಕೆ ಬೀಸಿದವರ ಹಾಗೆ ಅಭಿನಯಿಸಿ ಗಟ್ಟಿಯಾಗಿ ನಕ್ಕರು. ಅವರ ಹಲ್ಲಿನಲ್ಲಿ ವೀಳ್ಯದೆಲೆಯ ಕಲೆಗಳಿದ್ದವು. ಅಜ್ಜಿಯೊಂದಿಗೆ ನಾನು ನನ್ನ ಆಶೆಯನ್ನು ವ್ಯಕ್ತಪಡಿಸಿದಾಗ ಅವರು ಹೇಳಿದರು: ವಿ.ಟಿ. ಅದ್ರಲ್ಲೆಲ್ಲಾ ನಂಬಿಕೆಯಿಲ್ಲದ ಜನ. ಅವರತ್ರ ಹೇಳಿ ಫಲವಿಲ್ಲ. ವಿ.ಟಿ.ಗೆ ಜನಿವಾರವೂ ಇರ್ಲಿಕ್ಕಿಲ್ಲಾಂತ ತೋರ್ತದೆ. ಪ್ರತಿಷ್ಠೆ ಮಾಡ್ಲಿಕ್ಕೆ ಗಟ್ಟಿಯಾದ ದೈವ ವಿಶ್ವಾಸವಿರೋ ಒಬ್ರನ್ನು ಕಂಡು ಹಿಡೀಬೇಕು ?'

ಮಾರನೇ ದಿವಸ ಮಾರಾತ್ತಾಟ್ಟಿನ ಅತ್ತೆ ಹೇಳಿದರು: 'ಕಮಲೆಗೂ ಉಣ್ಣಿಗೂ ನಂಬಿಕೆಯುಂಟು. ಅದು ಸಾಕು. ಚಕ್ರಪಾಣಿ ನಿಜವಾದ ದೇವರೇಯ. ನಂಬಿಕೆ ಇರೋವ್ರು ಪ್ರತಿಷ್ಠಾಪಿಸಿದ ವಿಗ್ರಹಕ್ಕೆ ಶಕ್ತಿ ಇರ್ತದೆ.'

'ಕೆಂಪು ದಾಸವಾಳದಿಂದ ಪೂಜೆ ಮಾಡಿದ್ರೆ ಸಾಕು ಮಗು,' ದೇವಕಿ ಹೇಳಿದಳು: 'ಕೆಂಪು ಹೂ ಹಾಕಿದರೆ ಶಕ್ತಿ ಜಾಸ್ತಿಯಾಗ್ತದೆ. ಮತ್ತೆ ಇನ್ನೊಂದು ಸಂಗತಿಯುಂಟು. ಹೂ ಹಾಕ್ತಾ ಇದ್ರೆ ಶಕ್ತಿ ಜಾಸ್ತಿಯಾಗ್ತಾ ಹೋಗ್ತದೆ. ಆಮೇಲೆ ಹಿಡಿದ್ರೆ ಸಿಗಲಿಕ್ಕಿಲ್ಲ ಮಗು. ನಿಮ್ಮ ಶತ್ರುಗಳು ಒಬ್ಬೊಬ್ರಾಗಿ ನಾಶವಾಗ್ತಾರೆ. ಆಗ ಗೊತ್ತಾದೀತು ಎಷ್ಟು ಶಕ್ತಿಯುಂಟೂಂತ.'

'ಯಾರು ನನ್ನ ಶತ್ರು ?'

'ನಿಮ್ಗೆ ಯಾರ ಹೆಸ್ರೂ ನೆಂಪಿಲ್ವಾ ? ನಿಮ್ಗೆ ತೊಂದ್ರೆ ಮಾಡೋರೆಲ್ಲ ನನ್ನ ಲೆಕ್ಕದಲ್ಲಿ ಶತ್ರುಗಳೆ. ನಿಮ್ಮನ್ನು ಬಯ್ಯೋ ಮಾಷ್ಟರು. ಬೆಂಚಿನ್ಮೇಲೆ ಹತ್ತಿಸಿದ ಟೀಚರ್ನೋರು. ಅವ್ರೆಲ್ಲಾ ನಿಮ್ಮ ಶತ್ರುಗಳು ಮಗು. ನೀವೊಮ್ಮೆ ಮನಸ್ಸಿಟ್ಟು ಪ್ರಾರ್ಥನೆ ಮಾಡಿದ್ರೆ ಒಬ್ಬೊಬ್ರೇ ಸಾಯೋದು ನೋಡ್ಬೋದು. ಕೊನೆಗೆ ಈ ಲೋಕದಲ್ಲಿ ನಿಮ್ಗೆ ಒಂದೇ ಒಂದು ಶತ್ರು ಕೂಡ ಇರ್ಲಿಕ್ಕಿಲ್ಲ.'

'ನಂಗೆ ಯಾರೂ ಸಾಯೋದು ಇಷ್ಟವಿಲ್ಲ.'

'ನನ್ನ ಮೂಕೋಲಿನ ಭಗೋತಿ, ಈ ಮಗೂಗೆ ಹೇಳಿ ಅರ್ಥ ಮಾಡಿಸ್ಲಿಕ್ಕೆ ನಂಗಾಗಲ್ಲಪ್ಪ. ಶತ್ರುಗಳನ್ನು ಕರ್ದು ಮಡಿಲಲ್ಲಿ ಕೂರ್ಸಿಕೊಳ್ಳಿ. ನಂಗೆಂತ ನಷ್ಟ ? ನಿಮ್ಗೆ ಒಳ್ಳೇದಾಗ್ಲೀಂತ ನಾನೊಂದು ಉಪಾಯ ಹೇಳಿಕೊಟ್ಟದ್ದು. ದಾಸವಾಳ ಹೂ ಅಂತಂದ್ರೆ ರಕ್ತಪುಷ್ಪ. ರಕ್ತಪುಷ್ಪಾಂಜಲಿ ಮಾಡಿದ್ರೆ ಶತ್ರುಗಳು ಸತ್ಹೋಗ್ತಾರೆ. ನಿಮ್ಗೆ ನೆಮ್ಮದಿ ಸಿಕ್ಲೀಂತೇಳಿ ನಾಯೇಳಿದ್ದು. ನಿಮ್ಗೆ ಶತ್ರುಗಳೇ ಇಷ್ಟ. ನನ್ನನ್ನ ಕಂಡ್ರಾಗೋದಿಲ್ಲ. ನಿಮ್ಮನ್ನು ಪ್ರೀತಿ ಮಾಡೋಯರ್ನಾರೂ ನಿಮ್ಗಿಷ್ಟಾಗೋದಿಲ್ಲ. ನನ್ನ ದುಃಖವನ್ನು ನಾಯಾರತ್ರೇಳ್ಳಿ ? ನಿಮ್ಮನ್ಯಾರಾದ್ರೂ ಬೆಂಚಿನ್ಮೇಲೆ ನಿಲ್ಸಿದ್ರೆ ನನ್ನ ಎದೆ ಒಡ್ದೋದೀತು ಮಗೂ. ನಿಮ್ಗದು ಗೊತ್ತುಂಟಾ ?'

ದೇವಕಿಯ ಕಣ್ಣೀರು ಅವಳ ಕಪೋಲದಿಂದ ಹರಿದು ನನ್ನ ಹಣೆಯ ಮೇಲೆ ಬಿತ್ತು. ನನಗೂ ಕಾರಣವಿಲ್ಲದ ದುಃಖವೊಂದು ಅನುಭವಕ್ಕೆ ಬಂತು.

# ಪ್ರಾದೇಶಿಕ ಪದಕೋಶ

ಅತ್ತಾಗುಂಟು = ಅತ್ತ ಹಾಗೆ ಉಂಟು
ಇಕ್‌ನೇಸ್ = ಡೋಂಗಿ
ಉಮ್ಮ = ಮುಸ್ಲಿಂ ಹೆಂಗಸು
ಉರುಳಿ = ಬಾಣಲೆ ಆಕಾರದ ಉರುಟು ಆಕೃತಿಯ ತಿಂಡಿ ಕರಿಯುವ ಪಾತ್ರೆ
ಎಂತೋ = ಎಂತಹುದೋ
ಒಟ್ಟೆ = ತೂತು
ಕಿಸೆ = ಅಬದ್ಧ ಮಾತುಗಳು
ಕುತ್ತಿ = ಬುಡ ಮಾತ್ರ ಉಳಿದಿರುವ
ಕುತ್ತು = ಚುಚ್ಚು
ಕುದಿರವಟ್ಟ = ಕೇರಳದ ಪ್ರಸಿದ್ಧ ಹುಚ್ಚರಾಸ್ಪತ್ರೆ ಇರುವ ಜಾಗ
ಕುಸಿ = ಖುಷಿ
ಕುಳೂಸ್/ಶ್ = ಸುಳ್ಳು
ಕೆಣೆ = ಧೋಂಗಿ
ಕೆಣೆಯುನ್ = ಧೋಂಗಿ ಮಾಡುವವ
ಕೆಪ್ಪಟೆ = ಕೆನ್ನೆ
ಕೊಂಞಾನ = ನಾಲಗೆಯಲ್ಲಿ ಕೊಚ ಕೊಚ ಶಬ್ದ ಮಾಡುವುದು, ಗೇಲಿ
ಕೊದ್ದೆಲ್ = ಒಂದು ಬಗೆಯ ಮುದ್ದೆ ಮೇಲೋಗರ
ಕೊಂಗ = ಪೆದ್ದ
ಚಙಾಯಿ = ಗೆಳೆತನ, ಗೆಳೆಯ
ಚುಕ್ಕು = ಕುಡಿಯುವ ನೀರಿಗೆ ಬೆರೆಸುವ ಆಯುರ್ವೇದ ಔಷಧ
ಚೆಂಡ್ಲಕಾಯಿ = ತೆಂಡಿಲ್, ಬನ್ನಂಗಾಯಿಗಿಂತ ಮೊದಲರೂಪ
ಚೆಪ್ಪಡಿ = ಚಿಲ್ಲರೆ
ಡಬ್ಬರ್ = ರಬ್ಬರ್
ದಾಕುದಾರ್ರು = ಡಾಕ್ಟರ್
ದೊಂಡೆ = ಗಂಟಲು
ನಾಯರಾಚಿ = ನಾಯರ್ ಜಾತಿಯ ಹೆಂಗಸು
ಪವ್ವರ್ = ಪವರ್, ಶಕ್ತಿ
ಪಿಸುರು = ಕಿರಿಕಿರಿ
ಪಿಟ್ಟಾಸಿ = ಜಿಪುಣ, ಆಸೆಬುರುಕ
ಪೊಟ್ಟ = ಮೂಗಿ
ಪ್ರೇಜನ = ಪ್ರಯೋಜನ
ಬಂಗುಡೆ = ಒಂದು ಬಗೆಯ ಮೀನು
ಬನ್ನಂಗಾಯಿ = ಎಳನೀರಿನ ನಂತರದ ಹಾಗೂ ತೆಂಗಿನಕಾಯಿಯ ಮೊದಲಿನ ಹಂತ
ಬರಿಕೆ ಹಲಸು = ಗಟ್ಟಿ ತೊಳೆಯ ಹಲಸು
ಬಲಿ = ಪ್ರದಕ್ಷಿಣೆ ಬರು
ಭಗೋತಿ = ಭಗವತಿ
ಬೂತಾಯಿ = ಒಂದು ಬಗೆಯ ಮೀನು
ಬೈರಾಸು = ಮೈ ಒರಸುವ ಬಟ್ಟೆ
ಬೋಳ = ಬುದ್ಧಿಹೀನ, ಪೆದ್ದ
ಮಂಗಣೆ ಮಾಡು = ಚೆಲ್ಲುಚೆಲ್ಲಾಗಿ ವರ್ತಿಸು
ಮುಕ್ಕಾರು = ಲೇವಡಿ
ಮುಂಡು = ಪಂಚೆ
ಮುಕ್ಕಾಲು = ಕಾಲಾಣೆ

ಸಾತ್ತಿಕ = ಸಾತ್ವಿಕ
ಸೋದ್ರಿ = ಸಹೋದರಿ
ಶತ್ತು = ಸತ್ತು
ಶೇಲೆಮಾಡು = ಲಲ್ಲೆಗರೆ
ಶುತ್ತು = ಸುತ್ತು
ಷಾಟಾಯ್ತು = ಸ್ಟಾರ್ಟ್ ಆಯಿತು
ರಟ್ಟು = ಹಾರು, ಚಿಮ್ಮು
ರಾವ್ಕೆ = ರವಿಕೆ
ಲಚ್ಚುಮಿ/ಎಚ್ಚುಮಿ= ಲಕ್ಷ್ಮಿ
ಲೊಟ್ಟೆ = ಬಡಾಯಿ
ಹಟ್ಟಿ = ದನದ ಕೊಟ್ಟಿಗೆ
ಹಲ್ಕತ್ತು = ಕಿವಿಯ ಆಭರಣ
ಹಾಂಕಾರ = ಅಹಂಕಾರ
ಹಾಳ್ತಕ್ಕಾ ? = ಅಳತೆಗಾ ?
ಹಿಡಿಸೂಡಿ = ಪೊರಕೆ
ಹುಡಿ = ನಶ್ಯ
ಹೊಂತದೆ = ಹೊಂದುತ್ತದೆ
ಹೊರ್ಕಟೆ = ಮಲವಿಸರ್ಜನೆ

Lasertypeset at Laser Line Graphic and
printed at Shivam Offset Press, New Delhi-110 028